KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೨ | ಬೆಂಗಳೂರು, ಗುರುವಾರ, ಡಿಸೆಂಬರ್ ೧೩, ೨೦೦೭ (ಮಾರ್ಗಶಿರ ೨೨, ಶಕ ವರ್ಷ ೧೯೨೯) | ಸಂಚಿಕೆ ೪೯ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ:** ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಸಂಬಂಧಪಟ್ಟಂತೆ 2007–08ನೇ ಸಾಲಿನ ಆಯವ್ಯಯದಲ್ಲಿ ಪ್ರಕಟಿಸಿ ಹಂಚಿಕೆ ಮಾಡಲಾದ ಹೊಸ ಯೋಜನೆಗಳಿಗೆ ಅನುಮೋದನೆ ನೀಡುವ ಬಗ್ಗೆ

**ಓದಲಾಗಿದೆ:** ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ಪತ್ರ ಸಂಖ್ಯೆ: ಕಸನಿ 3/ಲೆಕ್ಕ–4/2007–08 ದಿನಾಂಕ 25–6–2007.

**ಪ್ರಸ್ತಾವನೆ:**

ಮಾನ್ಯ ಉಪಮುಖ್ಯಮಂತ್ರಿಗಳು 2007–08ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಸಂಬಂಧಪಟ್ಟಂತೆ ಈ ಕೆಳಕಂಡ ಹೊಸ ಯೋಜನೆಗಳನ್ನು ಪ್ರಕಟಿಸಿದ್ದರು.

1. ಯಕ್ಷಗಾನ ಅಕಾಡೆಮಿ ಸ್ಥಾಪನೆ
2. ಶ್ರೀಮತಿ ಗಂಗೂಬಾಯಿ ಹಾನಗಲ್ ಅವರ ನಿವಾಸ ದುರಸ್ತಿ ಮತ್ತು ನವೀಕರಣ
3. ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸಿರುವ ವಿಶ್ವಕೋಶದ 14 ಸಂಪುಟಗಳ ಮರುಮುದ್ರಣ ಹಾಗೂ ಬಿ.ಎಲ್.ರೈಸ್ ಅವರ ಎಪಿಗ್ರಫಿ ಆಫ್ ಕರ್ನಾಟಕದ (ಶಾಸನಗಳು) ಮರುಮುದ್ರಣ
4. ಉಡುಪಿಯಲ್ಲಿ ಕನಕದಾಸರ ಸಂಶೋಧನ ಕೇಂದ್ರ ಸ್ಥಾಪನೆ
5. ಹಾವೇರಿಯಲ್ಲಿ ಸರ್ವಜ್ಞ ಸ್ಮಾರಕ ಭವನ ನಿರ್ಮಾಣ
6. ಬೆಂಗಳೂರು ನಗರ ಇತಿಹಾಸವನ್ನು ಬಿಂಬಿಸುವ ಮೂಸಿಯಂ ಸ್ಥಾಪನೆಗೆ ಕೆಂಪೇಗೌಡ ಪ್ರತಿಷ್ಠಾನಕ್ಕೆ ಅನುದಾನ
7. ರಾಷ್ಟ್ರಕವಿ ಡಾ॥ ಜಿ.ಎಸ್.ಶಿವರುದ್ರಪ್ಪ ಅವರ ಸಮಗ್ರ ಕೃತಿಗಳ ಮುದ್ರಣ
8. ಟಿ.ಎಸ್.ವೆಂಕಣ್ಣಯ್ಯನವರ ಜನ್ಮಸ್ಥಳ ಚಿತ್ರದುರ್ಗ ಜಿಲ್ಲೆ ತಳುಕು ಗ್ರಾಮದ ಅಭಿವೃದ್ಧಿಗೆ ಅನುದಾನ
9. ಕಾಸರಗೋಡು ಗುರುಭವನಕ್ಕೆ ಅನುದಾನ
10. ಡಾ॥ ದ.ರಾ.ಬೇಂದ್ರೆ ಟ್ರಸ್ಟ್, ಡಾ॥ ಪು.ತಿ.ನ ಗ್ರಂಥಾಲಯ ಅಧ್ಯಯನ ಕೇಂದ್ರ ಹಾಗೂ ಡಾ॥ ಮಾಸ್ತಿ ವೆಂಕಟೇಶ್ ಅಯ್ಯಂಗಾರ್ ಟ್ರಸ್ಟ್‌ಗಳಿಗೆ ಅನುದಾನ
11. ಹಂಪಿ ಉತ್ಸವ ಆಚರಣೆಗೆ ಅನುದಾನ
12. ಹುಬ್ಬಳ್ಳಿಯ ಶ್ರೀ ಸಿದ್ಧಾರೂಢ ದರ್ಶನ ಮಠ ಅಭಿವೃದ್ಧಿಗೆ ಅನುದಾನ
13. ಕರ್ನಾಟಕ ಜಾನಪದ ಪರಿಷತ್ತಿಗೆ ಅನುದಾನ
14. ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು–ವಾರ್ಷಿಕ ಅನುದಾನ
15. ಬಿ.ಎಂ.ಶ್ರೀ ಪ್ರತಿಷ್ಠಾನ, ಬೆಂಗಳೂರು–ಅನುದಾನ
16. ಹೊಳೆಆಲೂರು ಅಭಿವೃದ್ಧಿ ಮತ್ತು ಆಲೂರು ವೆಂಕಟರಾಯರ ಸ್ಮಾರಕ ನಿರ್ಮಾಣ
17. ಉಡುಪಿಯಲ್ಲಿ ನಡೆಯುವ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ–ಧನಸಹಾಯ

18. ಕಾದಂಬರಿಕಾರ ಅ.ನ.ಕೃ. ಅವರ ನಿವಾಸವನ್ನು ಸ್ಮಾರಕವಾಗಿ ಪರಿವರ್ತಿಸುವ ಕಾರ್ಯಕ್ರಮ
19. ಕನ್ನಡ ಅಭಿವೃದ್ಧಿ ಪ್ರಾಧಿಕಾರದ ವಿವಿಧ ಯೋಜನೆಗಳಿಗೆ ಅನುದಾನ ಬಿಡುಗಡೆ
20. ಪಂಜೆಮಂಗೇಶರಾಯರ ಸ್ಮಾರಕ ಭವನ ನಿರ್ಮಾಣ
21. ಡಾ॥ ಬಿ.ಆರ್.ಅಂಬೇಡ್ಕರ್ ಅವರ ಪುಸ್ತಕಗಳ ಪುನರ್‌ಮುದ್ರಣ
22. ಡಾ॥ ದ.ರಾ.ಬೇಂದ್ರೆ ಸಾಹಿತ್ಯ ಮರುಮುದ್ರಣ
23. ಡಾ॥ ಎ.ಆರ್.ಕೃಷ್ಣಶಾಸ್ತ್ರಿಗಳ ಜನ್ಮಸ್ಥಳ ಅಂಬಳೆ ಗ್ರಾಮದ ಅಭಿವೃದ್ಧಿ ಕಾರ್ಯಕ್ಕಾಗಿ
24. ಡಾ॥ ಸಿದ್ಧಯ್ಯ ಪುರಾಣಿಕರ ಸ್ಮಾರಕ ನಿರ್ಮಾಣ
25. ಡಾ॥ ಮಲ್ಲಿಕಾರ್ಜುನ ಮನ್ಸೂರ್ ಟ್ರಸ್ಟಿಗೆ
26. ಸಿದ್ದಗಂಗಾ ಸ್ವಾಮಿಗಳ ಶತಮಾನೋತ್ಸವ ದಾಸೋಹ ಭವನ ನಿರ್ಮಾಣಕ್ಕೆ ಅನುದಾನ
27. ಧಾರವಾಡದ ಸೋಮವಂಶ ಸಹಸ್ರಾರ್ಜುನ ಕ್ಷತ್ರಿಯ ಸಂಶೋಧನಾ ಕಾರ್ಯಕ್ಕೆ ಅನುದಾನ

ಮೇಲಿನಂತೆ ಕ್ರಮ ಕೈಗೊಂಡ ಆಯುಕ್ತರು, ಮೇಲೆ ಓದಲಾದ ದಿನಾಂಕ 25–6–2007ರ ತಮ್ಮ ಪತ್ರದಲ್ಲಿ ಮೇಲಿನ ಯೋಜನೆಗಳನ್ನು ಅನುಮೋದಿಸುವಂತೆ ಕೋರಿ ಪ್ರಸ್ತಾವನೆ ಕಳುಹಿಸಿದ್ದರು. ಇದನ್ನು ಪರಿಶೀಲಿಸಿದ ಸರ್ಕಾರವು ಇವುಗಳಿಗೆ ಅನುಮೋದನೆ ನೀಡಲು ತೀರ್ಮಾನಿಸಿ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 137 ಕಸನಿ 2007, ಬೆಂಗಳೂರು, ದಿನಾಂಕ: 26ನೇ ಜುಲೈ 2007**

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ವತಿಯಿಂದ 2007–08ನೇ ಸಾಲಿನಲ್ಲಿ ಕೈಗೊಳ್ಳಲಾಗುವ ಪ್ರಸ್ತಾವನೆಯಲ್ಲಿ ವಿವರಿಸಲಾದ 27 ಹೊಸ ಯೋಜನೆಗಳಿಗೆ ಸರ್ಕಾರದ ತಾತ್ವಿಕ ಅನುಮೋದನೆಯನ್ನು ಈ ಮೂಲಕ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 1343/ ವೆಚ್ಚ–5/2007 ದಿನಾಂಕ 20–7–2007ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್.ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

ಪಿ.ಆರ್. 1448

**ವಿಷಯ:** ಶ್ರೀಮತಿ ಅಂಜಾದಿ ಬೇಗಂ, ನಿವೃತ್ತ ಪ್ರಥಮ ದರ್ಜೆ ಸಹಾಯಕಿ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಇವರ ವಿರುದ್ಧ ಇಲಾಖಾ ವಿಚಾರಣೆ – ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ

**ಓದಲಾಗಿದೆ:**
1) ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಹೊಸಪೇಟೆ ಅವರ ಪತ್ರ ಸಂಖ್ಯೆ: ಡಿಎಎಂ:ಇಎಸ್‌ಟಿ:1:2002–03 ದಿನಾಂಕ 15–3–2003
2) ಸರ್ಕಾರದ ಆದೇಶ ಸಂಖ್ಯೆ: ಸಂಕಇ 63 ಕೆಎಂಯು 2003 ದಿನಾಂಕ 25–3–2003
3) ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಹೊಸಪೇಟೆ ಅವರ ನೋಟೀಸು ಸಂಖ್ಯೆ: ಡಿಎಎಂ:ಇಎಸ್‌ಟಿ: 1:2:ಇವಿ:2002–03 ದಿನಾಂಕ 5–4–2003
4) ಶ್ರೀಮತಿ ಅಂಜಾದಿ ಬೇಗಂ, ನಿವೃತ್ತ ಪ್ರಥಮ ದರ್ಜೆ ಸಹಾಯಕರು ಅವರ ಲಿಖಿತ ಉತ್ತರ ದಿನಾಂಕ: 19–4–2003
5) ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಅವರ ಆದೇಶ ಸಂಖ್ಯೆ: ಡಿಎಎಂ:ಇಎಸ್‌ಟಿ:1:2:ಇವಿ:2003 ದಿ: 29–4–2003
6) ವಿಚಾರಣಾಧಿಕಾರಿಗಳ ವಿಚಾರಣಾ ವರದಿ ದಿನಾಂಕ: 15–3–2006
7) ಎರಡನೇ ಕಾರಣ ಕೇಳುವ ನೋಟೀಸು ಸಂಖ್ಯೆ: ಸಂಕಇ 63 ಕೆಎಂಯು 2003 ದಿನಾಂಕ: 5.5.2006
8) ಶ್ರೀಮತಿ ಅಂಜಾದಿ ಬೇಗಂ, ನಿವೃತ್ತ ಪ್ರಥಮ ದರ್ಜೆ ಸಹಾಯಕರು ಅವರ ಉತ್ತರ ದಿನಾಂಕ 9.6.2006
9) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ:193: ಸಿಎನ್‌ಎಸ್:06 ದಿನಾಂಕ: 19.2.2007

**ಪ್ರಸ್ತಾವನೆ:**

ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಅವರು ಮೇಲೆ (1)ರಲ್ಲಿ ಓದಲಾದ ದಿನಾಂಕ 15.3.2003ರ ಪತ್ರದಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯದಲ್ಲಿ ದಿನಾಂಕ 9–3–98ರಿಂದ 2–8–99ರ ಅವಧಿಯಲ್ಲಿ ಬಣ್ಣದ ಛಾಯಾಚಿತ್ರ ಕಾರ್ಡುಗಳ ಮಾರಾಟಕ್ಕೆ ಸಂಬಂಧಿಸಿದಂತೆ ಶ್ರೀಮತಿ ಅಂಜಾದಿ ಬೇಗಂ, ನಿವೃತ್ತ ಪ್ರಥಮ ದರ್ಜೆ ಸಹಾಯಕರು ಅವರು ಸರ್ಕಾರಕ್ಕೆ ರೂ.20949/– ನಷ್ಟ ಉಂಟು ಮಾಡಿರುವುದು ಕಂಡು ಬಂದಿದ್ದು ಸದರಿ ನೌಕರರು ಸೇವೆಯಿಂದ ಈಗಾಗಲೇ ವಯೋನಿವೃತ್ತಿ ಹೊಂದಿರುವುದರಿಂದ ಇವರ ವಿರುದ್ಧ ಕೆ.ಸಿ.ಎಸ್.ಆರ್. ನಿಯಮ 214 ರಡಿ ಇಲಾಖಾ ವಿಚಾರಣೆ ನಡೆಸಲು ಸರ್ಕಾರದ ಅನುಮತಿ ಕೋರಿರುತ್ತಾರೆ. ಮೇಲೆ (2)ರಲ್ಲಿ ಓದಲಾದ ದಿನಾಂಕ 25–3–2003ರ ಸರ್ಕಾರದ ಆದೇಶದಲ್ಲಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಅವರು ಕೋರಿರುವಂತೆ ಶ್ರೀಮತಿ ಅಂಜಾದಿ ಬೇಗಂ, ನಿವೃತ್ತ ಪ್ರಥಮ ದರ್ಜೆ ಸಹಾಯಕರು ಇವರು ಸರ್ಕಾರಕ್ಕೆ ಉಂಟು ಮಾಡಿರುವ ನಷ್ಟದ ಆರೋಪದ ಬಗ್ಗೆ

ಕೆ.ಸಿ.ಎಸ್.ಆರ್. ನಿಯಮ 214 (2)(ಬಿ)(iii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಇಲಾಖಾ ವಿಚಾರಣೆ ನಡೆಸಲು ಆದೇಶಿಸಲಾಯಿತು. ಅದರಂತೆ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಹೊಸಪೇಟೆ ಅವರು ಶ್ರೀಮತಿ ಅಂಜಾದಿ ಬೇಗಂ, ನಿವೃತ್ತ ಪ್ರಥಮ ದರ್ಜೆ ಸಹಾಯಕಿ ಅವರಿಗೆ ಮೇಲೆ (3)ರಲ್ಲಿ ಓದಲಾದ ದಿನಾಂಕ 5–4–2003ರ ನೋಟೀಸ್ ಜಾರಿ ಮಾಡುವ ಮೂಲಕ ಇಲಾಖಾ ವಿಚಾರಣೆ ಪ್ರಾರಂಭಿಸಿ ಅವರಿಂದ ಮೇಲೆ (4)ರಲ್ಲಿ ಓದಲಾದ ದಿನಾಂಕ 19–4–2003ರ ಉತ್ತರ ಪಡೆದು ಪರಿಶೀಲಿಸಿ ಅದು ಸಮಂಜಸವಿರದ ಕಾರಣ ಮೇಲೆ (5)ರಲ್ಲಿ ಓದಲಾದ ದಿನಾಂಕ 29.4.2003ರ ಆದೇಶ ಹೊರಡಿಸಿ ಉಪನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಿದರು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (6)ರಲ್ಲಿ ಓದಲಾದ ದಿನಾಂಕ 15–3–2006ರ ವಿಚಾರಣಾ ವರದಿ ಸಲ್ಲಿಸಿ ಆರೋಪ ಕುರಿತು ಈ ಕೆಳಕಂಡ ಅಭಿಪ್ರಾಯ ವ್ಯಕ್ತಪಡಿಸಿದರು.

"ಆರೋಪ:– ಶ್ರೀಮತಿ ಅಂಜಾದಿ ಬೇಗಂ, ಪ್ರಥಮ ದರ್ಜೆ ಉಗ್ರಾಣ ಪಾಲಿಕೆ ಇವರು ಅರಮನೆಯ ವಿಭಾಗದಲ್ಲಿ ಕಾರ್ಯ ನಿರ್ವಹಿಸಿರುವ ಅವಧಿಯಲ್ಲಿ ಒಟ್ಟು 56,176 ಬಣ್ಣದ ಛಾಯಾ ಚಿತ್ರ ಕಾರ್ಡುಗಳನ್ನು ವಹಿಸಿಕೊಂಡು ದಾಸ್ತಾನು ಪುಸ್ತಕದಲ್ಲಿ ದಾಖಲು ಮಾಡಿಕೊಂಡು ಈ ಪೈಕಿ 45,646 ಬಣ್ಣದ ಛಾಯಾಚಿತ್ರ ಕಾರ್ಡುಗಳನ್ನು ಪ್ರತಿ ಕಾರ್ಡಿಗೆ ರೂ.3ರಂತೆ ಮಾರಾಟ ಮಾಡಿದ ಬಾಬ್ತು ಜಮಾ 1,36,938.00 ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆಯ ನಿರ್ದೇಶನಾಲಯದ ನಗದು ಶಾಖೆಗೆ ಜಮಾ ಮಾಡಿದ್ದು ಮತ್ತು 853 ಕಾರ್ಡುಗಳನ್ನು ಕಾಂಪ್ಲಿಮೆಂಟರಿ ಯಾಗಿ ಅರಮನೆ ವೀಕ್ಷಣೆಗೆ ಬಂದಿರುವ ಗಣ್ಯ ವ್ಯಕ್ತಿಗಳಿಗಾಗಿ ನೀಡಿರುವುದಾಗಿಯೂ ಮತ್ತು ದಿನಾಂಕ 2–8–1999ರಂದು ಬಣ್ಣದ ಛಾಯಾಚಿತ್ರ ಕಾರ್ಡುಗಳ ಪ್ರಭಾರವನ್ನು ಶ್ರೀಮತಿ ಬಿ.ಗಾಯತ್ರಿ, ದ್ವಿತೀಯ ದರ್ಜೆ ಸಹಾಯಕರು ಇವರು ಪ್ರಭಾರ ವಹಿಸಿ ಕೊಡುವಾಗ 10,677 ಕಾರ್ಡುಗಳನ್ನು ಪ್ರಭಾರ ವಹಿಸದೆ ಕೇವಲ 3694 ಕಾರ್ಡುಗಳನ್ನು ಮಾತ್ರ ವಹಿಸಿಕೊಟ್ಟು ಉಳಿಕೆ 6,983 ಕಾರ್ಡುಗಳನ್ನು ವಹಿಸಿ ಕೊಂಡಿರುವ ಬಾಬ್ತು ಹಣ ಸಂದಾಯ ಮಾಡಿರುವುದಾಗಲಿ ಅಥವಾ ಮಾರಾಟವಾಗದೆ ಉಳಿದಿರುವ ಕಾರ್ಡುಗಳನ್ನು ಹಿಂತಿರುಗಿಸಿರುವುದಿಲ್ಲವಾದ್ದರಿಂದ ರೂ.20,949.00/– ಗಳನ್ನು ಸರ್ಕಾರಕ್ಕೆ ನಷ್ಟವುಂಟು ಮಾಡಿದ್ದೀರಿ.

"ಕೆ.ಎಫ್.ಸಿ. 353ರನ್ವಯ ಭದ್ರತಾ ಠೇವಣಿ ಪಡೆಯದೇ ಅಕ್ಷರಸಹಾಯಕರು, ದಿನಗೂಲಿ ನೌಕರರು ಇತ್ಯಾದಿಗಳಿಗೆ ಮಾರಾಟ ಮಾಡಲು ಕಾರ್ಡ್‌ಗಳನ್ನು ಕೊಟ್ಟಿದ್ದು, ದಿನನಿತ್ಯದ ಬಣ್ಣದ ಕಾರ್ಡುಗಳ ಮಾರಾಟದಿಂದ ಸಂಗ್ರಹವಾದ ಮೊಬಲಗು, ಸರ್ಕಾರಕ್ಕೆ ಪಾವತಿಸಿದ ಮೊಬಲಗು, ಮಾರಾಟವಾಗದೇ ಉಳಿದ ಕಾರ್ಡುಗಳು ಇವುಗಳ ಲೆಕ್ಕವನ್ನು ನಿರ್ವಹಿಸದೇ ಇರುವುದು ಸಾಕ್ಷಿಗಳ ಹೇಳಿಕೆಯಿಂದ ಮೂಡಿ ಬರುತ್ತದೆ. ಆದರೆ ಇದಕ್ಕೆ ವ್ಯತಿರಿಕ್ತವಾಗಿ ತಾನು ಇವೆಲ್ಲವನ್ನೂ ನಿರ್ವಹಿಸಿರುವುದಕ್ಕೆ ಯಾವುದೇ ಸಮರ್ಥನೆ ನೀಡಲು ಆರೋಪಿಯು ವಿಫಲರಾಗಿದ್ದಾರೆ. ಆರೋಪದಲ್ಲಿ 6983 ಕಾರ್ಡುಗಳ ಮಾರಾಟದ ಹಣವನ್ನು ಜಮಾ ಮಾಡದೇ ರೂ.20,949–00ಗಳ ನಷ್ಟ ಉಂಟು ಮಾಡಿದ್ದಾರೆಂದು ನಮೂದಿಸಿದೆ. ಆದರೆ ಅವರು ಲೆಕ್ಕಕೊಡಬೇಕಿದ್ದು 5,969 ಕಾರ್ಡುಗಳಿಗೆ ಮಾತ್ರ. ಒಂದು ಕಾರ್ಡಿಗೆ 3.00ರೂ.ಗಳಂತೆ ನಷ್ಟ ಉಂಟಾಗಿರುವುದು ರೂ.17,909–00ಗಳು ಮಾತ್ರ, ರೂ.20,949–00ಗಳಲ್ಲ."

ಮೇಲ್ಕಂಡ ವಿಚಾರಣಾ ವರದಿಯ ಪ್ರತಿಯೊಡನೆ ಶ್ರೀಮತಿ ಅಂಜಾದಿ ಬೇಗಮ್, ನಿವೃತ್ತ ಪ್ರಥಮ ದರ್ಜೆ ಸಹಾಯಕಿ ಅವರಿಗೆ ಮೇಲೆ (7)ರಲ್ಲಿ ಓದಲಾದ ದಿನಾಂಕ 5–5–2006ರ ನೋಟೀಸ್ ನೀಡಿ ವಿಚಾರಣಾ ವರದಿಯ ಬಗ್ಗೆ ಅಹವಾಲು ಏನಾದರೂ ಇದ್ದಲ್ಲಿ ಅದನ್ನು ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು. ಆರೋಪಿಯು ಮೇಲೆ (8)ರಲ್ಲಿ ಓದಲಾದ ದಿನಾಂಕ 9.6.2006ರ ಉತ್ತರ ಸಲ್ಲಿಸಿ ದೋಷಾರೋಪಣಾ ಪಟ್ಟಿಗೆ ಎಕ್ಸಿಕ್ಯೂಟೀವ್ ಇಂಜಿನಿಯರ್ ಹಾಗೂ ನಿರ್ದೇಶಕರು ಇಬ್ಬರೂ ಸಹಿ ಮಾಡಿದ್ದು, ಇದು ಊರ್ಜಿತ ವಾಗುವುದಿಲ್ಲ. ಆರೋಪದಲ್ಲಿ 6983 ಕಾರ್ಡುಗಳ ಮಾರಾಟದ ಹಣ ಜಮಾ ಮಾಡಿಲ್ಲ ಎಂದು ತಿಳಿಸಿದ್ದು, ವಿಚಾರಣೆಯಲ್ಲಿ 5969 ಕಾರ್ಡುಗಳಿರುವುದು ಮೂಡಿ ಬಂದಿದೆ. ಆದ್ದರಿಂದ ಆರೋಪಗಳು ಅಸ್ಪಷ್ಟವಾಗಿವೆ. ಮಾರಾಟಕ್ಕೆ ಸಂಬಂಧಪಟ್ಟ ದಾಖಲೆಗಳು ದಾಸ್ತಾನು ವಹಿಗಳನ್ನು ಕಾಲಕಾಲಕ್ಕೆ ಸಹಾಯಕ ನಿರ್ದೇಶಕರು ಪರಿಶೀಲಿಸಿದ್ದಲ್ಲಿ ಈ ರೀತಿಯ ವ್ಯತ್ಯಾಸಗಳು ಉಂಟಾಗುತ್ತಿರಲಿಲ್ಲವೆಂದು ತಿಳಿಸಿ ತಮ್ಮನ್ನು ಮಾತ್ರ ವಿಚಾರಣೆಗೆ ಗುರಿಪಡಿಸ ಲಾಗಿದ್ದು, ತಮಗೆ ಅನ್ಯಾಯ ಮಾಡಲಾಗುತ್ತಿರುವುದರಿಂದ ತಮ್ಮನ್ನು ಆರೋಪಮುಕ್ತ ರನ್ನಾಗಿಸಲು ಕೋರಿದ್ದಾರೆ.

ಆರೋಪಿಯ ಉತ್ತರದಿಂದಾಗಿ ಪ್ರಕರಣವನ್ನು ಮತ್ತೊಮ್ಮೆ ದಾಖಲೆ ಗಳೊಡನೆ ಪರಿಶೀಲಿಸಲಾಗಿದೆ. ಆರೋಪಿ ನೌಕರರಿಗೆ ನೀಡಿದ ನೋಟೀಸ್‌ಗೆ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಅವರು ಸಹಿ ಹಾಕಿದ್ದಾರೆ. ಅದರ ಅನುಬಂಧಗಳಿಗೆ ಜಿಲ್ಲಾಧಿಕಾರಿ ಹಾಗೂ ಅರಮನೆ ಮಂಡಳಿಯ ಕಾರ್ಯನಿರ್ವಾಹಕ ಅಧಿಕಾರಿಯವರು ಸಹಿ ಹಾಕಿರುವುದನ್ನು ನಿರ್ದೇಶಕರು ದೃಢೀಕರಿಸಿದ್ದಾರೆ. ಇಬ್ಬರೂ ಅಧಿಕಾರಿಗಳು ಸಹಿ ಮಾಡಿರುವುದರಿಂದ ವಿಚಾರಣೆ ನಿಷ್ಫಲಗೊಳ್ಳುವುದಿಲ್ಲ. ಆರೋಪಗಳು ನೇರವಾಗಿಯೇ ಇವೆ. ಎಲ್ಲಿಯೂ ಅಸ್ಪಷ್ಟತೆ ಇರುವುದಿಲ್ಲ. ಇನ್ನು ವಿಚಾರಣೆಯಲ್ಲಿ ಸಾಕ್ಷ್ಯ ನೀಡಿದ ಅಧಿಕಾರಿಗಳು ದಾಸ್ತಾನು ವಹಿ ಇತ್ಯಾದಿ ದಾಖಲೆಗಳನ್ನು ಕಾಲಕಾಲಕ್ಕೆ ತಪಾಸಣೆ ಮಾಡಲಿಲ್ಲ ಎಂಬ ಆರೋಪಿಯ ನಿಲುವೂ ಸಹ ವಿಚಾರಣಾ ವರದಿ ನಂತರದ ಆಲೋಚನೆ ಆಗಿದೆ.

ಈ ಎಲ್ಲ ಕಾರಣಗಳಿಂದಾಗಿ ಶ್ರೀಮತಿ ಅಂಜಾದಿ ಬೇಗಮ್, ನಿವೃತ್ತ ಪ್ರಥಮ ದರ್ಜೆ ಸಹಾಯಕಿ ಅವರ ವಿವರಣೆಯನ್ನು ಒಪ್ಪಿಕೊಳ್ಳದೇ ಆರೋಪ ಸಾಬೀತಾಗಿದೆ ಹಾಗೂ ರೂ.17,907/– ನಷ್ಟ ಉಂಟಾಗಿದೆ ಎಂಬ ವಿಚಾರಣಾ ವರದಿಯನ್ನು ಒಪ್ಪಿಕೊಂಡ ಸರ್ಕಾರವು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯೊಡನೆ ದಂಡನೆ ವಿಧಿಸಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 63 ಕೆಎಂಯು 2003, ಬೆಂಗಳೂರು, ದಿನಾಂಕ 8ನೇ ಆಗಸ್ಟ್ 2007**

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀಮತಿ ಅಂಜಾದಿ ಬೇಗಮ್, ನಿವೃತ್ತ ಪ್ರಥಮ ದರ್ಜೆ ಸಹಾಯಕಿ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ

ಇಲಾಖೆ ಅವರ ದುರ್ನಡತೆ ಯಿಂದ ಸರ್ಕಾರಕ್ಕೆ ಉಂಟಾದ ರೂ.17,907/–ಗಳನ್ನು ಶೇಕಡ 8ರಷ್ಟು ಬಡ್ಡಿಯೊಡನೆ ಅವರ ನಿವೃತ್ತಿ ಸೌಲಭ್ಯಗಳಿಂದ ವಸೂಲು ಮಾಡಬೇಕೆಂದು ಹಾಗೂ ಅವರ ಮಾಸಿಕ ವಿಶ್ರಾಂತಿ ವೇತನದಿಂದ ಪ್ರತಿ ತಿಂಗಳೂ ರೂ.500/– ಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಒಂದು ವರ್ಷದ ಅವಧಿಗೆ ಕಡಿತಗೊಳಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್.ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

ಪಿ.ಆರ್. 1489

## ಜಲ ಸಂಪನ್ಮೂಲ ಸಚಿವಾಲಯ

**ವಿಷಯಃ–** ಬೃಹತ್/ಮಧ್ಯಮ ನೀರಾವರಿ ಜಲಾಶಯಗಳಲ್ಲಿರುವ ನೀರನ್ನು ಕುಡಿಯುವ ಉದ್ದೇಶಕ್ಕಾಗಿ ಬಳಸಲು ರಚಿಸಿರುವ ಸಮಿತಿಯನ್ನು ಭಾಗಶಃ ಮಾರ್ಪಡಿಸಿ ಪುನರ್ ರಚಿಸುವ ಬಗ್ಗೆ.

**ಓದಲಾಗಿದೆಃ–** 1. ಸರ್ಕಾರಿ ಆದೇಶ ಸಂಖ್ಯೆ ಜಸಂಇ 78 ಡಬ್ಲ್ಯೂಬಿಎಂ 2003 ದಿನಾಂಕಃ24.2.2004.
2. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನೀರಾವರಿ ನಿಗಮ ನಿಯಮಿತ ಇವರ ಪತ್ರ ಸಂಖ್ಯೆಃ ಕನೀನಿ/245/ಟಿಹೆಚ್‌ಸಿ/ಟಿವಿ–1/2007–08/511 ದಿನಾಂಕಃ9.5.2007.

**ಪ್ರಸ್ತಾವನೆಃ**

ಬೃಹತ್ ಮತ್ತು ಮಧ್ಯಮ ನೀರಾವರಿ ಯೋಜನೆಗಳ ಜಲಾಶಯಗಳಲ್ಲಿ ಬೇಸಿಗೆಯಲ್ಲಿ ಅಥವಾ ನೀರಿನ ಅಭಾವ ಇರುವಾಗ ಲಭ್ಯವಿರುವ ನೀರನ್ನು ಕುಡಿಯುವ ಉದ್ದೇಶಕ್ಕಾಗಿ ಮಾತ್ರ ವ್ಯವಸ್ಥಿತವಾಗಿ ಬಳಸುವ ಸಲುವಾಗಿ ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಪ್ರತಿ ನೀರಾವರಿ ಜಲಾಶಯಕ್ಕೆ ಸಮಿತಿಯನ್ನು ರಚಿಸಲಾಗಿತ್ತು.

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನೀರಾವರಿ ನಿಗಮ ನಿಯಮಿತ, ಬೆಂಗಳೂರು ಇವರು ಹಿಪ್ಪರಗಿ ಜಲಾಶಯದಲ್ಲಿ ಲಭ್ಯವಿರುವ ನೀರನ್ನು ಕುಡಿಯುವ ಉದ್ದೇಶಕ್ಕಾಗಿ ಬಳಸಲು ಹಾಗೂ ನೀರನ್ನು ವ್ಯವಸ್ಥಿತವಾಗಿ ನಿಯಂತ್ರಿಸಲು ಸಮಿತಿಯನ್ನು ರಚಿಸುವಂತೆ ಮೇಲೆ ಓದಲಾದ (2)ರ ಪತ್ರದಲ್ಲಿ ಕೋರಿದ್ದರು. ಅವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಇತ್ತೀಚೆಗೆ ಸರ್ಕಾರವು ವಿಭಾಗ ಮಟ್ಟದಲ್ಲಿ ಪ್ರಾದೇಶಿಕ ಆಯುಕ್ತರನ್ನು ನೇಮಕ ಮಾಡಿರುವುದರಿಂದ ಈಗಾಗಲೇ ರಚಿಸಲಾಗಿರುವ ಜಲಾಶಯಗಳ ಸಮಿತಿಗಳಿಗೆ ಅಧ್ಯಕ್ಷರಾಗಿರುವ ಜಿಲ್ಲಾಧಿಕಾರಿಗಳ ಬದಲು ಪ್ರಾದೇಶಿಕ ಆಯುಕ್ತರನ್ನು ಅಧ್ಯಕ್ಷರನ್ನಾಗಿ ನೇಮಿಸಲು ಸರ್ಕಾರವು ತೀರ್ಮಾನಿಸಿ, ದಿನಾಂಕಃ24.2.2004ರಂದು ಹೊರಡಿಸಿರುವ ಆದೇಶವನ್ನು ಸೂಕ್ತವಾಗಿ ಮಾರ್ಪಡಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಃ ಜಸಂಇ 44 ಕೆಬಿಎನ್ 2007 ಬೆಂಗಳೂರು ದಿನಾಂಕಃ 09ನೇ ಆಗಸ್ಟ್ 2007.**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಸರ್ಕಾರವು ಹಿಪ್ಪರಗಿ ಜಲಾಶಯದಲ್ಲಿ ಲಭ್ಯವಿರುವ ನೀರನ್ನು ಕುಡಿಯುವ ಉದ್ದೇಶಕ್ಕಾಗಿ ಬಳಸಲು ಸಮಿತಿಯನ್ನು ರಚಿಸಿ ಹಾಗೂ ದಿನಾಂಕಃ24.2.2004ರಂದು ಹೊರಡಿಸಿರುವ ಸರ್ಕಾರಿ ಆದೇಶ ಸಂಃ ಜಸಂಇ 78 ಡಬ್ಲ್ಯೂಬಿಎಂ 2003ರಲ್ಲಿ ಆಯಾಯ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ರಚಿಸಲಾಗಿರುವ ಇತರೆ ಜಲಾಶಯಗಳಲ್ಲಿನ ಸಮಿತಿಗಳನ್ನು ಭಾಗಶಃ ಮಾರ್ಪಡಿಸಿ, ಪ್ರತಿ ಜಲಾಶಯಕ್ಕೆ ಸಂಬಂಧಪಟ್ಟಂತೆ ಆಯಾಯ ಪ್ರಾದೇಶಿಕ ಆಯುಕ್ತರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಿ(ಅನುಬಂಧದಲ್ಲಿ ವಿವರಿಸಿರುವಂತೆ) ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಐ.ಡಿ.ಧಮನ್**
ಸರ್ಕಾರದ ಅಧೀನ ಕಾರ್ಯದರ್ಶಿ (ತಾಂ)
ಜಲ ಸಂಪನ್ಮೂಲ ಇಲಾಖೆ, (ಕೃಭಾಜನಿನಿ, ವಿಶೇಷ ಕೋಶ)

**ಅನುಬಂಧ**

**(ಆದೇಶ ಸಂಃಜಸಂಇ 44 ಕೆಬಿಎನ್ 2007 ದಿನಾಂಕಃ09.08.2007)**

**1. ಆಲಮಟ್ಟಿ ಜಲಾಶಯ**

| ಕ್ರಸಂಃ | ವಿವರ | ಷರಾ |
|---|---|---|
| 1 | ಪ್ರಾದೇಶಿಕ ಆಯುಕ್ತರು, ಬೆಳಗಾವಿ | ಅಧ್ಯಕ್ಷರು |
| 2 | ಜಿಲ್ಲಾಧಿಕಾರಿಗಳು, ಬಿಜಾಪುರ ಜಿಲ್ಲೆ | ಸದಸ್ಯರು |
| 3 | ಆಡಳಿತಾಧಿಕಾರಿಗಳು, ಕೃಷ್ಣಾ ಕಾಡಾ, ಭೀಮರಾಯನಗುಡಿ | ಸದಸ್ಯರು |
| 4 | ಅಧ್ಯಕ್ಷರು, ನೀರು ಬಳಕೆದಾರರ ಸಹಕಾರ ಸಂಘಗಳ ಒಕ್ಕೂಟದ | ಸದಸ್ಯರು |
| 5 | ಜಿಲ್ಲಾಧಿಕಾರಿಗಳು, ಬಾಗಲಕೋಟೆ | ಸದಸ್ಯರು |
| 6 | ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿಗಳು, ವಿಜಾಪುರ | ಸದಸ್ಯರು |
| 7 | ಕಾರ್ಯಪಾಲಕ ಅಬಿಯಂತರರು, ಕೆ.ಪಿ.ಟಿ.ಸಿ.ಎಲ್, ಓ ಅಂಡ್ ಎಂ, ವಿಜಾಪುರ | ಸದಸ್ಯರು |
| 8 | ಅಧೀಕ್ಷಕ ಅಭಿಯಂತರರು, ಅಣೆಕಟ್ಟು ವೃತ್ತ, ಆಲಮಟ್ಟಿ | ಸದಸ್ಯ ಕಾರ್ಯದರ್ಶಿ |

2. ನಾರಾಯಣಪುರ ಜಲಾಶಯ

| ಕ್ರಸಂಃ | ವಿವರ | ಷರಾ |
|---|---|---|
| 1 | ಪ್ರಾದೇಶಿಕ ಆಯುಕ್ತರು, ಗುಲ್ಬರ್ಗಾ | ಅಧ್ಯಕ್ಷರು |
| 2 | ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ | ಸದಸ್ಯರು |
| 3 | ಆಡಳಿತಾಧಿಕಾರಿಗಳು, ಕೃಷ್ಣಾ ಕಾಡಾ, ಭೀಮರಾಯನಗುಡಿ | ಸದಸ್ಯರು |
| 4 | ಅಧ್ಯಕ್ಷರು, ನೀರು ಬಳಕೆದಾರರ ಸಹಕಾರ ಸಂಘಗಳ ಒಕ್ಕೂಟದ | ಸದಸ್ಯರು |
| 5 | ಜಿಲ್ಲಾಪೋಲೀಸ್ ವರಿಷ್ಠಾಧಿಕಾರಿಗಳು, ಗುಲ್ಬರ್ಗಾ. | ಸದಸ್ಯರು |
| 6 | ಕಾರ್ಯಪಾಲಕ ಅಭಿಯಂತರರು,<br>ಕೆ.ಪಿ.ಟಿ.ಸಿ.ಎಲ್., ಓ & ಎಂ, ಗುಲ್ಬರ್ಗಾ. | ಸದಸ್ಯರು |
| 7 | ಅ) ಅಧೀಕ್ಷಕ ಅಭಿಯಂತರರು, ಐ.ಬಿ.ಸಿ. ವೃತ್ತ, ರಾಂಪುರ<br>ಆ) ಅಧೀಕ್ಷಕ ಅಭಿಯಂತರರು, ಓ & ಎಂ ವೃತ್ತ, ರಾಂಪುರ.<br>ಇ) ಅಧೀಕ್ಷಕ ಅಭಿಯಂತರರು, ಜೆಬಿಸಿ., ವೃತ್ತ, ಭೀಮರಾಯನಗುಡಿ<br>ಈ) ಅಧೀಕ್ಷಕ ಅಭಿಯಂತರರು,<br>ಎನ್.ಆರ್.ಬಿ.ಸಿ. ವೃತ್ತ, ನಂ.2, ಕೃಷ್ಣಾ ಪುರ. | ಸದಸ್ಯರು<br>ಸದಸ್ಯರು<br>ಸದಸ್ಯರು<br>ಸದಸ್ಯರು |
| 8 | ಅಧೀಕ್ಷಕ ಅಭಿಯಂತರರು,<br>ಓ & ಎಂ., ನಾರಾಯಣಪುರ | ಸದಸ್ಯ ಕಾರ್ಯದರ್ಶಿ |

3. ಮಲಪ್ರಭಾ ಯೋಜನೆ

| ಕ್ರಸಂಃ | ವಿವರ | ಷರಾ |
|---|---|---|
| 1 | ಪ್ರಾದೇಶಿಕ ಆಯುಕ್ತರು, ಬೆಳಗಾವಿ | ಅಧ್ಯಕ್ಷರು |
| 2 | ಜಿಲ್ಲಾಧಿಕಾರಿಗಳು, ಬೆಳಗಾವಿ | ಸದಸ್ಯರು |
| 3 | ಆಡಳಿತಾಧಿಕಾರಿಗಳು, ಕಾಡಾ, ಮಧ್ಯಮ ಮತ್ತು ಭಾರಿ ಯೋಜನೆಗಳು, ಬೆಳಗಾವಿ | ಸದಸ್ಯರು |
| 4 | ಅಧ್ಯಕ್ಷರು, ಮಲಪ್ರಭಾ ಯೋಜನಾ ಮಟ್ಟದ ನೀರು ಬಳಕೆದಾರರ ಸಹಕಾರ ಸಂಘಗಳ ಮಹಾಮಂಡಳಿ ನಿಯಮಿತ, ನವಿಲುತೀರ್ಥ ತಾ:, ಸವದತ್ತಿ. | ಸದಸ್ಯರು |
| 5 | ಜಿಲ್ಲಾಧಿಕಾರಿಗಳು, ಧಾರವಾಡ/ಗದಗ/ಬಾಗಲಕೋಟೆ | ಸದಸ್ಯರು |
| 6 | ಸೂಪರಿಂಟೆಂಡಿಂಗ್ ಇಂಜಿನಿಯರ್, ಕ.ನೀ.ನಿ.ನಿ., ಮಲಪ್ರಭ ಬಲದಂಡೆ ಕಾಲುವೆ ನಿರ್ಮಾಣ ವೃತ್ತ, ಧಾರವಾಡ | ಸದಸ್ಯರು |
| 7 | ಕಾರ್ಯನಿರ್ವಾಹಕ ಅಭಿಯಂತರರು, ಹೆಸ್ಕಾಮ್, ಬೆಳಗಾವಿ/ಬೈಲಹೊಂಗಲ/ ಧಾರವಾಡ/ಗದಗ | ಸದಸ್ಯರು |
| 8 | ಸೂಪರಿಂಟೆಂಡ್ ಆಫ್ ಪೋಲೀಸ್, ಬೆಳಗಾವಿ, ಧಾರವಾಡ/ಗದಗ/ಬಾಗಲಕೋಟೆ | ಸದಸ್ಯರು |
| 9 | ಸೂಪರಿಂಟೆಂಡಿಂಗ್ ಇಂಜಿನಿಯರ್, ಕ.ನೀ.ನಿ.ನಿ., ಮಲಪ್ರಭ ಬಲದಂಡೆ ಕಾಲುವೆ ನಿರ್ಮಾಣ ವೃತ್ತ, ನವಿಲುತೀರ್ಥ. | ಸದಸ್ಯ ಕಾರ್ಯದರ್ಶಿ |

4. ಘಟಪ್ರಭಾ ಯೋಜನೆ

| ಕ್ರಸಂಃ | ವಿವರ | ಷರಾ |
|---|---|---|
| 1 | ಪ್ರಾದೇಶಿಕ ಆಯುಕ್ತರು, ಬೆಳಗಾವಿ | ಅಧ್ಯಕ್ಷರು |
| 2 | ಜಿಲ್ಲಾಧಿಕಾರಿಗಳು, ಬೆಳಗಾವಿ | ಸದಸ್ಯರು |
| 3 | ಆಡಳಿತಾಧಿಕಾರಿಗಳು, ಕಾಡಾ, ಮಧ್ಯಮ ಮತ್ತು ಭಾರಿ ಯೋಜನೆಗಳು, ಬೆಳಗಾವಿ | ಸದಸ್ಯರು |
| 4 | ಅಧ್ಯಕ್ಷರು, ಮಲಪ್ರಭಾ ಯೋಜನಾ ಮಟ್ಟದ ನೀರು ಬಳಕೆದಾರರ ಸಹಕಾರ ಸಂಘಗಳ ಮಹಾಮಂಡಳಿ ನಿಯಮಿತ, ಹಿಡಕಲ್ ಡ್ಯಾಂ, ತಾ:ಹುಕ್ಕೇರಿ | ಸದಸ್ಯರು |
| 5 | ಜಿಲ್ಲಾಧಿಕಾರಿಗಳು, ಬಾಗಲಕೋಟೆ | ಸದಸ್ಯರು |
| 6 | ವ್ಯವಸ್ಥಾಪಕ ನಿರ್ದೇಶಕರು, ಹುಕ್ಕೇರಿ, ಗ್ರಾಮೀಣ ವಿದ್ಯುತ್ ಸರಬರಾಜು ಸಹಕಾರ ಸಂಘ, ನಿಯಮಿತ ಹುಕ್ಕೇರಿ | ಸದಸ್ಯರು |
| 7 | ಸೂಪರಿಂಟೆಂಡಿಂಗ್ ಇಂಜಿನಿಯರ್, ಹೆಸ್ಕಾಮ್, ಬೆಳಗಾವಿ/ಬಿಜಾಪುರ | ಸದಸ್ಯರು |
| 8 | ಸೂಪರಿಂಟೆಂಡಿಂಗ್ ಇಂಜಿನಿಯರ್, ಕ.ನೀ.ನಿ.ನಿ., ಘಟಪ್ರಭ ಬಲದಂಡೆ ಕಾಲುವೆ ನಿರ್ಮಾಣ ವೃತ್ತ, ಜಮಖಂಡಿ | ಸದಸ್ಯರು |
| 9 | ಕಾರ್ಯನಿರ್ವಾಹಕ ಅಭಿಯಂತರರು, ಹೆಸ್ಕಾಮ್, ಬೆಳಗಾವಿ/ಚಿಕ್ಕೋಡಿ/ಗೋಕಾಕ್/ ಜಮಖಂಡಿ/ಬಾಗಲಕೋಟೆ | ಸದಸ್ಯರು |
| 10 | ಸೂಪರಿಂಟೆಂಡ್ ಆಫ್ ಪೋಲೀಸ್, ಬೆಳಗಾವಿ/ಬಾಗಲಕೋಟೆ | ಸದಸ್ಯರು |
| 11 | ಸೂಪರಿಂಟೆಂಡ್ ಇಂಜಿನಿಯರ್, ಕನೀನಿನಿ., ಘಟಪ್ರಭ ಬಲದಂಡೆ ಕಾಲುವೆ ನಿರ್ಮಾಣ ವೃತ್ತ, ಹಿಡಕಲ್ ಡ್ಯಾಂ | ಸದಸ್ಯ ಕಾರ್ಯದರ್ಶಿ |

5. ಬೆಣ್ಣಿತೋರಾ ಯೋಜನೆ

| ಕ್ರಸಂಃ | ವಿವರ | ಷರಾ |
|---|---|---|
| 1 | ಪ್ರಾದೇಶಿಕ ಆಯುಕ್ತರು, ಗುಲ್ಬರ್ಗಾ | ಅಧ್ಯಕ್ಷರು |
| 2 | ಜಿಲ್ಲಾಧಿಕಾರಿಗಳು, ಗುಲ್ಬರ್ಗಾ | ಸದಸ್ಯರು |
| 3 | ಆಡಳಿತಾಧಿಕಾರಿಗಳು, ಕಾಡಾ ನೀರಾವರಿ ಯೋಜನೆಗಳ ವಲಯ, ಗುಲ್ಬರ್ಗಾ | ಸದಸ್ಯರು |
| 4 | ಅಧ್ಯಕ್ಷರು, ನೀರು ಬಳಕೆದಾರರ ಸಹಕಾರ ಸಂಘಗಳ ಒಕ್ಕೂಟ (ಬೆಣ್ಣಿತೋರಾ ನೀರಾವರಿ ಯೋಜನೆ) | ಸದಸ್ಯರು |
| 5 | ಸೂಪರಿಂಟೆಂಡ್ ಆಫ್ ಪೋಲೀಸ್, ಗುಲ್ಬರ್ಗಾ | ಸದಸ್ಯರು |
| 6 | ಕಾರ್ಯಪಾಲಕ ಅಭಿಯಂತರರು, ಕೆ.ಪಿ.ಟಿ.ಎಲ್., ಗುಲ್ಬರ್ಗಾ | ಸದಸ್ಯರು |
| 7 | ಅಧೀಕ್ಷಕ ಅಭಿಯಂತರರು, ಜಸಇ, ನೀರಾವರಿ ಯೋಜನೆಗಳ ವೃತ್ತ ಗುಲ್ಬರ್ಗಾ. | ಸದಸ್ಯ ಕಾರ್ಯದರ್ಶಿ |

6. ಅಮರ್ಜಾ ಯೋಜನೆ

| ಕ್ರಸಂಃ | ವಿವರ | ಷರಾ |
|---|---|---|
| 1 | ಪ್ರಾದೇಶಿಕ ಆಯುಕ್ತರು, ಗುಲ್ಬರ್ಗಾ | ಅಧ್ಯಕ್ಷರು |
| 2 | ಜಿಲ್ಲಾಧಿಕಾರಿಗಳು, ಗುಲ್ಬರ್ಗಾ | ಸದಸ್ಯರು |
| 3 | ಆಡಳಿತಾಧಿಕಾರಿಗಳು, ಕಾಡಾ ನೀರಾವರಿ ಯೋಜನೆಗಳ ವಲಯ, ಗುಲ್ಬರ್ಗಾ | ಸದಸ್ಯರು |
| 4 | ಅಧ್ಯಕ್ಷರು, ನೀರು ಬಳಕೆದಾರರ ಸಹಕಾರ ಸಂಘಗಳ ಒಕ್ಕೂಟ (ಅಮರ್ಜಾ ನೀರಾವರಿ ಯೋಜನೆ) | ಸದಸ್ಯರು |
| 5 | ಸೂಪರಿಂಟೆಂಡ್ ಆಫ್ ಪೋಲೀಸ್, ಗುಲ್ಬರ್ಗಾ | ಸದಸ್ಯರು |
| 6 | ಕಾರ್ಯಪಾಲಕ ಅಭಿಯಂತರರು, ಕೆ.ಪಿ.ಟಿ.ಎಲ್., ಗುಲ್ಬರ್ಗಾ | ಸದಸ್ಯರು |
| 7 | ಅಧೀಕ್ಷಕ ಅಭಿಯಂತರರು, ಜಸಇ, ನೀರಾವರಿ ಯೋಜನೆಗಳ ವೃತ್ತ ಗುಲ್ಬರ್ಗಾ. | ಸದಸ್ಯ ಕಾರ್ಯದರ್ಶಿ |

7. ಗಂಡೋರಿನಾಲಾ ಯೋಜನೆ

| ಕ್ರಸಂಃ | ವಿವರ | ಷರಾ |
|---|---|---|
| 1 | ಪ್ರಾದೇಶಿಕ ಆಯುಕ್ತರು, ಗುಲ್ಬರ್ಗಾ | ಅಧ್ಯಕ್ಷರು |
| 2 | ಜಿಲ್ಲಾಧಿಕಾರಿಗಳು, ಗುಲ್ಬರ್ಗಾ | ಸದಸ್ಯರು |
| 3 | ಆಡಳಿತಾಧಿಕಾರಿಗಳು, ಕಾಡಾ ನೀರಾವರಿ ಯೋಜನೆಗಳ ವಲಯ, ಗುಲ್ಬರ್ಗಾ | ಸದಸ್ಯರು |
| 4 | ಅಧ್ಯಕ್ಷರು, ನೀರು ಬಳಕೆದಾರರ ಸಹಕಾರ ಸಂಘಗಳ ಒಕ್ಕೂಟ (ಗಂಡೋರಿನಾಲಾ ನೀರಾವರಿ ಯೋಜನೆ) | ಸದಸ್ಯರು |
| 5 | ಸೂಪರಿಂಟೆಂಡ್ ಆಫ್ ಪೋಲೀಸ್, ಗುಲ್ಬರ್ಗಾ | ಸದಸ್ಯರು |
| 6 | ಕಾರ್ಯಪಾಲಕ ಅಭಿಯಂತರರು, ಕೆ.ಪಿ.ಟಿ.ಎಲ್., ಗುಲ್ಬರ್ಗಾ | ಸದಸ್ಯರು |
| 7 | ಅಧೀಕ್ಷಕ ಅಭಿಯಂತರರು, ಜಸಇ, ನೀರಾವರಿ ಯೋಜನೆಗಳ ವೃತ್ತ ಗುಲ್ಬರ್ಗಾ. | ಸದಸ್ಯ ಕಾರ್ಯದರ್ಶಿ |

8. ಸೌದಾಗರ ಯೋಜನೆ

| ಕ್ರಸಂಃ | ವಿವರ | ಷರಾ |
|---|---|---|
| 1 | ಪ್ರಾದೇಶಿಕ ಆಯುಕ್ತರು, ಗುಲ್ಬರ್ಗಾ | ಅಧ್ಯಕ್ಷರು |
| 2 | ಜಿಲ್ಲಾಧಿಕಾರಿಗಳು, ಗುಲ್ಬರ್ಗಾ | ಸದಸ್ಯರು |
| 3 | ಆಡಳಿತಾಧಿಕಾರಿಗಳು, ಕಾಡಾ ನೀರಾವರಿ ಯೋಜನೆಗಳ ವಲಯ, ಗುಲ್ಬರ್ಗಾ | ಸದಸ್ಯರು |
| 4 | ಅಧ್ಯಕ್ಷರು, ನೀರು ಬಳಕೆದಾರರ ಸಹಕಾರ ಸಂಘಗಳ ಒಕ್ಕೂಟ (ಸೌದಾಗರ ನೀರಾವರಿ ಯೋಜನೆ) | ಸದಸ್ಯರು |
| 5 | ಸೂಪರಿಂಟೆಂಡ್ ಆಫ್ ಪೋಲೀಸ್, ಗುಲ್ಬರ್ಗಾ | ಸದಸ್ಯರು |
| 6 | ಕಾರ್ಯಪಾಲಕ ಅಭಿಯಂತರರು, ಕೆ.ಪಿ.ಟಿ.ಸಿ.ಎಲ್., ಗುಲ್ಬರ್ಗಾ | ಸದಸ್ಯರು |
| 7 | ಅಧೀಕ್ಷಕ ಅಭಿಯಂತರರು, ಜಸಇ, ನೀರಾವರಿ ಯೋಜನೆಗಳ ವೃತ್ತ ಗುಲ್ಬರ್ಗಾ. | ಸದಸ್ಯ ಕಾರ್ಯದರ್ಶಿ |

9. ಚಂದ್ರಂಪಳ್ಳಿ ಯೋಜನೆ

| ಕ್ರಸಂಃ | ವಿವರ | ಷರಾ |
|---|---|---|
| 1 | ಪ್ರಾದೇಶಿಕ ಆಯುಕ್ತರು, ಗುಲ್ಬರ್ಗಾ | ಅಧ್ಯಕ್ಷರು |
| 2 | ಜಿಲ್ಲಾಧಿಕಾರಿಗಳು, ಗುಲ್ಬರ್ಗಾ | ಸದಸ್ಯರು |
| 3 | ಆಡಳಿತಾಧಿಕಾರಿಗಳು, ಕಾಡಾ ನೀರಾವರಿ ಯೋಜನೆಗಳ ವಲಯ, ಗುಲ್ಬರ್ಗಾ | ಸದಸ್ಯರು |
| 4 | ಅಧ್ಯಕ್ಷರು, ನೀರು ಬಳಕೆದಾರರ ಸಹಕಾರ ಸಂಘಗಳ ಒಕ್ಕೂಟ (ಚಂದ್ರಂಪಳ್ಳಿ ನೀರಾವರಿ ಯೋಜನೆ) | ಸದಸ್ಯರು |

| ಕ್ರಸಂ: | ವಿವರ | ಷರಾ |
|---|---|---|
| 5 | ಸೂಪರಿಂಟೆಂಡ್ ಆಫ್ ಪೋಲೀಸ್, ಗುಲ್ಬರ್ಗಾ | ಸದಸ್ಯರು |
| 6 | ಕಾರ್ಯಪಾಲಕ ಅಭಿಯಂತರರು, ಕೆ.ಪಿ.ಟಿ.ಸಿ.ಎಲ್., ಗುಲ್ಬರ್ಗಾ | ಸದಸ್ಯರು |
| 7 | ಅಧೀಕ್ಷಕ ಅಭಿಯಂತರರು, ಜಸಇ, ನೀರಾವರಿ ಯೋಜನೆಗಳ ವೃತ್ತ ಗುಲ್ಬರ್ಗಾ. | ಸದಸ್ಯ ಕಾರ್ಯದರ್ಶಿ |

10. **ಹತ್ತಿಕುಣಿ ಯೋಜನೆ**

| ಕ್ರಸಂ: | ವಿವರ | ಷರಾ |
|---|---|---|
| 1 | ಪ್ರಾದೇಶಿಕ ಆಯುಕ್ತರು, ಗುಲ್ಬರ್ಗಾ | ಅಧ್ಯಕ್ಷರು |
| 2 | ಜಿಲ್ಲಾಧಿಕಾರಿಗಳು, ಗುಲ್ಬರ್ಗಾ | ಸದಸ್ಯರು |
| 3 | ಆಡಳಿತಾಧಿಕಾರಿಗಳು, ಕಾಡಾ ನೀರಾವರಿ ಯೋಜನೆಗಳ ವಲಯ, ಗುಲ್ಬರ್ಗಾ | ಸದಸ್ಯರು |
| 4 | ಅಧ್ಯಕ್ಷರು, ನೀರು ಬಳಕೆದಾರರ ಸಹಕಾರ ಸಂಘಗಳ ಒಕ್ಕೂಟ (ಹತ್ತಿಕುಣಿ ನೀರಾವರಿ ಯೋಜನೆ) | ಸದಸ್ಯರು |
| 5 | ಸೂಪರಿಂಟೆಂಡ್ ಆಫ್ ಪೋಲೀಸ್, ಗುಲ್ಬರ್ಗಾ | ಸದಸ್ಯರು |
| 6 | ಕಾರ್ಯಪಾಲಕ ಅಭಿಯಂತರರು, ಕೆ.ಪಿ.ಟಿ.ಸಿ.ಎಲ್., ಗುಲ್ಬರ್ಗಾ | ಸದಸ್ಯರು |
| 7 | ಅಧೀಕ್ಷಕ ಅಭಿಯಂತರರು, ಜಸಇ, ನೀರಾವರಿ ಯೋಜನೆಗಳ ವೃತ್ತ ಗುಲ್ಬರ್ಗಾ. | ಸದಸ್ಯ ಕಾರ್ಯದರ್ಶಿ |

11. **ಕಾರಂಜಾ ಯೋಜನೆ**

| ಕ್ರಸಂ: | ವಿವರ | ಷರಾ |
|---|---|---|
| 1 | ಪ್ರಾದೇಶಿಕ ಆಯುಕ್ತರು, ಗುಲ್ಬರ್ಗಾ | ಅಧ್ಯಕ್ಷರು |
| 2 | ಜಿಲ್ಲಾಧಿಕಾರಿಗಳು, ಬೀದರ್ | ಸದಸ್ಯರು |
| 3 | ಆಡಳಿತಾಧಿಕಾರಿಗಳು, ಕಾಡಾ ನೀರಾವರಿ ಯೋಜನೆಗಳ ವಲಯ, ಗುಲ್ಬರ್ಗಾ | ಸದಸ್ಯರು |
| 4 | ಅಧ್ಯಕ್ಷರು, ನೀರು ಬಳಕೆದಾರರ ಸಹಕಾರ ಸಂಘಗಳ ಒಕ್ಕೂಟ (ಕಾರಂಜಾ ನೀರಾವರಿ ಯೋಜನೆ) | ಸದಸ್ಯರು |
| 5 | ಸೂಪರಿಂಟೆಂಡ್ ಆಫ್ ಪೋಲೀಸ್, ಬೀದರ್ | ಸದಸ್ಯರು |
| 6 | ಕಾರ್ಯಪಾಲಕ ಅಭಿಯಂತರರು, ಕೆ.ಪಿ.ಟಿ.ಸಿ.ಎಲ್., ಬೀದರ್ | ಸದಸ್ಯರು |
| 7 | ಅಧೀಕ್ಷಕ ಅಭಿಯಂತರರು, ಜಸಇ, ನೀರಾವರಿ ಯೋಜನೆಗಳ ನಿರ್ಮಾಣ ವೃತ್ತ ಬೀದರ್ | ಸದಸ್ಯ ಕಾರ್ಯದರ್ಶಿ |

12. **ಚುಳಕಿನಾಲಾ ಯೋಜನೆ**

| ಕ್ರಸಂ: | ವಿವರ | ಷರಾ |
|---|---|---|
| 1 | ಪ್ರಾದೇಶಿಕ ಆಯುಕ್ತರು, ಗುಲ್ಬರ್ಗಾ | ಅಧ್ಯಕ್ಷರು |
| 2 | ಜಿಲ್ಲಾಧಿಕಾರಿಗಳು, ಬೀದರ್ | ಸದಸ್ಯರು |
| 3 | ಸೂಪರಿಂಟೆಂಡ್ ಆಫ್ ಪೋಲೀಸ್, ಬೀದರ್ | ಸದಸ್ಯರು |
| 4 | ಕಾರ್ಯಪಾಲಕ ಅಭಿಯಂತರರು, ಕೆ.ಪಿ.ಟಿ.ಎಲ್., ಬೀದರ್ | ಸದಸ್ಯರು |
| 5 | ಅಧ್ಯಕ್ಷರು, ನೀರು ಬಳಕೆದಾರರ ಸಹಕಾರ ಸಂಘಗಳ ಒಕ್ಕೂಟ (ಚುಳಕಿನಾಲಾ ನೀರಾವರಿ ಯೋಜನೆ) | ಸದಸ್ಯರು |
| 6 | ಅಧೀಕ್ಷಕ ಅಭಿಯಂತರರು, ನೀರಾವರಿ ಯೋಜನೆಗಳ ನಿರ್ಮಾಣ ವೃತ್ತ, ಬೀದರ್ | ಸದಸ್ಯ ಕಾರ್ಯದರ್ಶಿ |

13. **ವಾಣಿವಿಲಾಸ ಸಾಗರ ಯೋಜನೆ**

| ಕ್ರಸಂ: | ವಿವರ | ಷರಾ |
|---|---|---|
| 1 | ಪ್ರಾದೇಶಿಕ ಆಯುಕ್ತರು, ಬೆಂಗಳೂರು | ಅಧ್ಯಕ್ಷರು |
| 2 | ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ | ಸದಸ್ಯರು |
| 3 | ಯೋಜನಾ ಮಟ್ಟದ ನೀರು ಬಳಕೆದಾರರ ಸಹಕಾರ ಸಂಘಗಳ ಒಕ್ಕೂಟದ ಅಧ್ಯಕ್ಷರು(ರಚನೆಯಾಗಬೇಕಾಗಿದೆ) | ಸದಸ್ಯರು |
| 4 | ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿ, ಚಿತ್ರದುರ್ಗ | ಸದಸ್ಯರು |
| 5 | ಕಾರ್ಯಪಾಲಕ ಅಭಿಯಂತರರು, ಕೆ.ಪಿ.ಟಿ.ಸಿ.ಎಲ್., ಚಿತ್ರದುರ್ಗ | ಸದಸ್ಯರು |
| 6 | ಸೂಪರಿಂಟೆಂಡಿಂಗ್ ಇಂಜಿನಿಯರ್, ಕನೀನಿನಿ., ತುಂಗಾ ಮೇಲ್ದಂಡೆ ಯೋಜನಾ ವೃತ್ತ ಶಿವಮೊಗ್ಗ. | ಸದಸ್ಯರು |
| 7 | ಸೂಪರಿಂಟೆಂಡಿಂಗ್ ಇಂಜಿನಿಯರ್, ಭದ್ರಾ ಯೋಜನಾ ವೃತ್ತ ಬಿ.ಆರ್. ಪ್ರಾಜೆಕ್ಟ್ | ಸದಸ್ಯ ಕಾರ್ಯದರ್ಶಿ |

14. ಭದ್ರಾ ಜಲಾಶಯ ಯೋಜನೆ

| ಕ್ರಸಂಃ | ವಿವರ | ಷರಾ |
|---|---|---|
| 1 | ಪ್ರಾದೇಶಿಕ ಆಯುಕ್ತರು, ಮೈಸೂರು | ಅಧ್ಯಕ್ಷರು |
| 2 | ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು | ಸದಸ್ಯರು |
| 3 | ಆಡಳಿತಾಧಿಕಾರಿಗಳು, ಭದ್ರಾ ಕಾಡಾ, ಮಲವಗೊಪ್ಪ ಶಿವಮೊಗ್ಗ. | ಸದಸ್ಯರು |
| 4 | ಅಧ್ಯಕ್ಷರು, ನೀರು ಬಳಕೆದಾರರ ಸಹಕಾರ ಸಂಘಗಳ ಒಕ್ಕೂಟ (ರಚನೆಯಾಗಬೇಕಾಗಿರುತ್ತದೆ) | ಸದಸ್ಯರು |
| 5 | 1. ಜಿಲ್ಲಾಧಿಕಾರಿಗಳು, ಶಿವಮೊಗ್ಗ<br>2. ಜಿಲ್ಲಾಧಿಕಾರಿಗಳು, ದಾವಣಗೆರೆ | ಸದಸ್ಯರು |
| 6 | 1. ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿಗಳು, ಚಿಕ್ಕಮಗಳೂರು<br>2. ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿಗಳು, ಶಿವಮೊಗ್ಗ<br>3. ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿಗಳು, ದಾವಣಗೆರೆ | ಸದಸ್ಯರು |
| 7 | ಕಾರ್ಯಪಾಲಕ ಅಭಿಯಂತರರು, ಕೆ.ಪಿ.ಟಿ.ಎಲ್., ಚಿಕ್ಕಮಗಳೂರು/ಶಿವಮೊಗ್ಗ/ದಾವಣಗೆರೆ | ಸದಸ್ಯರು |
| 8 | ಸೂಪರಿಂಟೆಂಡಿಂಗ್ ಇಂಜಿನಿಯರ್, ಕನೀನಿನಿ., ತುಂಗಾ ಮೇಲ್ದಂಡೆ ಯೋಜನಾ ವೃತ್ತ ಶಿವಮೊಗ್ಗ. | ಸದಸ್ಯರು |
| 7 | ಸೂಪರಿಂಟೆಂಡಿಂಗ್ ಇಂಜಿನಿಯರ್, ಭದ್ರಾ ಯೋಜನಾ ವೃತ್ತ ಬಿ.ಆರ್. ಪ್ರಾಜೆಕ್ಟ್ | ಸದಸ್ಯ ಕಾರ್ಯದರ್ಶಿ |

15. ತುಂಗಭದ್ರಾ ಜಲಾಶಯ ಯೋಜನೆ

| ಕ್ರಸಂಃ | ವಿವರ | ಷರಾ |
|---|---|---|
| 1 | ಪ್ರಾದೇಶಿಕ ಆಯುಕ್ತರು, ಗುಲ್ಬರ್ಗಾ | ಅಧ್ಯಕ್ಷರು |
| 2 | ಜಿಲ್ಲಾಧಿಕಾರಿಗಳು, ಕೊಪ್ಪಳ ಹಾಗೂ ಜಿಲ್ಲಾಧಿಕಾರಿಗಳು, ಬಳ್ಳಾರಿ | ಸದಸ್ಯರು |
| 3 | ಆಡಳಿತಾಧಿಕಾರಿಗಳು, ಟಿ.ಬಿ.ಪಿ. ಮುನಿರಾಬಾದ್ | ಸದಸ್ಯರು |
| 4 | ಯೋಜನಾ ಮಟ್ಟದ ನೀರು ಬಳಕೆದಾರರ ಸಹಕಾರ ಸಂಘಗಳ ಒಕ್ಕೂಟದ ಅಧ್ಯಕ್ಷರು (ರಚನೆಯಾಗಬೇಕಾಗಿದೆ) | ಸದಸ್ಯರು |
| 5 | ಜಿಲ್ಲಾಧಿಕಾರಿಗಳು, ಕೊಪ್ಪಳ/ರಾಯಚೂರು | ಸದಸ್ಯರು |
| 6 | ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿಗಳು, ಕೊಪ್ಪಳ/ರಾಯಚೂರು/ಬಳ್ಳಾರಿ | ಸದಸ್ಯರು |
| 7 | ಕಾರ್ಯಪಾಲಕ ಅಭಿಯಂತರರು, ಓ ಅಂಡ್ ಎಂ ವಿಭಾಗ, ಜೆಸ್ಕಾಂ, ಕೊಪ್ಪಳ | ಸದಸ್ಯರು |
| 8 | ಅಧೀಕ್ಷಕ ಅಭಿಯಂತರರು, ತುಂಗಭದ್ರಾ ಕಾಲುವೆ ನಿರ್ಮಾಣ ವೃತ್ತ ಯರ್‌ಮರಸ್ | ಸದಸ್ಯರು |
| 9 | ಅಧೀಕ್ಷಕ ಅಭಿಯಂತರರು, ತುಂಗಭದ್ರಾ ಯೋಜನಾ ವೃತ್ತ, ಮುನಿರಾಬಾದ್ | ಸದಸ್ಯ ಕಾರ್ಯದರ್ಶಿ |

16. ಹಿರೇಹಳ್ಳ ಜಲಾಶಯ ಯೋಜನೆ

| ಕ್ರಸಂಃ | ವಿವರ | ಷರಾ |
|---|---|---|
| 1 | ಪ್ರಾದೇಶಿಕ ಆಯುಕ್ತರು, ಗುಲ್ಬರ್ಗಾ | ಅಧ್ಯಕ್ಷರು |
| 2 | ಜಿಲ್ಲಾಧಿಕಾರಿಗಳು, ಕೊಪ್ಪಳ | ಸದಸ್ಯರು |
| 3 | ಆಡಳಿತಾಧಿಕಾರಿಗಳು, ಟಿ.ಬಿ.ಪಿ. ಮುನಿರಾಬಾದ್ | ಸದಸ್ಯರು |
| 4 | ಯೋಜನಾ ಮಟ್ಟದ ನೀರು ಬಳಕೆದಾರರ ಸಹಕಾರ ಸಂಘಗಳ ಒಕ್ಕೂಟದ ಅಧ್ಯಕ್ಷರು (ರಚನೆಯಾಗಬೇಕಾಗಿದೆ) | ಸದಸ್ಯರು |
| 5 | ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿಗಳು, ಕೊಪ್ಪಳ | ಸದಸ್ಯರು |
| 6 | ಕಾರ್ಯಪಾಲಕ ಅಭಿಯಂತರರು, ಓ ಅಂಡ್ ಎಂ ವಿಭಾಗ, ಜೆಸ್ಕಾಂ, ಕೊಪ್ಪಳ | ಸದಸ್ಯರು |
| 7 | ಅಧೀಕ್ಷಕ ಅಭಿಯಂತರರು, ತುಂಗಭದ್ರಾ ಕಾಲುವೆ ನಿರ್ಮಾಣ ವೃತ್ತ ಯರ್‌ಮರಸ್ ಶಿಬಿರ | ಸದಸ್ಯರು |
| 8 | ಅಧೀಕ್ಷಕ ಅಭಿಯಂತರರು, ತುಂಗಭದ್ರಾ ಯೋಜನಾ ವೃತ್ತ, ಮುನಿರಾಬಾದ್ | ಸದಸ್ಯ ಕಾರ್ಯದರ್ಶಿ |

17. ಹಗರಿಬೊಮ್ಮನಹಳ್ಳಿ ಜಲಾಶಯ ಯೋಜನೆ

| ಕ್ರಸಂಃ | ವಿವರ | ಷರಾ |
|---|---|---|
| 1 | ಪ್ರಾದೇಶಿಕ ಆಯುಕ್ತರು, ಗುಲ್ಬರ್ಗಾ | ಅಧ್ಯಕ್ಷರು |
| 2 | ಜಿಲ್ಲಾಧಿಕಾರಿಗಳು, ಬಳ್ಳಾರಿ | ಸದಸ್ಯರು |
| 3 | ಆಡಳಿತಾಧಿಕಾರಿಗಳು, ಟಿ.ಬಿ.ಪಿ. ಮುನಿರಾಬಾದ್ | ಸದಸ್ಯರು |

| ಕ್ರಸಂಃ | ವಿವರ | ಷರಾ |
|---|---|---|
| 4 | ಅಧ್ಯಕ್ಷರು, ನೀರು ಬಳಕೆದಾರರ ಸಹಕಾರ ಸಂಘಗಳ ಒಕ್ಕೂಟ (ರಚನೆಯಾಗಬೇಕಾಗಿರುತ್ತದೆ) | ಸದಸ್ಯರು |
| 5 | ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿಗಳು, ಬಳ್ಳಾರಿ | ಸದಸ್ಯರು |
| 6 | ಕಾರ್ಯಪಾಲಕ ಅಭಿಯಂತರರು, ಕೆ.ಪಿ.ಟಿ.ಸಿ.ಎಲ್., ಹೊಸಪೇಟೆ | ಸದಸ್ಯರು |
| 7 | ಸೂಪರಿಂಟೆಂಡಿಂಗ್ ಇಂಜಿನಿಯರ್, ತುಂಗಭದ್ರಾ ಕಾಲುವೆ ನಿರ್ಮಾಣ ವೃತ್ತ ಯರ್‌ಮರಸ್ | ಸದಸ್ಯರು |
| 8 | ಸೂಪರಿಂಟೆಂಡಿಂಗ್ ಇಂಜಿನಿಯರ್, ತುಂಗಭದ್ರಾ ಯೋಜನಾ ವೃತ್ತ, ಮುನಿರಾಬಾದ್ | ಸದಸ್ಯ ಕಾರ್ಯದರ್ಶಿ |

18. ನಾರಿಹಳ್ಳ ಜಲಾಶಯ ಯೋಜನೆ

| ಕ್ರಸಂಃ | ವಿವರ | ಷರಾ |
|---|---|---|
| 1 | ಪ್ರಾದೇಶಿಕ ಆಯುಕ್ತರು, ಗುಲ್ಬರ್ಗಾ | ಅಧ್ಯಕ್ಷರು |
| 2 | ಜಿಲ್ಲಾಧಿಕಾರಿಗಳು, ಬಳ್ಳಾರಿ | ಸದಸ್ಯರು |
| 3 | ಆಡಳಿತಾಧಿಕಾರಿಗಳು, ಟಿ.ಬಿ.ಪಿ. ಮುನಿರಾಬಾದ್ | ಸದಸ್ಯರು |
| 4 | ಅಧ್ಯಕ್ಷರು, ನೀರು ಬಳಕೆದಾರರ ಸಹಕಾರ ಸಂಘಗಳ ಒಕ್ಕೂಟ (ರಚನೆಯಾಗಬೇಕಾಗಿರುತ್ತದೆ) | ಸದಸ್ಯರು |
| 5 | ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿಗಳು, ಬಳ್ಳಾರಿ | ಸದಸ್ಯರು |
| 6 | ಕಾರ್ಯಪಾಲಕ ಅಭಿಯಂತರರು, ಓ ಅಂಡ್ ಎಂ ವಿಭಾಗ, ಜಸ್ಕಾಂ, ಬಳ್ಳಾರಿ | ಸದಸ್ಯರು |
| 7 | ಸೂಪರಿಂಟೆಂಡಿಂಗ್ ಇಂಜಿನಿಯರ್, ತುಂಗಭದ್ರಾ ಕಾಲುವೆ ನಿರ್ಮಾಣ ವೃತ್ತ ಯರ್‌ಮರಸ್ | ಸದಸ್ಯರು |
| 8 | ಸೂಪರಿಂಟೆಂಡಿಂಗ್ ಇಂಜಿನಿಯರ್, ತುಂಗಭದ್ರಾ ಯೋಜನಾ ವೃತ್ತ, ಮುನಿರಾಬಾದ್ | ಸದಸ್ಯ ಕಾರ್ಯದರ್ಶಿ |

19. ಕನಕನಾಲಾ ಯೋಜನೆ

| ಕ್ರಸಂಃ | ವಿವರ | ಷರಾ |
|---|---|---|
| 1 | ಪ್ರಾದೇಶಿಕ ಆಯುಕ್ತರು, ಗುಲ್ಬರ್ಗಾ | ಅಧ್ಯಕ್ಷರು |
| 2 | ಜಿಲ್ಲಾಧಿಕಾರಿಗಳು, ಬಳ್ಳಾರಿ | ಸದಸ್ಯರು |
| 3 | ಆಡಳಿತಾಧಿಕಾರಿಗಳು, ಟಿ.ಬಿ.ಪಿ. ಮುನಿರಾಬಾದ್ | ಸದಸ್ಯರು |
| 4 | ಅಧ್ಯಕ್ಷರು, ನೀರು ಬಳಕೆದಾರರ ಸಹಕಾರ ಸಂಘಗಳ ಒಕ್ಕೂಟ (ರಚನೆಯಾಗಬೇಕಾಗಿರುತ್ತದೆ) | ಸದಸ್ಯರು |
| 5 | ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿಗಳು, ಬಳ್ಳಾರಿ/ಕೊಪ್ಪಳ | ಸದಸ್ಯರು |
| 6 | ಕಾರ್ಯಪಾಲಕ ಅಭಿಯಂತರರು, ಓ ಅಂಡ್ ಎಂ ವಿಭಾಗ, ಜಸ್ಕಾಂ, ಕೊಪ್ಪಳ | ಸದಸ್ಯರು |
| 7 | ಸೂಪರಿಂಟೆಂಡಿಂಗ್ ಇಂಜಿನಿಯರ್, ತುಂಗಭದ್ರಾ ಕಾಲುವೆ ನಿರ್ಮಾಣ ವೃತ್ತ ಯರ್‌ಮರಸ್ | ಸದಸ್ಯರು |
| 8 | ಸೂಪರಿಂಟೆಂಡಿಂಗ್ ಇಂಜಿನಿಯರ್, ತುಂಗಭದ್ರಾ ಯೋಜನಾ ವೃತ್ತ, ಮುನಿರಾಬಾದ್ | ಸದಸ್ಯ ಕಾರ್ಯದರ್ಶಿ |

20. ಮಸ್ಕಿನಾಲಾ ಯೋಜನೆ

| ಕ್ರಸಂಃ | ವಿವರ | ಷರಾ |
|---|---|---|
| 1 | ಪ್ರಾದೇಶಿಕ ಆಯುಕ್ತರು, ಗುಲ್ಬರ್ಗಾ | ಅಧ್ಯಕ್ಷರು |
| 2 | ಜಿಲ್ಲಾಧಿಕಾರಿಗಳು, ರಾಯಚೂರು | ಸದಸ್ಯರು |
| 3 | ಆಡಳಿತಾಧಿಕಾರಿಗಳು, ಟಿ.ಬಿ.ಪಿ. ಮುನಿರಾಬಾದ್ | ಸದಸ್ಯರು |
| 4 | ಅಧ್ಯಕ್ಷರು, ನೀರು ಬಳಕೆದಾರರ ಸಹಕಾರ ಸಂಘಗಳ ಒಕ್ಕೂಟ (ರಚನೆಯಾಗಬೇಕಾಗಿರ್ತದೆ) | ಸದಸ್ಯರು |
| 5 | ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿಗಳು, ರಾಯಚೂರು | ಸದಸ್ಯರು |
| 6 | ಕಾರ್ಯಪಾಲಕ ಅಭಿಯಂತರರು, ಓ ಅಂಡ್ ಎಂ ವಿಭಾಗ, ಜಸ್ಕಾಂ, ರಾಯಚೂರು | ಸದಸ್ಯರು |
| 7 | ಸೂಪರಿಂಟೆಂಡಿಂಗ್ ಇಂಜಿನಿಯರ್, ತುಂಗಭದ್ರಾ ಕಾಲುವೆ ನಿರ್ಮಾಣ ವೃತ್ತ ಯರ್‌ಮರಸ್ | ಸದಸ್ಯರು |
| 8 | ಸೂಪರಿಂಟೆಂಡಿಂಗ್ ಇಂಜಿನಿಯರ್, ತುಂಗಭದ್ರಾ ಯೋಜನಾ ವೃತ್ತ, ಮುನಿರಾಬಾದ್ | ಸದಸ್ಯ ಕಾರ್ಯದರ್ಶಿ |

21. ಮುಲ್ಲಾಮಾರಿ ಯೋಜನೆ

| ಕ್ರಸಂಃ | ವಿವರ | ಷರಾ |
|---|---|---|
| 1 | ಪ್ರಾದೇಶಿಕ ಆಯುಕ್ತರು, ಗುಲ್ಬರ್ಗಾ | ಅಧ್ಯಕ್ಷರು |
| 2 | ಜಿಲ್ಲಾಧಿಕಾರಿಗಳು, ಬೀದರ್ | ಸದಸ್ಯರು |
| 3 | ಆಡಳಿತಾಧಿಕಾರಿಗಳು, ಕಾಡಾ ನೀರಾವರಿ ಯೋಜನೆಗಳ ವಲಯ, ಗುಲ್ಬರ್ಗಾ | ಸದಸ್ಯರು |
| 4 | ಸೂಪರಿಂಟೆಂಡೆಂಟ್ ಆಫ್ ಪೋಲಿಸ್, ಬೀದರ್ | ಸದಸ್ಯರು |
| 5 | ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿಗಳು, ರಾಯಚೂರು | ಸದಸ್ಯರು |
| 6 | ಕಾರ್ಯಪಾಲಕ ಅಭಿಯಂತರರು, ಕೆ.ಪಿ.ಟಿ.ಸಿ.ಎಲ್., ಬೀದರ್ | ಸದಸ್ಯರು |
| 7 | ಅಧ್ಯಕ್ಷರು, ನೀರು ಬಳಕೆದಾರರ ಸಹಕಾರ ಸಂಘಗಳ ಒಕ್ಕೂಟ (ಮುಲ್ಲಾಮಾರಿ ನೀರಾವರಿ ಯೋಜನೆ) | ಸದಸ್ಯರು |
| 8 | ಅಧೀಕ್ಷಕ ಅಭಿಯಂತರರು, ಯೋಜನೆ ನಿರ್ಮಾಣ ವೃತ್ತ, ಬೀದರ್. | ಸದಸ್ಯ ಕಾರ್ಯದರ್ಶಿ |

22. ಹಿಪ್ಪರಗಿ ಯೋಜನೆ

| ಕ್ರಸಂಃ | ವಿವರ | ಷರಾ |
|---|---|---|
| 1 | ಪ್ರಾದೇಶಿಕ ಆಯುಕ್ತರು, ಬೆಳಗಾವಿ ಜಿಲ್ಲೆ, ಬೆಳಗಾವಿ | ಅಧ್ಯಕ್ಷರು |
| 2 | ಆಡಳಿತಾಧಿಕಾರಿಗಳು, ಕಾಡಾ ಮ ಮತ್ತು ಘ ಯೋಜನೆಗಳು, ಬೆಳಗಾವಿ | ಸದಸ್ಯರು |
| 3 | ಜಿಲ್ಲಾಧಿಕಾರಿಗಳು, ಬಾಗಲಕೋಟೆ | ಸದಸ್ಯರು |
| 4 | ಸೂಪರಿಂಟೆಂಡಿಂಗ್ ಇಂಜಿನಿಯರ್, ಹೆಸ್ಕಾಮ್, ಬೆಳಗಾವಿ | ಸದಸ್ಯರು |
| 5 | ಸೂಪರಿಂಟೆಂಡೆಂಟ್ ಆಫ್ ಪೋಲಿಸ್, ಬೆಳಗಾವಿ | ಸದಸ್ಯರು |
| 6 | ಸೂಪರಿಂಟೆಂಡೆಂಟ್ ಆಫ್ ಪೋಲಿಸ್, ಬಾಗಲಕೋಟೆ | ಸದಸ್ಯರು |
| 7 | ಕಾರ್ಯ ನಿರ್ವಾಹಕ ಇಂಜಿನಿಯರ್, ಕನೀನಿನಿ, ಹೆಚ್‌ಬಿಸಿ ವಿಭಾಗ, ಅಥಣಿ. | ಸದಸ್ಯರು |
| 8 | ಕಾರ್ಯ ನಿರ್ವಾಹಕ ಇಂಜಿನಿಯರ್, ಹೆಸ್ಕಾಮ್, ಘಟಪ್ರಭಾ | ಸದಸ್ಯರು |
| 9 | ಕಾರ್ಯ ನಿರ್ವಾಹಕ ಇಂಜಿನಿಯರ್, ಹೆಸ್ಕಾಮ್, ಚಿಕ್ಕೋಡಿ. | ಸದಸ್ಯರು |
| 10 | ಕಾರ್ಯ ನಿರ್ವಾಹಕ ಇಂಜಿನಿಯರ್, ಹೆಸ್ಕಾಮ್, ಜಮಖಂಡಿ. | ಸದಸ್ಯರು |
| 11 | ಸೂಪರಿಂಟೆಂಡಿಂಗ್ ಇಂಜಿನಿಯರ್, ಕನೀನಿನಿ, ಜಿಎಲ್‌ಬಿಸಿ ವೃತ್ತ, ಜಮಖಂಡಿ. | ಸದಸ್ಯ ಕಾರ್ಯದರ್ಶಿ |

**ಐ.ಡಿ.ಧಮನ್**

ಪಿ.ಆರ್. 1519 ಸರ್ಕಾರದ ಅಧೀನ ಕಾರ್ಯದರ್ಶಿ (ತಾಂ)

ಜಲ ಸಂಪನ್ಮೂಲ ಇಲಾಖೆ, (ಕೃಭಾಜನಿನಿ, ವಿಶೇಷ ಕೋಶ)

**COMMERCE AND INDUSTRIES SECRETARIAT**

**Subject :** Project proposal of M/s Reliance Industries Ltd., to establish a "Integrated Agri-Retail Business Centres consisting of 3 Food processing & Distribution Centres, 51 Retail outlets (Hyper markets) and 75 Rural Business Hubs" in Karnataka.

**Read:** Proceedings of the 8th State High Level Clearance Committee [SHLCC] meeting held on 23.2.2007.

**Preamble:**

M/s Reliance Industries Ltd., to establish a "Integrated Agri-Retail Business Centers consisting of 3 Food processing & Distribution Centers at Bangalore, Mangalore & Hubli-Dharwad in 100 acres of land at each location, 51 Retail outlets (Hyper markets) in 10 acres of land at each location and 75 Rural Business Hubs in acres of land at each location" in Karnataka, with an investment of Rs.2,000 crores, The project proposed to provide employment to about 30,000 persons. The Company had requested approval of the project for sanction of various Infrastructure facilities as well as incentives and concessions.

The State High Level Clearance Committee, [SHLCC] after detailed discussion, decided to approve the project proposal of M/s Reliance Retail Ltd., and recommend for grant Infrastructure facilities and incentives & concessions. Hence the following order.

**GOVERNMENT ORDER NO: CI 167 SPI 2007, BANGALORE, DATED: 23rd August 2007**

In the circumstances explained above, Government is pleased to approve the project of M/s Reliance Industries Ltd., to establish a " Integrated Agri-Retail Business Centres consisting of 3 Food Processing & Distribution Centres at Bangalore, Mangalore and Hubli-Dharwad, 51 Retail outlets (Hyper

markets) and 75 Rural Business Hubs" in Karnataka, with an investment of Rs.2,000 crores and extend the following infrastructure facilities, incentives and concessions.

**INFRASTRUCTURE FACILITIES:**

**Land:** 100 acres of land for each food processing & distribution centres at Bangalore, Mangalore and Hubli-Dharwad, 10 acres of each hyper markets at 51 locations and 10 acres for each rural business hubs at 75 locations (as per the list appended herewith) for the above projects shall be procured as under:

(a) Company to purchase the agricultural land from the farmers directly. The Revenue Dept. / Deputy Commissioners of respective Districts shall permit the company to buy the land U/s 109 of KLR Act in cases where the company wants to purchase the land directly and thereafter convert the same for industrial / commercial purpose.

(b) Company may also purchase the converted land from the landowners wherever it is available. The Deputy Commissioners shall facilitate conversion of land to non-agricultural purpose, wherever the company has entered into an agreement with farmers, farmers applied for conversion so as to transfer the converted land to company.

(c) In case, the company desires to acquire the land through KIADB, company shall obtain consent from all the farmers in such locations and thereafter KIADB shall initiate the acquisition of land.

**Power:** Concerned ESCOMs to provide required power.

**Water:** To be supplied from concerned Urban Water Agencies. The promoter is advised to set up sewage treatment plant, adopt water recycling and water harvesting.

**Incentivies and Concessions:** As per New Industrial Policy 2006-11 for Food Processing Centres only.

**Environment:** The promoters were advised to obtain CFE from KSPCB and ECC from MOEF, GOI.

**Employment:** The Company shall prepare a plan for development of human resource required for the project, train local people and provide employment to these trained local youth and comply with Government policy of Employment to local people. A copy of human resource development plan shall be sent to the Commissioner for Industrial Development & Director of Industries and Commerce Dept. for monitoring.

**Training:** The Company shall start training centres to develop human resource at Bangalore, Mangalore, Hubli-Dharwad, Gulbarga, Belgaum & Mysore immediately and other places in a phased manner. Wherever possible, Government will provide necessary support in terms of infrastructure facilities at cost of the company.

**Vendor Development:** Wherever there is scope for vendor development for the project, the Company shall prepare a vendor development plan, develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for Industrial Development & Director of Industries and Commerce Dept. for monitoring.

**Social Infrastructure Development:** The Company is advised to take up social infrastructure development projects in the vicinity of proposed location of the unit. A copy of such projects shall be sent to the Commissioner for Industrial Development & Director of Industries and Commerce Dept. for monitoring.

**Others:**

- The promoter shall take all statutory and other necessary clearances and shall submit milestones/progress in implementation of the project regularly, which will be monitored by the Departments concerned.
- This approval is subject to the provisions of Karnataka Agriculture Produce Marketing (Regulation) Act, 1996 as amended from time to time.

This approval is valid for a period of two years from the date of issue.

By Order and in the name of the Governor of Karnataka

**K.R.CHANDRAMMA**

Desk Officer ( Technical Cell)

Commerce & Industries Department

## Annexure A – List of locations

**Land Requirement for Integrated Agri-Retail Business in Karnataka**

| District | Food Processing & Distribution Centre | Retail Outlets | Rural Business Hubs | | |
|---|---|---|---|---|---|
| | Locations | | | | |
| Bagalkot | | Bagalkot | Bilgi | Jamkhandi | Mudhol |
| | | Ilkal | | | |
| | | Jamkhandi | | | |
| | | Rabkavi Banhatti | | | |
| Bangalore | Bangalore | Bangalore | Anekal | Bangalore North | Bangalore South |
| Bangalore Rural | | Channapatna | Channapatna | Devanhalli | Dod Ballapur |
| | | Dod Ballapur | Hoskote | Magadi | Nelamangala |
| | | Ramanagaram | Ramanagaram | | |
| Belgaum | | Belgaum | Athni | Belgaum | Chikodi |
| | | Gokak | Gokak | Hukeri | Khanapur |
| | | Nipani | Parasgad | Ramdurg | Raybag |
| | | | Sampgaon | | |
| Bellary | | Bellary | Bellary | Hagaribommana-halli | Hospet |
| | | Hospet | Siruguppa | | |
| Bidar | | Basavakalyan | | | |
| | | Bidar | | | |
| Bijapur | | Bijapur | | | |
| Chamaraja-nagar | | Chamrajnagar | Chamarajanagar | | |
| | | Kollegal | | | |
| Chikmagalur | | Chikmagalur | | | |
| Chitradurga | | Chitradurga | | | |
| Dakshina Kannada | Mangalore | Mangalore | Bantval | Puttur | |
| Davanagere | | Davanagere | Channagiri | Davanagere | Harihar |
| | | Harihar | Honnali | | |
| Dharwad | Hubli-Dharwad | Hubli-Dharwad | Navalgund | | |
| Gadag | | Gadag-Betigeri | | | |
| Gulbarga | | Gulbarga | Shorapur | | |
| | | Shahabad | | | |
| | | Yadgir | | | |
| Hassan | | Hassan | Arkalgud | Belur | Channarayapatna |
| | | | Hassan | Hole Narsipur | |

| District | Food Processing & Distribution Centre | Retail Outlets | Rural Business Hubs | | |
|---|---|---|---|---|---|
| Haveri | | Haveri | Hangal | | |
| | | Ranibennur | | | |
| Kolar | | Chik Ballapur | | | |
| | | Chintamani | Bangarapet | Chik Ballapur | Chintamani |
| | | Kolar | Gauribidanur | Kolar | Mulbagal |
| | | Robertson Pet | Sidlaghatta | | |
| Koppal | | Gangawati | Gangawati | | |
| | | Koppal | | | |
| Mandya | | Mandya | Krishnarajpet | Maddur | Malavalli |
| | | | Mandya | Pandavapura | Shrirangapattana |
| Uttara Kannada | | Sirsi | | | |
| Mysore | | Mysore | Heggadade vankote | Hunsur | Krishnarajanagara |
| | | | Mysore | Nanjangud | Piriyapatna |
| | | | Tirumakudal Narsipur | | |
| Raichur | | Raichur | Manvi | | |
| | | Sindhnur | | | |
| Shimoga | | Bhadravati | Bhadravati | Hosanagara | Sagar |
| | | Sagar | Shikarpur | Shimoga | Sorab |
| | | Shimoga | Tirthahalli | | |
| Tumkur | | Sira | Kunigal | Madhugiri | |
| | | Tiptur | | | |
| | | Tumkur | | | |
| Udupi | | Udupi | Kundapura | Udupi | |
| Uttara Kannada | | Dandeli | | | |
| | | Karwar | | | |
| **Total Locations** | **3** | **51** | **75** | | |

**K.R.CHANDRAMMA**
Desk Officer ( Technical Cell)
Commerce & Industries Department

P.R. 1521

## ಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ:** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಉತ್ತರ ಕನ್ನಡ ಜಿಲ್ಲಾ ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಯೋಇ 309 ಪಿಟಿಪಿ 94, ದಿನಾಂಕ:07.08.1995.
2) ಮಾನ್ಯ ಮುಖ್ಯಮಂತ್ರಿಯವರ ಸಚಿವಾಲಯದ ಟಿಪ್ಪಣಿ ಸಂಖ್ಯೆ. ಸಿಎಂ/ಅಕಾ/48/ನಾನಿ/07 ದಿನಾಂಕ: 04.07.2007.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ: 07.08.1995ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಈ ಆದೇಶದ ಮೇರೆಗೆ ಮಾನ್ಯ ಯೋಜನಾ ಸಚಿವರ ಶಿಫಾರಸ್ಸು ಮೇರೆಗೆ ಮೇಲೆ ಓದಲಾದ (2)ರ ದಿನಾಂಕ: 04.07.2007ರ ಮಾನ್ಯ ಮುಖ್ಯಮಂತ್ರಿಗಳ ಸಚಿವಾಲಯದ ಟಿಪ್ಪಣಿಯನ್ವಯ ಉತ್ತರ ಕನ್ನಡ ಜಿಲ್ಲಾ ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 54 ಯೋವಿವಿ 2007, ಬೆಂಗಳೂರು, ದಿನಾಂಕ: 27ನೇ ಜುಲೈ 2007**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಕೆಳಕಂಡ ಸದಸ್ಯರುಗಳನ್ನು ಉತ್ತರ ಕನ್ನಡ ಜಿಲ್ಲಾ ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನಾಗಿ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರ. ಸಂ. | ಜಿಲ್ಲೆ | ಅಭ್ಯರ್ಥಿಗಳ ಹೆಸರು |
|---|---|---|
| 1. | ಉತ್ತರ ಕನ್ನಡ | 1. ಪಿ.ಜಿ. ಭಟ್ಟ ಬರಗದ್ದೆ, ಬಿಸಗೋಡ ಪೋಸ್ಟ್, ತಾ. ಯಲ್ಲಾಪುರ.<br>2. ಗುರುರಾಜ ಚಿಂಚಕಂಡಿ, ಕಿರವತ್ತಿ ಪೋಸ್ಟ್, ತಾ.ಯಲ್ಲಾಪುರ.<br>3. ವಿಮಲಾ ಶಾಂತಪ್ಪ ಕಾನಾಪುರಕರ, ಅಂಚೆ: ಜನಗಾ, ಹಳಿಯಾಳ ಯೋಜನೆ ಮತ್ತು ಸಾಂಖ್ಯಿಕ, ಉತ್ತರ ಕನ್ನಡ ಜಿಲ್ಲೆ.<br>4. ನರೇಂದ್ರ ಎಸ್. ನೇತ್ರಕರ, ಅಂಚೆ: ಹುಲೇಕಲ್ಲ್, ಶಿರಸಿ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ.<br>5. ಶಾಂತರಾಮ ಬಿ.ಸಿದ್ದಿ, ಅಂಚೆ: ಪುರ್ಲೆಮನೆ, ಹಿತ್ಲಳ್ಳಿ, ಯಲ್ಲಾಪುರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್. ಶಿವಸ್ವಾಮಿ**

ಪಿ.ಆರ್. 1440

ಸರ್ಕಾರದ ಅಧೀನ ಕಾರ್ಯದರ್ಶಿ, 1 ಮತ್ತು 2 (ಪ್ರ),
ಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

**ವಿಷಯ:** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಯೋಇ 309 ಪಿಟಿಪಿ 94, ದಿನಾಂಕ:07.08.1995.

2) ಮಾನ್ಯ ಮುಖ್ಯಮಂತ್ರಿಯವರ ಸಚಿವಾಲಯದ ಟಿಪ್ಪಣಿ ಸಂಖ್ಯೆ. ಸಿಎಮ್/ಅ.ಕಾ/38/ನಾನಿ/07 ದಿನಾಂಕ: 27.06.2007.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ: 07.08.1995ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಈ ಆದೇಶದ ಮೇರೆಗೆ ಮಾನ್ಯ ಯೋಜನಾ ಸಚಿವರ ಶಿಫಾರಸ್ಸು ಮೇರೆಗೆ ಮೇಲೆ ಓದಲಾದ (2)ರ ದಿನಾಂಕ: 27.06.2007ರ ಮಾನ್ಯ ಮುಖ್ಯಮಂತ್ರಿಗಳ ಸಚಿವಾಲಯದ ಟಿಪ್ಪಣಿಯನ್ವಯ ಮೈಸೂರು ಜಿಲ್ಲೆಯ ಹೆಗಡೆದೇವನಕೋಟೆ ತಾಲ್ಲೂಕು, ಬಿಜಾಪುರ ಜಿಲ್ಲೆಯ ಬಸವನಬಾಗೇವಾಡಿ, ಮುದ್ದೇಬಿಹಾಳ ತಾಲ್ಲೂಕು, ಧಾರವಾಡ ಜಿಲ್ಲೆಯ ಕುಂದಗೋಳ ತಾಲ್ಲೂಕು, ಬಾಗಲಕೋಟೆ ಜಿಲ್ಲೆಯ ಮುಧೋಳ ತಾಲ್ಲೂಕು ಹಾಗೂ ಶಿವಮೊಗ್ಗ ಜಿಲ್ಲೆಯ ಶಿವಮೊಗ್ಗ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 37 ಯೋವಿವಿ 2007, ಬೆಂಗಳೂರು, ದಿನಾಂಕ: 31ನೇ ಜುಲೈ 2007**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಅನುಬಂಧ-Iರಲ್ಲಿ ನಮೂದಿಸಿರುವಂತೆ ಸದಸ್ಯರುಗಳನ್ನು ತಾಲ್ಲೂಕಿನ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನಾಗಿ ನಾಮ ನಿರ್ದೇಶನ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್. ಶಿವಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, 1 ಮತ್ತು 2 (ಪ್ರ),
ಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

**ಅನುಬಂಧ-1**

| ಕ್ರ. ಸಂ. | ತಾಲ್ಲೂಕು | ಅಭ್ಯರ್ಥಿಗಳ ಹೆಸರು |
|---|---|---|
| 1. | ಹೆಗ್ಗಡದೇವನಕೋಟೆ (ಮೈಸೂರು ಜಿಲ್ಲೆ) | 1. ಡಿ.ಪಿ. ಕರೀಗೌಡ ಬಿನ್ ಡಿ.ಹೆಚ್. ಪುಟ್ಟಣ್ಣ, ದಡದಹಳ್ಳಿ, ಹಂಚೀಪುರ ಅಂಚೆ, ಹೆಚ್.ಡಿ. ಕೋಟೆ.<br>2. ಜಿ.ಕೆ.ಕರಿಗೌಡ ಬಿನ್ ಲೇ ಕುಂಟೀಗೌಡ, ಗುಂಡತ್ತೂರು ಅಂತರಸಂತೆ, ಎನ್. ಬೆಳತ್ತೂರು ಅಂಚೆ, ಹೆಚ್.ಡಿ. ಕೋಟೆ.<br>3. ಶ್ರೀ ತಿಮ್ಮಯ್ಯ ಬಿನ್ ಲೇ.ಚೌಡಯ್ಯ ಕೊತ್ತೇಗಾಲ ಅಂಚೆ, ಸರಗೂರು, ಹೆಚ್.ಡಿ. ಕೋಟೆ.<br>4. ದಾಕ್ಷಾಯಿಣಿ ಕೋಂ ಶ್ರೀನಿವಾಸರಾಜು, ಮಹಾತ್ಮಗಾಂಧಿ ರಸ್ತೆ, ಹೆಚ್.ಡಿ. ಕೋಟೆ<br>5. ಲಕ್ಷ್ಮಣೇಗೌಡ ಬಿನ್ ಹೋಬಳೀಗೌಡ, 2ನೇ ಮುಖ್ಯರಸ್ತೆ, ಸರಗೂರು ಟೌನ್.<br>6. ಸಲೀಹ ಬೇಗಂ ಕೋಂ ಇಬ್ರಾಹಿಂ, ಮಗ್ಗೆ ಗ್ರಾಮ, ಅಂತರಸಂತೆ ಹೋ.ಹೆಚ್.ಡಿ. ಕೋಟೆ.<br>7. ಬೆಟ್ಟ ನಾಯಕ ಬೆನ್ ಬೆಟ್ಟ ನಾಯಕ, ಸಪ್ಪೆ ಗ್ರಾಮ ಕಸಬಾ ಹೋಬಳಿ, ಹೆಚ್.ಡಿ. ಕೋಟೆ. |
| 2. | ಬಸವನ ಬಾಗೇವಾಡಿ ತಾಲ್ಲೂಕು (ಬಿಜಾಪುರ ಜಿಲ್ಲೆ) | 1. ಬಸವರಾಜ ಸಂಗಪ್ಪ ಅವಟಿ, ತೋಟದ ಮನೆ, ಇಂಗಳೇಶ್ವರ ರಸ್ತೆ, ಬ.ಬಾಗೇವಾಡಿ, ಬಿಜಾಪುರ ಜಿ.<br>2. ಬಸವರಾಜ ಪಾಂಡು ನಾಯಕ, ನಂ.3, ಮಸಬಿನಾಳ ರಸ್ತೆ, ಬ.ಬಾಗೇವಾಡಿ, ಬಿಜಾಪುರ ಜಿಲ್ಲೆ.<br>3. ಸಬಿಲಾಲ ಅತ್ತಾರ, ಕೆ.ಸಾಲವಾಡಗಿ, ಬ.ಬಾಗೇವಾಡಿ, ಬಿಜಾಪುರ ಜಿಲ್ಲೆ.<br>4. ಶೇಖಪ್ಪ, ಬಸಪ್ಪ, ಸಂಗಣ್ಣವರ, ಚಮ್ಮಲಗಿ ಹೋ.ಬಸವನ ಬಾಗೇವಾಡಿ.<br>5. ಅಡಿವೆಪ್ಪ, ಚನ್ನಪ್ಪ, ಕೊಡಗಿ ಮುತ್ತಗಿ ಹೋ. ಬಸವನ ಬಾಗೇವಾಡಿ<br>6. ನಂದಬಸಪ್ಪ ಸಂಗಪ್ಪ ಚೌಧುರಿ, ಬಳೂತಿ ಹೋ. ಬಸವನ ಬಾಗೇವಾಡಿ.<br>7. ಶಾರದಾ, ಬಾಬು, ನಾಯಕೋಡಿ, ಮಸಿಬನಾಳ ಹೋ. ಬಸವನ ಬಾಗೇವಾಡಿ. |
| 3. | ಮುದ್ದೇಬಿಹಾಳ ತಾಲ್ಲೂಕು (ಬಿಜಾಪುರ ಜಿಲ್ಲೆ) | 1. ಮುರಿಗೆಪ್ಪ ಅಯ್ಯಪ್ಪ ಹಡಲಗೇರಿ, ಮುದ್ದೇಬಿಹಾಳ<br>2. ಜಲಾಲಸಾ ಲಾಳೀಸಾ ಮುದ್ನಾಳ, ಮುದ್ದೇಬಿಹಾಳ<br>3. ಸಿದ್ದಪ್ಪ ಮರಿಯಪ್ಪ ಕಟ್ಟಿಮನಿ, ನಾಲಕವಾಡ<br>4. ಬಸಪ್ಪ ಯಮುನಪ್ಪ ನಾಗಬೂಸೆ ನಾಲಕವಾಡ ಹೋ. ಮುದ್ದೇಬಿಹಾಳ.<br>5. ಬಿ.ಪಿ. ಕುಲಕರ್ಣಿ, ಮುದ್ದೇಬಿಹಾಳ.<br>6. ಮಲಕಪ್ಪ ರಂಗಪ್ಪ, ಮುದ್ದೇಬಿಹಾಳ.<br>7. ಶಕುಂತಲಾ ಕೋಂ. ರಾಜಶೇಖರ ಹಿರೇಮಠ, ತಾಳಿಕೋಟೆ, ಮುದ್ದೇಬಿಹಾಳ. |
| 4. | ಕುಂದಗೋಳ ತಾಲ್ಲೂಕು (ಧಾರವಾಡ ಜಿಲ್ಲೆ) | 1. ವೆಂಕನಗೌಡ ಎಸ್. ಕಂಠಪ್ಪಗೌಡ, ಹಿರೇಬೂದಿಹಾಳ ಹೋ. ಕುಂದಗೋಳ.<br>2. ಬಿ.ಹೆಚ್. ಮಾದರ, ದೇವನೂರು ಹೋ. ಕುಂದಗೋಳ.<br>3. ವೆಂಕಮ್ಮ ಮುರಗಿ, ಗುಡಗೇರಿ ಹೋ. ಕುಂದಗೋಳ.<br>4. ಲಕ್ಷ್ಮವ್ವ ಕೋಂ ಭೀಮಪ್ಪ ದೊಟ್ಟಮನಿ, ಹೆಚ್. ಗುಂಜಳ ಹೋ. ಕುಂದಗೋಳ.<br>5. ಮೃತ್ಯುಂಜಯ ಕಣವಿ. ನೆಲಗುಟ್ಟ, ಕುಂದಗೋಳ<br>6. ಬೀರಪ್ಪ ಆರ್ ಕುರುಬರ, ಕಳಸ ಹೋ. ಕುಂದಗೋಳ.<br>7. ಗುರುಸಿದ್ದಪ್ಪ ನಾಯ್ಕರ್, ಸಂಶಿ, ಕುಂದಗೋಳ. |

| ಕ್ರ. ಸಂ. | ತಾಲ್ಲೂಕು | ಅಭ್ಯರ್ಥಿಗಳ ಹೆಸರು |
|---|---|---|
| 5. | ಮುದೋಳ ತಾಲ್ಲೂಕು (ಬಾಗಲಕೋಟೆ ಜಿಲ್ಲೆ) | 1. ಬಸವರಾಜು ಐ.ಜಮಖಂಡಿ, ಮುಗಳಖೋಡ, ಮುಧೋಳ ತಾ.<br>2. ಜಗದೀಶ ಜಯಪ್ಪ ಮುಳ್ಳೂರು, ಗುಲಗಾಲ ಜಂಬಗಿ, ಮುಧೋಳ ತಾ.<br>3. ಹೊಳೆಬಸಪ್ಪ ತಿಮ್ಮಪ್ಪ ದಂಡಿನ, ಚಿತ್ರಬಾನುಕೋಟೆ, ಮುಧೋಳ ತಾ.<br>4. ವಸಂತ ಜಿ.ದೊಡ್ಡಮನಿ, ಚೌಡಾಪುರ, ಮುಧೋಳ.<br>5. ರಾಜಶ್ರೀ ಎಸ್. ಸಣ್ಣಪ್ಪನವರ, ಸಿದ್ದರಾಮೇಶ್ವರ ಕಾಲೋನಿ, ಮುಧೋಳ ತಾ.<br>6. ನಜೀರಸಾಹೇಬ .ಎಂ.ಮುಲ್ಲಾ ಕಸಬಾ ಜಂಬಗಿ. |
| 6. | ಶಿವಮೊಗ್ಗ ತಾಲ್ಲೂಕು (ಶಿವಮೊಗ್ಗ ಜಿಲ್ಲೆ) | 1. ಬಿ.ಟಿ. ಈಶ್ವರಪ್ಪ ಬಿನ್ ತೀರ್ಥಪ್ಪ, ಬನ್ನಿಕೆರೆ, ಕೊಮ್ಮನಾಳು ಅಂಚೆ, ಶಿವಮೊಗ್ಗ ತಾ.<br>2. ಅನಂತ ಪದ್ಮನಾಭ ಕಿಣಿ, ಸಿರಿಗೆರೆ, ಆಯನೂರು ಅಂಚೆ, ಶಿವಮೊಗ್ಗ ತಾ.<br>3. ಡಿ.ಬಿ. ಹನುಮಯ್ಯ ಬಿನ್ ಭೀಮನಾಯ್ಕ, ದುಮ್ಮಳ್ಳಿ ತಾಂಡಾ, ನಿದಿಗೆ ಅಂಚೆ, ಶಿವಮೊಗ್ಗ ತಾ.<br>4. ವೇದಾವತಿ ಕೋಂ ನಂಜುಂಡಪ್ಪ, ಗಾಜನೂರು, ಶಿವಮೊಗ್ಗ ತಾ.<br>5. ಹೆಚ್.ಕೆ. ಸಿದ್ದಪ್ಪ ಬಿನ್ ಕಾಡಪ್ಪ ಹೊಳಲೂರು ಅಂಚೆ, ಶಿವಮೊಗ್ಗ ತಾ.<br>6. ನೂರ್ ಅಹ್ಮದ್ ಬಿನ್ ಸುಲ್ತಾನ್ ಅಹಮದ್, ಗಾಜನೂರು ಅಂಚೆ, ಶಿವಮೊಗ್ಗ ತಾ. |

**ಬಿ.ಎಸ್. ಶಿವಸ್ವಾಮಿ**

ಪಿ.ಆರ್. 1441 ಸರ್ಕಾರದ ಅಧೀನ ಕಾರ್ಯದರ್ಶಿ, 1 ಮತ್ತು 2 (ಪ್ರ),
ಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

**ವಿಷಯ:** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ರಾಯಚೂರು ಜಿಲ್ಲಾ ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಯೋಇ 309 ಪಿಟಿಪಿ 94, ದಿನಾಂಕ:07.08.1995.

2) ಮಾನ್ಯ ಮುಖ್ಯಮಂತ್ರಿಯವರ ಸಚಿವಾಲಯದ ಟಿಪ್ಪಣಿ ಸಂಖ್ಯೆ. ಸಿಎಂ/ಅಕಾ/34/ನಾನಿ/07 ದಿನಾಂಕ: 27.06.2007.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ: 07.08.1995ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಈ ಆದೇಶದ ಮೇರೆಗೆ ಮಾನ್ಯ ಯೋಜನಾ ಸಚಿವರ ಶಿಫಾರಸ್ಸು ಮೇರೆಗೆ ಮೇಲೆ ಓದಲಾದ (2)ರ ದಿನಾಂಕ: 27.06.2007ರ ಮಾನ್ಯ ಮುಖ್ಯಮಂತ್ರಿಗಳ ಸಚಿವಾಲಯದ ಟಿಪ್ಪಣಿಯನ್ವಯ ರಾಯಚೂರು ಜಿಲ್ಲಾ ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 52 ಯೋವಿವಿ 2007, ಬೆಂಗಳೂರು, ದಿನಾಂಕ: 27ನೇ ಜುಲೈ 2007**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಕೆಳಕಂಡ ಸದಸ್ಯರುಗಳನ್ನು ರಾಯಚೂರು ಜಿಲ್ಲಾ ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನಾಗಿ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರ. ಸಂ. | ಜಿಲ್ಲೆ | ಅಭ್ಯರ್ಥಿಗಳ ಹೆಸರು |
|---|---|---|
| 1. | ರಾಯಚೂರು | 1. ವಿರುಪಾಕ್ಷಿ ಪಾಟೀಲ್ ಬಿನ್ ಶರಣಪ್ಪಗೌಡ ಹಳೇಮನಿ ನುಗಡೋಣಿ, ತಾ:ಮಾನವಿ, ರಾಯಚೂರು ಜಿಲ್ಲೆ.<br>2. ಶಿವರಾಜ ಮರ್ದಾಹಿಳ್, ರಾಯಚೂರು<br>3. ಶೋಭಾ ಪೀರನಾಯಕ, ರಾಯಚೂರು |

| ಕ್ರ. ಸಂ. | ಜಿಲ್ಲೆ | ಅಭ್ಯರ್ಥಿಗಳ ಹೆಸರು |
|---|---|---|
| | | 4. ಜಯಪ್ಪ ಬಂಡಿ, ಹರಿಜನವಾಡಾ, ರಾಯಚೂರು<br>5. ಅಮ್ಮದ್ ಅರಾಬ್ ಮಲ್ಲಾ, ರಾಯಚೂರು.<br>6. ಹನಮಂತರಾಯ ನಾಯಕ್, ಸಾ: ದೇವದುರ್ಗ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಎಸ್. ಶಿವಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ, 1 ಮತ್ತು 2 (ಪ್ರ),
ಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

ಪಿ.ಆರ್. 1442

**ವಿಷಯ:** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಬೆಂಗಳೂರು ನಗರ ಜಿಲ್ಲಾ ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಯೋಇ 309 ಪಿಟಿಪಿ 94, ದಿನಾಂಕ:07.08.1995.
2) ಮಾನ್ಯ ಮುಖ್ಯಮಂತ್ರಿಯವರ ಸಚಿವಾಲಯದ ಟಿಪ್ಪಣಿ ಸಂಖ್ಯೆ. ಸಿಎಂ/ಅಕಾ/58/ನಾನಿ/07 ದಿನಾಂಕ: 04.07.2007.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ: 07.08.1995ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಈ ಆದೇಶದ ಮೇರೆಗೆ ಮಾನ್ಯ ಯೋಜನಾ ಸಚಿವರ ಶಿಫಾರಸ್ಸು ಮೇರೆಗೆ ಮೇಲೆ ಓದಲಾದ (2)ರ ದಿನಾಂಕ: 04-07-2007ರ ಮಾನ್ಯ ಮುಖ್ಯಮಂತ್ರಿಗಳ ಸಚಿವಾಲಯದ ಟಿಪ್ಪಣಿಯನ್ವಯ ಬೆಂಗಳೂರು ನಗರ ಜಿಲ್ಲಾ ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 55 ಯೋವಿವಿ 2007, ಬೆಂಗಳೂರು, ದಿನಾಂಕ: 27ನೇ ಜುಲೈ 2007**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಕೆಳಕಂಡ ಸದಸ್ಯರುಗಳನ್ನು ಬೆಂಗಳೂರು ನಗರ ಜಿಲ್ಲಾ ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನಾಗಿ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರ. ಸಂ. | ಜಿಲ್ಲೆ | ಅಭ್ಯರ್ಥಿಗಳ ಹೆಸರು |
|---|---|---|
| 1. | ಬೆಂಗಳೂರು ನಗರ ಜಿಲ್ಲೆ | 1. ಎಂ. ಕೃಷ್ಣಮೂರ್ತಿ, ತಂದೆ: ಲೇಟ್ ಮುನಿಸ್ವಾಮಯ್ಯ, ಚಿಕ್ಕಬೊಮ್ಮಸಂದ್ರ ಪೋಸ್ಟ್, ಯಶವಂತಪುರ ಹೋಬಳಿ, ಬೆಂಗಳೂರು ಉತ್ತರ ತಾಲ್ಲೂಕು.<br>2. ಗೋಪಾಲಕೃಷ್ಣ, ಮಾಜಿ ಉಪ ಅಧ್ಯಕ್ಷರು, ಚಿಗಣಿ ಟೌನ್, ಬೆಂಗಳೂರು-562 106.<br>3. ಜಯಣ್ಣ, ತಂದೆ: ಸಂಜೀವಯ್ಯ, ತಂದೆಯ ನೆರಳು, ದಿಬ್ಬೂರ ಹಳ್ಳಿ, ಕಾಕೋಳು ಪೋಸ್ಟ್, ಹೆಸರಘಟ್ಟ, ಹೋಬಳಿ, ಬೆಂಗಳೂರು-560 089.<br>4. ಎಂ.ಸಿರಾಜ್ ಅಹಮದ್ ನಂ.33, 3ನೇ ಕ್ರಾಸ್, 25ನೇ ಮೈನ್, ಜೆ.ಪಿ. ನಗರ, 1ನೇ ಹಂತ, ಬೆಂಗಳೂರು-560 078.<br>5. ಹೊ. ಗಿರಿರಾಜ್, ನಂ.108, 1ನೇ ಹಂತ, 6ನೇ ಘಟ್ಟ, 2ನೇ ಮೈನ್, ಪಶ್ಚಿಮ ಕಾರ್ಡ್ ರಸ್ತೆ, ರಾಜಾಜಿನಗರ, ಬೆಂಗಳೂರು-560 044<br>6. ನೂರ್ ಜಹಾನ್, ನಂ.29, 3ನೇ ಕ್ರಾಸ್, ಕೆ.ಎಸ್. ಗಾರ್ಡನ್, ಲಾಲ್‌ಬಾಗ್ ರೋಡ್, ಬೆಂಗಳೂರು-560 027. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಎಸ್. ಶಿವಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ, 1 ಮತ್ತು 2 (ಪ್ರ),
ಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

ಪಿ.ಆರ್. 1443

**ವಿಷಯ:** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಹಾಸನ ಜಿಲ್ಲೆ ಬೇಲೂರು ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಯೋಇ 309 ಪಿಟಿಪಿ 94, ದಿನಾಂಕ:07.08.1995.
2) ಮಾನ್ಯ ಮುಖ್ಯಮಂತ್ರಿಯವರ ಸಚಿವಾಲಯದ ಟಿಪ್ಪಣಿ ಸಂಖ್ಯೆ. ಸಿಎಂ/ಅಕಾ/57/ನಾನಿ/07 ದಿನಾಂಕ: 04.07.2007.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ: 07.08.1995ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಈ ಆದೇಶದ ಮೇರೆಗೆ ಮಾನ್ಯ ಯೋಜನಾ ಸಚಿವರ ಶಿಫಾರಸ್ಸು ಮೇರೆಗೆ ಮೇಲೆ ಓದಲಾದ (2)ರ ದಿನಾಂಕ: 04-07-2007ರ ಮಾನ್ಯ ಮುಖ್ಯಮಂತ್ರಿಗಳ ಸಚಿವಾಲಯದ ಟಿಪ್ಪಣಿಯನ್ವಯ ಹಾಸನ ಜಿಲ್ಲೆ, ಬೇಲೂರು ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 56 ಯೋವಿವಿ 2007, ಬೆಂಗಳೂರು, ದಿನಾಂಕ: 27ನೇ ಜುಲೈ 2007**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಕೆಳಕಂಡ ಸದಸ್ಯರುಗಳನ್ನು ಹಾಸನ ಜಿಲ್ಲೆ, ಬೇಲೂರು ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನಾಗಿ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರ. ಸಂ. | ತಾಲ್ಲೂಕು | ಅಭ್ಯರ್ಥಿಗಳ ಹೆಸರು |
|---|---|---|
| 1. | ಬೇಲೂರು ತಾಲ್ಲೂಕು | 1. ಶ್ರೀ ಗಂಗೇಶ್, ಬಿನ್ ಹೆಚ್.ಆರ್. ರಂಗೇಗೌಡ, ಚಿನ್ನೇನಹಳ್ಳಿ, ಕಸಬಾ ಹೋಬಳಿ, ಬೇಲೂರು ತಾ: ಹಾಸನ ಜಿಲ್ಲೆ.<br>2. ಶ್ರೀ ಬಿ.ಪಿ. ಸುರೇಶ್, ಬಿನ್ ಪುಟ್ಟಸ್ವಾಮಿ ಗೌಡ, ಕಾಫಿ ಬೆಳೆಗಾರರು, ಬೆಳ್ಳಾವರ, ಬಿಕ್ಕೋಡು ಹೋಬಳಿ ಬೇಲೂರು ತಾ: ಹಾಸನ ಜಿಲ್ಲೆ.<br>3. ಶ್ರೀ ಮಂಜುನಾಥ ಬಿನ್ ಬಸವಯ್ಯ, ಚಿಕ್ಕಬ್ಯಾಡಿಗೆರೆ ಕಸಬಾ ಹೋಬಳಿ, ಬೇಲೂರು ತಾ: ಹಾಸನ ಜಿಲ್ಲೆ.<br>4. ಶ್ರೀ ಜಾಫರ್ ಅಲಿ ಬಿನ್ ಆಸ್ಕರ್ ಅಲಿ, ಅರೇಹಳ್ಳಿ, ಅರೇಹಳ್ಳಿ ಹೋಬಳಿ, ಬೇಲೂರು ತಾ: ಹಾಸನ ಜಿಲ್ಲೆ.<br>5. ಶ್ರೀಮತಿ ಗಾಯತ್ರಿ, ಕೋಂ.ಪ್ರಭಾಕರ್, ಗ್ರಾಮ ಪಂಚಾಯತಿ ಸದಸ್ಯರು, ಹಗರೆ, ಮಾದಿಹಳ್ಳಿ ಹೋಬಳಿ, ಬೇಲೂರು ತಾ: ಹಾಸನ ಜಿಲ್ಲೆ.<br>6. ಶ್ರೀ ರುದ್ರೇಗೌಡ, ಬಿನ್ ರಂಗೇಗೌಡ, ಗೋಣಿ ಸೋಮನಹಳ್ಳಿ, ಹಳೇಬಿಡು ಹೋಬಳಿ, ಬೇಲೂರು ತಾ: ಹಾಸನ ಜಿಲ್ಲೆ.<br>7. ಶ್ರೀ ನಾಗರಾಜ, ಬಿನ್ ರಂಗಾನಾಯಕ್, ಮತಿಘಟ್ಟ ಗ್ರಾಮ, ಹಳೇಬಿಡು ಹೋಬಳಿ, ಬೇಲೂರು ತಾ: ಹಾಸನ ಜಿಲ್ಲೆ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್. ಶಿವಸ್ವಾಮಿ**

ಪಿ.ಆರ್. 1444

ಸರ್ಕಾರದ ಅಧೀನ ಕಾರ್ಯದರ್ಶಿ, 1 ಮತ್ತು 2 (ಪ್ರ),
ಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

## COMMERCE AND INDUSTRIES SECRETARIAT

**Preamble:**

M/s Krishna Industries have filed an application dated 19.02.2005 for sanction of Mining Lease in Bhavihalli Village of Sandur Taluk, Bellary District over an area of 2250-00 acres for Iron ore and Manganese ore.

M/s Krishna Mining Company have filed an application dated 19.02.2005 for sanction of Mining Lease in Bhavihalli Village of Sandur Taluk, Bellary District over an area of 2900-00 acres for Iron ore and Manganese ore.

M/s B. Kumara Gouda and Sons have filed an application dated 09.03.2005 for sanction of Mining Lease in Bhavihalli Village of Sandur Taluk, Bellary District over an area of 325.00 hectares for BHQ and Iron ore.

Shri M. Habibulla have filed an application dated 15.07.2005 for sanction of Mining Lease in Susheela Nagar Village of Sandur Taluk, Bellary District over an area of 295.26 acres for Iron ore.

Shri Gopala Krishna V.Patavari have filed an application dated 06.09.2005 for sanction of Mining Lease in Doulath Pura Village of Sandur Taluk, Bellary District over an area of 61-00 acres for Iron ore.

Shri B.Abdul Basith have filed an application dated 06.09.2005 for sanction of Mining Lease in Doulath Pura Village of Sandur Taluk, Bellary District over an area of 150-00 acres for Iron ore.

M/s J.S.W. Steels Limited have filed an application dated 22.03.2006 for sanction of Mining Lease in Bhavihalli Village of Sandur Taluk, Bellary District, over an area of 683.51 hectares for BHQ/BHJ/BHC ore.

The above areas are free areas. As per Section 11(2) of MM(D&R) Act, 1957, where the State Government has not notified in the official Gazette the area for grant of Mining Lease and two or more persons have applied for a Mining Lease in respect of any land in such area, the applicant whose application was received earlier, shall have the preferential right to be considered for grant of Mining Lease over the applicant, whose application was received later.

Minerals are valuable, finite and non-renewable natural resources, which are critical for growth of any State/Country. Most of these mineral deposits are in Government, Forest and Revenue lands. There should be some attempt to conserve and use these resources judiciously in the interest of the natural development and revenue mobilization by the State for the welfare of the poor. The State Government has recommended to the GOI to impose restrictions on export of these valuable minerals and encourage grant of mining leases for captive use by the steel industry. Grant of mining leases for captive use by the steel industry will not only boost revenue mobilization but also helps in employment generation, industrialization, peripheral development and other indirect benefits. It is a proven fact that, the states stand to gain substantially both in terms of revenues, industrialization, economic development and employment, if the minerals are used for value addition rather than export in their raw form.

The annual production of iron ore in Karnataka is 40 million tonnes, which in terms of value would be about Rs.8,000 crores (at the rate of Rs.2000/- per tonne). Nearly 75% of this precious resource is exported without any value addition. On the other hand, if this 40 million tonnes quantity is converted in to steel, we would produce 25 million tonnes of steel worth Rs.67,500 crores in value (at an average rate of 27,000 per tonne), which would give much needed boost to industrial infrastructure and economic growth in the country and provide employment on a much larger scale. The State Government gets royalty of only Rs.80.00 crores on this materials, where as at the rate of 4% VAT, the State would get Rs.2,700 crores on the steel converted from the ore and the Central Government would get Rs.70,800 crores by way of excise duty at 16%, a portion of which comes to the State Government as well. Over and above this, there would be revenue accrual by way of direct taxes and corporate taxes as well and more importantly would give boost to industrial growth, infrastructure and economic development of the State. Further, if the minerals are used for value addition within the State and in the vicinity of the deposits, the burden on roads and environment particularly due to transportation of minerals also is restricted.

For the foregoing reasons, the Government wants to encourage applicants who add value to the mineral especially by setting up integrated steel plants since this end use of mineral attracts huge investments in the State and lead to considerably higher value-addition which in turn results in increased tax revenue and employment generation, rather than those who merely export the mineral. As a step in this direction, the above area will be notified inviting applications from existing and proposed captive mine users, preferably for integrated steel plants.

In view of the above, the State Government has decided to notify the above said free areas by rejecting the application of the said applicants. Accordingly, the following order.

**Government Order No. CI.121:MMM.2007, Bangalore, Dated: 22nd August 2007**

In the circumstancs explained in the Preamble, the Mining lease applications filed by the following applicants for sanction of Mining Lease for the following areas for Iron ore and Manganese Ore and other minerals are hereby rejected, giving liberty to the applicant to apply afresh in respect of above areas in pursuance of Notification to be issued.

| Sl. No. | Applicant name | Application Date | Area |
|---|---|---|---|
| 1. | M/s Krishna Industries | 19.02.2005 | 2250-00 acres in Bhavihalli village, Sandur Taluk, Bellary District. |
| 2. | M/s Krishna Mining Company | 19.02.2005 | 2900-00 acres in Bhavihalli village, Sandur Taluk, Bellary District. |
| 3. | M/s B. Kumara Gouda and Sons | 09.03.2005 | 325.00 hectares in Bhavihalli village, Sandur Taluk, Bellary District. |
| 4. | Shri M. Habeebullah | 15.07.2005 | 295.26 hectares in Susheela Nagar village, Sandur Taluk, Bellary District. |
| 5. | Shri Gopala Krishna V.Patwari | 06.09.2005 | 61-00 acres in Doulath Pura Village, Sandur Taluk, Bellary District. |
| 6. | Shri Abdul Basith | 06.09.2005 | 150-11 acres in Doulath Pura Village, Sandur Taluk, Bellary District. |

| Sl. No. | Applicant name | Application Date | Area |
|---|---|---|---|
| 7. | M/s JSW Steel Limited | 22.03.2006 | 683.51 hectares in Bhavihalli village, Sandur Taluk, Bellary District. |

By Order and in the name of the Governor of Karnataka,

**K. JAYACHANDRA**

P.R. 1517

Under Secretary to Government (Mines)
Commerce and Industries Department.

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಆರ್.ಕೆ. ಮಹಾರ್ (ಡಿ.ಐ.ಜಿ.ಪಿ., ನಾನ್ ಐಪಿಎಸ್) ಮತ್ತು ಶ್ರೀ ಪಿ. ಮುನಿಸ್ವಾಮಿ, ಐಪಿಎಸ್ ರವರುಗಳ ವಿರುದ್ಧ ಇಲಾಖಾ ವಿಚಾರಣೆ ಬಗ್ಗೆ.

**ಓದಲಾಗಿದೆ:**
1) ಎ.ಡಿ.ಜಿ.ಪಿ. ಕೆ.ಎಸ್.ಆರ್.ಪಿ. ಬೆಂಗಳೂರು ರವರ ಪತ್ರ ಸಂಖ್ಯೆ:ಡಿ೩/10/2003-04, ದಿನಾಂಕ: 16.05.2005.
2) ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ:ಒಬಿ(5)/23/2005-06, ದಿನಾಂಕ: 31.03.2006 ಮತ್ತು 21.05.2007.
3) ಸರ್ಕಾರದ ಆದೇಶ ಸಂಖ್ಯೆ:ಒಇ 159 ಪೊಸಿಪ 2005, ದಿನಾಂಕ: 07.08.2006.

**ಪ್ರಸ್ತಾವನೆ:**

ಕಮಾಂಡೆಂಟ್, 3ನೇ ಪಡೆ, ಕೆ.ಎಸ್.ಆರ್.ಪಿ. ಬೆಂಗಳೂರು ರವರ ಒಡೆತನಕ್ಕೆ ಸೇರಿದ ಚಿಕ್ಕಸಂದ್ರ ಗ್ರಾಮದ ಸರ್ವೆ ನಂಬರ್:44/25, 44/20, 44/22, 44/24 ರಲ್ಲಿನ ಜಮೀನಿನ ಒತ್ತುವರಿ ಮಾಡಿ ಮಾಲಿಕತ್ವದ ಬಗ್ಗೆ ಶ್ರೀ ದ್ಯಾವಪ್ಪ, ತಂದೆ ಸೂಟಿ ಮುನಿಯಪ್ಪ ಮತ್ತು ಶ್ರೀಮತಿ ಗೌರಮ್ಮ ಇವರು ನಗರದ 2ನೇ ಹೆಚ್ಚುವರಿ ಸಿಟಿ ಸಿವಿಲ್ ನ್ಯಾಯಾಲಯದಲ್ಲಿ ದಿನಾಂಕ:17.08.94 ರಂದು ದಾವೆ ಸಂಖ್ಯೆ:4780/94 ಹೂಡಿದ್ದು, ಈ ಪ್ರಕರಣಕ್ಕೆ ಸಂಬಂಧಪಟ್ಟ ಕಂಡಿಕೆವಾರು ಷರಾ ಹಾಗೂ ದಾಖಲೆಗಳನ್ನು ನಿಗದಿತ ಸಮಯದಲ್ಲಿ ನ್ಯಾಯಾಲಯಕ್ಕೆ ಸಲ್ಲಿಸದ ಕಾರಣ ನ್ಯಾಯಾಲಯದಿಂದ ಹೊರಬೀಳುವ ತೀರ್ಪಿನಿಂದ ಉಂಟಾಗುವ Serious Consequences ಗೆ ನೀವೆ ಕಾರಣರಾಗಿರುತ್ತೀರೆಂದು ತಿಳಿಸಿದ ಪತ್ರಗಳನ್ನು ಕಮಾಂಡೆಂಟ್ ರವರುಗಳೇ ಸ್ವೀಕರಿಸಿದ್ದರು ಸಹ ನ್ಯಾಯಾಲಯಕ್ಕೆ ಮಾಹಿತಿಗಳನ್ನು ನೀಡದೆ ಇದ್ದುದರಿಂದ ಏಕಪಕ್ಷೀಯವಾದ ತೀರ್ಪು ನ್ಯಾಯಾಲಯವು ನೀಡುವುದರಿಂದ ಈ ರೀತಿ ಅಪರಾಧವೆಸಗಿರುತ್ತಾರೆಂದು ಸದರಿ ತಪ್ಪಿತಸ್ಥ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವಂತೆ ಮೇಲೆ ಓದಲಾದ (1)ರ ಪತ್ರದಲ್ಲಿ ಎ.ಡಿ.ಜಿ.ಪಿ. ಕೆ.ಎಸ್.ಆರ್.ಪಿ. ಬೆಂಗಳೂರು ರವರು ಸರ್ಕಾರಕ್ಕೆ ಕೋರಿರುತ್ತಾರೆ. ಸದರಿ ಪತ್ರವನ್ನು ಅಡಕದೊಂದಿಗೆ ಡಿಜಿ ರವರಿಗೆ ದಿನಾಂಕ: 01.06.2005ರಂದು ಕಳುಹಿಸಿ ಅವರ ಅಭಿಪ್ರಾಯ ಕೋರಲಾಗಿತ್ತು. ಶ್ರೀ ಆರ್.ಕೆ. ಮಹಾರ್, ಡಿ.ಐ.ಜಿ.ಪಿ. (ನಾನ್ ಐಪಿಎಸ್) ಕಮಾಂಡೆಂಟ್, 3ನೇ ಪಡೆ, ಕೆ.ಎಸ್.ಆರ್.ಪಿ. ಮತ್ತು ಶ್ರೀ ಪಿ. ಮುನಿಸ್ವಾಮಿ, ಐ.ಎ.ಎಸ್. ಹಿಂದಿನ ಕಮಾಂಡೆಂಟ್ 3ನೇ ಪಡೆ ಕೆ.ಎಸ್.ಆರ್.ಪಿ. ಬೆಂಗಳೂರು ರವರು ದಾವೆ ಸಂಖ್ಯೆ:4780/94ಕ್ಕೆ ಮಾಹಿತಿ ಒದಗಿಸದೆ ಕರ್ತವ್ಯಲೋಪ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸುವುದು ಎ.ಡಿ.ಜಿ.ಪಿ. ಕೆ.ಎಸ್.ಆರ್.ಪಿ. ರವರ ದಿನಾಂಕ:16.05.2005ರ ಪತ್ರದಿಂದ ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ ಎಂದು ಆರೋಪಿತರ ವಿರುದ್ಧ ಕೆ.ಎಸ್.ಪಿ. (ಡಿಪಿ) ನಿಯಮಗಳು 1965/89ರ ನಿಯಮ 6ರ ಪ್ರಕಾರ ವಿಚಾರಣೆಗೆ ಆದೇಶಿಸಿ ಎ.ಡಿ.ಜಿ.ಪಿ. ಪೊಲೀಸ್ ಗಣಕ ವಿಭಾಗ ಮತ್ತು ಆಧುನೀಕರಣ ಬೆಂಗಳೂರು ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸುವಂತೆ ಮೇಲೆ ಓದಲಾದ (2)ರ ದಿನಾಂಕ: 31.03.2006ರ ಪತ್ರದಲ್ಲಿ ಡಿಜಿ ಮತ್ತು ಐಜಿಪಿ ರವರು ಸರ್ಕಾರಕ್ಕೆ ಕೋರಿರುತ್ತಾರೆ. ಅದರಂತೆ ಪರಿಶೀಲಿಸಿ ಆರ್.ಕೆ. ಮಹಾರ್ ಡಿ.ಐ.ಜಿ.ಪಿ. (ನಾನ್ ಐಪಿಎಸ್) ಹಿಂದಿನ ಕಮಾಂಡೆಂಟ್, 3ನೇ ಪಡೆ, ಕೆ.ಎಸ್.ಆರ್.ಪಿ. ರವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಆದೇಶಿಸಿ ಎ.ಡಿ.ಜಿ.ಪಿ. ಪೊಲೀಸ್ ಗಣಕ ವಿಭಾಗ ಮತ್ತು ಆಧುನೀಕರಣ, ಬೆಂಗಳೂರು ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಮೇಲೆ ಓದಲಾದ (3)ರ ಆದೇಶವು ಸರ್ಕಾರ ಹೊರಡಿಸಿದೆ.

ಈ ಅಧಿಕಾರಿಗಳಿಂದ ತಾಂತ್ರಿಕವಾಗಿ ನಿರ್ಲಕ್ಷತೆಯಾಗಿದೆ ಎನ್ನುವುದರ ಬಗ್ಗೆ ಯಾವುದೇ ವಿವಾದವಿರುವುದಿಲ್ಲ. ಅಧಿಕಾರಿಗಳು ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ದಾವೆಗೆ ಸಂಬಂದಿಸಿದ ಕಂಡಿಕೆವಾರು ಷರಾ, ವರದಿ ಹಾಗೂ ದಾಖಲೆಗಳನ್ನು ನ್ಯಾಯಾಲಯಕ್ಕೆ ಸಲ್ಲಿಸಲು ಆಗಿರುವ ವಿಳಂಬಕ್ಕೆ ಉದ್ದೇಶಪೂರ್ವಕವಾದ ಕಾರಣಗಳು ಕಂಡು ಬರದ ಕಾರಣ ಹಾಗೂ ಶ್ರೀ ಆರ್.ಕೆ. ಮಹಾರ್ ರವರು ದಿನಾಂಕ: 31.05.2007 ರಂದು ವಯೋ ನಿವೃತ್ತಿ ಹೊಂದಲಿರುವುದರಿಂದ ಅವರಿಗೆ ಸೂಕ್ತ ಎಚ್ಚರಿಕೆ ನೀಡಿ ಅವರ ವಿರುದ್ಧ ಆದೇಶಿಸಿರುವ ಇಲಾಖಾ ವಿಚಾರಣೆಯನ್ನು ಕೈಬಿಡುವಂತೆ ಮೇಲೆ ಓದಲಾದ (2)ರ ದಿನಾಂಕ: 21.05.2007ರ ಪತ್ರದಲ್ಲಿ ಡಿಜಿ ರವರು ಸರ್ಕಾರಕ್ಕೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 159 ಪೊಸಿಪ 2005, ಬೆಂಗಳೂರು, ದಿನಾಂಕ: 24ನೇ ಜುಲೈ 2007**

ಶ್ರೀ ಆರ್.ಕೆ. ಮಹಾರ್, ಡಿ.ಐ.ಜಿ.ಪಿ. (ನಿವೃತ್ತ) ಇವರಿಗೆ ಸೂಕ್ತ ಎಚ್ಚರಿಕೆ ನೀಡಿ ಇವರ ವಿರುದ್ಧ ಆದೇಶಿಸಲಾಗಿರುವ ಇಲಾಖಾ ವಿಚಾರಣೆಯನ್ನು ಕೈಬಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 1399

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಗ್ರಾಮ ಸ್ವರಾಜ್ ಯೋಜನೆಯಲ್ಲಿ ತಾಲ್ಲೂಕು ಸಂಪನ್ಮೂಲ ಕೋಶಗಳಿಗೆ ಕಂಪ್ಯೂಟರ್ ಹಾಗೂ ಅದರ ಪರಿಕರಗಳನ್ನು ಖರೀದಿಸುವ ಬಗ್ಗೆ.

**ಪ್ರಸ್ತಾವನೆ:**

ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಗ್ರಾಮ ಸ್ವರಾಜ್ ಯೋಜನೆಯ ಕರ್ನಾಟಕ ಪಂಚಾಯತ್ ಸಬಲೀಕರಣ ಯೋಜನೆಯಡಿ ಅತ್ಯಂತ ಹಿಂದುಳಿದ 39 ತಾಲ್ಲೂಕುಗಳಲ್ಲಿ ತಾಲ್ಲೂಕು ಮಟ್ಟದಲ್ಲಿ ಸಂಪನ್ಮೂಲ ಕೋಶವನ್ನು ಸ್ಥಾಪಿಸಿದ್ದು, ಈ ಕೋಶಗಳಲ್ಲಿ ಸಮುದಾಯ ಸಂಘಟನೆ, ಲೆಕ್ಕ ಪತ್ರ ನಿರ್ವಹಣೆ ಹಾಗೂ ಗಣಕೀಕರಣ ಸಮಾಲೋಚಕರ ವ್ಯಕ್ತಿಗಳ (ಸಂಸ್ಥೆಗಳ) ರೂಪದಲ್ಲಿ ತಜ್ಞರನ್ನು ಒದಗಿಸಿದೆ. ಈ ಕೋಶ ಕಾರ್ಯನಿರ್ವಹಿಸಲು ತಾಲ್ಲೂಕು ಮಟ್ಟದಲ್ಲಿ ಸಾಮರ್ಥ್ಯಸೌಧ ನಿರ್ಮಾಣವಾಗುತ್ತಿದ್ದು ಸದ್ಯಕ್ಕೆ ಸದರಿ ಸಮಾಲೋಚಕರು ತಾಲ್ಲೂಕು ಪಂಚಾಯತ್ ಪಂಚಾಯತ್ ಕಛೇರಿಯಲ್ಲೇ ಕೆಲಸ ಮಾಡಬೇಕಾಗಿರುತ್ತದೆ. ಸಾಮರ್ಥ್ಯ ಸೌಧ ನಿರ್ಮಾಣವಾದ ನಂತರ T.V. Monitor, Computer + furnitures, VCR/DVD Player, Flip chart stand, black board, Almera, ಇತ್ಯಾದಿ ಪರಿಕರಗಳನ್ನು ನೀಡಲು ಉದ್ದೇಶಿಸಿದೆ. ಆದರೆ 39 ತಾಲ್ಲೂಕುಗಳಲ್ಲಿ ಈಗಾಗಲೇ ಸಂಪನ್ಮೂಲ ಕೋಶಗಳು ಕೆಲಸ ನಿರ್ವಹಿಸುತ್ತಿದ್ದು, ಸಮಾಲೋಚಕರ ದಿನ ನಿತ್ಯದ ಕೆಲಸಗಳನ್ನು ನಿರ್ವಹಿಸಲು ಕೆಲವು ಪರಿಕರಗಳನ್ನು ನೀಡುವುದು ಅವಶ್ಯವಿದೆ.

ಈ ಪರಿಕರಗಳನ್ನು ಖರೀದಿಸಲು ಅನುದಾನವನ್ನು ಬಿಡುಗಡೆ ಮಾಡಬೇಕಾಗಿದೆ. ಅದಕ್ಕಾಗಿ ಈ ಆದೇಶ

**ಆದೇಶ ಸಂಖ್ಯೆ: ಗ್ರಾ.ಅ.ಪ/116/ಗ್ರಾ.ಸ್ವ.ಯೋ/2007 ದಿನಾಂಕ: 3ನೇ ಜುಲೈ 2007**

ಮೇಲಿನ ಪ್ರಸ್ತಾವನೆಯನ್ನು ಗಮನದಲ್ಲಿಟ್ಟುಕೊಂಡು ಅನುಬಂಧದಲ್ಲಿ ತಿಳಿಸಿರುವ 39 ತಾಲ್ಲೂಕು ಪಂಚಾಯಿತಿಗಳಿಗೆ (ತಾಲ್ಲೂಕು ಸಂಪನ್ಮೂಲ ಕೋಶಗಳಿಗೆ) ಒಟ್ಟು ರೂ.39.00 (ರೂಪಾಯಿ ಮೂವತ್ತೊಂಬತ್ತು ಲಕ್ಷ ಮಾತ್ರ) ಲಕ್ಷಗಳನ್ನು ಬಿಡುಗಡೆ ಮಾಡಲು ಸರ್ಕಾರವು ಹರ್ಷಿಸುತ್ತದೆ. ಈ ಪರಿಕರಗಳನ್ನು ಗ್ರಾಮ ಸ್ವರಾಜ್ ಯೋಜನೆಯ ಸಂಗ್ರಹಣಾ ಕೈಪಿಡಿಯ ಮಾರ್ಗಸೂಚಿಗಳಲ್ಲಿ ತಿಳಿಸಿದ ವಿಧಾನದಲ್ಲಿ ಪಡೆಯಬೇಕು. ಕಂಪ್ಯೂಟರ್, ಪ್ರಿಂಟರ್, ಯೂ.ಪಿ.ಎಸ್. ಗಳು DGSD rate contract ನಲ್ಲಿ ಲಭ್ಯವಿದ್ದು, ಇದಕ್ಕೆ ಲಗತ್ತಿಸಿರುವ ಅನುಬಂಧ-1 ರಲ್ಲಿರುವ configuration ಪ್ರಕಾರ ಸಂಗ್ರಹಿಸಿರಬೇಕು. ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2215-00-101-0-80-059 ಗ್ರಾಮೀಣ ಬಡತನ ಹಾಗೂ ಪಂಚಾಯಿತಿ ಯೋಜನೆಯಡಿಯಲ್ಲಿ ಭರಿಸಬಹುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಎಸ್. ಶಾಮಸುಂದರ**

ಸರ್ಕಾರದ ಅಧೀನ ಕಾರ್ಯದರ್ಶಿಗಳು

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 116 ಗ್ರಾಸ್ವಯೋ 2007 ದಿನಾಂಕ:28.06.2007 ರ ಅನುಬಂಧ**
**ಸಂಪನ್ಮೂಲ ಕೋಶಗಳಿಗೆ ಕೊಳ್ಳಬೇಕಾಗಿರುವ ಕಂಪ್ಯೂಟರ್ ಹಾಗೂ ಅದರ ಪರಿಕರಗಳ ವಿವರಗಳು**

| No. | District Name | Taluk Panchayath Name | Amount allocated in Lakhs | | | | | | |
|---|---|---|---|---|---|---|---|---|---|
| | | | Computer & accessories as per the conf given | UPS (0.5 KVA with 4 hours backup) | Printer (Dot Matrix) | Table (3 Tables @ Rs.4000/-) | Chair (3 Chairs @ Rs.2000/-) | Almirah (One) | Total |
| 1 | ಬಾಗಲಕೋಟೆ | ಬೀಳಗಿ | 0.370 | 0.300 | 0.100 | 0.120 | 0.060 | 0.050 | 1.000 |
| 2 | ಬೆಂಗಳೂರು ಗ್ರಾಮಾಂತರ | ಕನಕಪುರ | 0.370 | 0.300 | 0.100 | 0.120 | 0.060 | 0.050 | 1.000 |
| 3 | | ಮಾಗಡಿ | 0.370 | 0.300 | 0.100 | 0.120 | 0.060 | 0.050 | 1.000 |
| 4 | ಬಳ್ಳಾರಿ | ಕೂಡ್ಲಗಿ | 0.370 | 0.300 | 0.100 | 0.120 | 0.060 | 0.050 | 1.000 |
| 5 | | ಸಂಡೂರ್ | 0.370 | 0.300 | 0.100 | 0.120 | 0.060 | 0.050 | 1.000 |
| 6 | ಬೀದರ್ | ಔರಾದ್ | 0.370 | 0.300 | 0.100 | 0.120 | 0.060 | 0.050 | 1.000 |
| 7 | | ಬಸವಕಲ್ಯಾಣ | 0.370 | 0.300 | 0.100 | 0.120 | 0.060 | 0.050 | 1.000 |
| 8 | | ಬಾಲ್ಕಿ | 0.370 | 0.300 | 0.100 | 0.120 | 0.060 | 0.050 | 1.000 |
| 9 | | ಹುಮನಾಬಾದ್ | 0.370 | 0.300 | 0.100 | 0.120 | 0.060 | 0.050 | 1.000 |
| 10 | ಬಿಜಾಪುರ | ಬಸವ ಬಾಗೇವಾಡಿ | 0.370 | 0.300 | 0.100 | 0.120 | 0.060 | 0.050 | 1.000 |
| 11 | | ಇಂಡಿ | 0.370 | 0.300 | 0.100 | 0.120 | 0.060 | 0.050 | 1.000 |
| 12 | | ಮುದ್ದೇಬಿಹಾಲ್ | 0.370 | 0.300 | 0.100 | 0.120 | 0.060 | 0.050 | 1.000 |
| 13 | | ಸಿಂದಗಿ | 0.370 | 0.300 | 0.100 | 0.120 | 0.060 | 0.050 | 1.000 |
| 14 | ಚಾಮರಾಜ ನಗರ | ಚಾಮರಾಜ ನಗರ | 0.370 | 0.300 | 0.100 | 0.120 | 0.060 | 0.050 | 1.000 |
| 15 | ಚಿತ್ರದುರ್ಗ | ಹೊಸದುರ್ಗ | 0.370 | 0.300 | 0.100 | 0.120 | 0.060 | 0.050 | 1.000 |
| 16 | ದಾವಣಗೆರೆ | ಚನ್ನಗಿರಿ | 0.370 | 0.300 | 0.100 | 0.120 | 0.060 | 0.050 | 1.000 |

| No. | District Name | Taluk Panchayath Name | Amount allocated in Lakhs | | | | | | |
|---|---|---|---|---|---|---|---|---|---|
| | | | Computer & accessories as per the conf given | UPS (0.5 KVA with 4 hours backup) | Printer (Dot Matrix) | Table (3 Tables @ Rs.4000/-) | Chair (3 Chairs @ Rs.2000/-) | Almirah (One) | Total |
| 17 | | ಹರಪನಹಳ್ಳಿ | 0.370 | 0.300 | 0.100 | 0.120 | 0.060 | 0.050 | 1.000 |
| 18 | ಗುಲ್ಬರ್ಗ | ಅಫಜಲಪುರ | 0.370 | 0.300 | 0.100 | 0.120 | 0.060 | 0.050 | 1.000 |
| 19 | | ಅಲಾಂದ | 0.370 | 0.300 | 0.100 | 0.120 | 0.060 | 0.050 | 1.000 |
| 20 | | ಚಿಂಚೋಳಿ | 0.370 | 0.300 | 0.100 | 0.120 | 0.060 | 0.050 | 1.000 |
| 21 | | ಚಿತ್ತಾಪುರ | 0.370 | 0.300 | 0.100 | 0.120 | 0.060 | 0.050 | 1.000 |
| 22 | | ಜೇವರ್ಗಿ | 0.370 | 0.300 | 0.100 | 0.120 | 0.060 | 0.050 | 1.000 |
| 23 | | ಸೇಡಂ | 0.370 | 0.300 | 0.100 | 0.120 | 0.060 | 0.050 | 1.000 |
| 24 | | ಶಹಾಪುರ | 0.370 | 0.300 | 0.100 | 0.120 | 0.060 | 0.050 | 1.000 |
| 25 | | ಶೋರಾಪುರ | 0.370 | 0.300 | 0.100 | 0.120 | 0.060 | 0.050 | 1.000 |
| 26 | | ಯಾದಗಿರಿ | 0.370 | 0.300 | 0.100 | 0.120 | 0.060 | 0.050 | 1.000 |
| 27 | ಕೋಲಾರ | ಬಾಗೆಪಲ್ಲಿ | 0.370 | 0.300 | 0.100 | 0.120 | 0.060 | 0.050 | 1.000 |
| 28 | ಕೊಪ್ಪಳ | ಕುಷ್ಟಗಿ | 0.370 | 0.300 | 0.100 | 0.120 | 0.060 | 0.050 | 1.000 |
| 29 | | ಯಲಬುರ್ಗಿ | 0.370 | 0.300 | 0.100 | 0.120 | 0.060 | 0.050 | 1.000 |
| 30 | ಮೈಸೂರು | ಹೆಗ್ಗಡದೇವನಕೋಟೆ | 0.370 | 0.300 | 0.100 | 0.120 | 0.060 | 0.050 | 1.000 |
| 31 | ರಾಯಚೂರು | ದೇವದುರ್ಗ | 0.370 | 0.300 | 0.100 | 0.120 | 0.060 | 0.050 | 1.000 |
| 32 | | ಲಿಂಗಸುಗೂರು | 0.370 | 0.300 | 0.100 | 0.120 | 0.060 | 0.050 | 1.000 |
| 33 | | ಮಾನ್ವಿ | 0.370 | 0.300 | 0.100 | 0.120 | 0.060 | 0.050 | 1.000 |
| 34 | | ಸಿಂಧನೂರು | 0.370 | 0.300 | 0.100 | 0.120 | 0.060 | 0.050 | 1.000 |
| 35 | ತುಮಕೂರು | ಗುಬ್ಬಿ | 0.370 | 0.300 | 0.100 | 0.120 | 0.060 | 0.050 | 1.000 |
| 36 | | ಕುಣಿಗಲ್ | 0.370 | 0.300 | 0.100 | 0.120 | 0.060 | 0.050 | 1.000 |
| 37 | | ಮಧುಗಿರಿ | 0.370 | 0.300 | 0.100 | 0.120 | 0.060 | 0.050 | 1.000 |
| 38 | | ಪಾವಗಡ | 0.370 | 0.300 | 0.100 | 0.120 | 0.060 | 0.050 | 1.000 |
| 39 | | ಶಿರಾ | 0.370 | 0.300 | 0.100 | 0.120 | 0.060 | 0.050 | 1.000 |
| ಒಟ್ಟು | | | **14.430** | **11.700** | **3.900** | **4.680** | **2.340** | **1.950** | **39.000** |

**ಕೆ.ಎಸ್. ಶಾಮಸುಂದರ**

ಪಿ.ಆರ್. 1380

ಸರ್ಕಾರದ ಅಧೀನ ಕಾರ್ಯದರ್ಶಿಗಳು

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ವಿಷಯ:** ರಾಜ್ಯದ ತಾಲ್ಲೂಕು ಕೇಂದ್ರಗಳಲ್ಲಿ ಸಾಮರ್ಥ್ಯಸೌಧ ನಿರ್ಮಾಣ ಮಾಡಲು ಗ್ರಾಮ ಸ್ವರಾಜ್ ಯೋಜನೆಯಡಿ ಎರಡನೇ ಕಂತಿನ ಅನುದಾನ ಬಿಡುಗಡೆ ಮಾಡುವ ಕುರಿತು.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 69 ಗ್ರಾಸ್ವಯೋ 2006, ದಿ:3.1.2007 ಮತ್ತು 1.2.2007

**ಪ್ರಸ್ತಾವನೆ:**

ವಿಶ್ವಬ್ಯಾಂಕ್ ನೆರವಿನ ಗ್ರಾಮ ಸ್ವರಾಜ್-ಕರ್ನಾಟಕ ಪಂಚಾಯತ್ ಸಬಲೀಕರಣ ಯೋಜನೆಯಲ್ಲಿ ಸಾಮರ್ಥ್ಯಸೌಧ ನಿರ್ಮಾಣ ಮಾಡಲು 2006-07ನೇ ಸಾಲಿನಲ್ಲಿ ಉಲ್ಲೇಖದಲ್ಲಿನ ಸರ್ಕಾರಿ ಆದೇಶದಲ್ಲಿ ಮೊದಲನೇ ಕಂತಾಗಿ ರೂ.6.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ. ಸದರಿ ತಾಲ್ಲೂಕು ಪಂಚಾಯತಿಗಳು ಬಿಡುಗಡೆಯಾದ ಅನುದಾನವನ್ನು ವಿನಿಯೋಗಿಸಿ ಹಣ ಬಳಕೆ ಉಪಯೋಗಿತಾ ಪತ್ರಗಳನ್ನು ಸಲ್ಲಿಸಿ, ಉಳಿದ ಹಣವನ್ನು ಬಿಡುಗಡೆ ಮಾಡಲು ಕೋರಿದ್ದಾರೆ. ಕಾರಣ, ಈ ತಾಲ್ಲೂಕು ಪಂಚಾಯತ್‌ಗಳಿಗೆ ಉಳಿದ ತಲಾ ರೂ.10.00 ಲಕ್ಷಗಳನ್ನು ಬಿಡುಗಡೆ ಮಾಡಬಹುದಾಗಿದೆ. ಅದಕ್ಕಾಗಿ ಈ ಆದೇಶ.

**ಆದೇಶ ಸಂಖ್ಯೆ:ಗ್ರಾಅಪ 119 ಗ್ರಾಸ್ವಯೋ 2007, ಬೆಂಗಳೂರು, ದಿನಾಂಕ: 03ನೇ ಜುಲೈ 2007**

ಮೇಲಿನ ಪ್ರಸ್ತಾವನೆಯಲ್ಲಿನ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಇದಕ್ಕೆ ಲಗತ್ತಿಸಿದ ಅನುಬಂಧದಲ್ಲಿ 4 ತಾಲ್ಲೂಕು ಪಂಚಾಯತ್‌ಗಳಿಗೆ ಅವುಗಳಿಗೆ ಎದುರಿಗೆ ಕಾಲಂ 7ರಲ್ಲಿ ತೋರಿಸಿದಂತೆ ಒಟ್ಟು ರೂ. 40-00 ಲಕ್ಷ (ನಲವತ್ತು ಲಕ್ಷ ರೂಪಾಯಿಗಳು ಮಾತ್ರ)ಗಳನ್ನು ಬಿಡುಗಡೆ ಮಾಡಲು ಸರ್ಕಾರವು ಹರ್ಷಿಸುತ್ತದೆ.

ತಾಲ್ಲೂಕು ಪಂಚಾಯತ್‌ಗಳು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ಅದಕ್ಕೆ ಸಂಬಂಧಿಸಿದ ನಿಯಮಗಳು ಹಾಗೂ ಗ್ರಾಮ ಸ್ವರಾಜ್ ಯೋಜನೆಯಲ್ಲಿ ಹೊರಡಿಸಿದ ಸಂಗ್ರಹಣಾ ಕೈಪಿಡಿ ಅನ್ವಯ ಸಾಮರ್ಥ್ಯಸೌಧದ

ನಿರ್ಮಾಣ ಕಾರ್ಯವನ್ನು ಕೈಗೊಳ್ಳಲು ಸೂಚಿಸಿದೆ. ಸದರಿ ವೆಚ್ಚವನ್ನು 2007-08ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ 2515-00-101-0-80-059 (ಯೋಜನೆ) ಕರ್ನಾಟಕ ಗ್ರಾಮೀಣ ಬಡತನ ಹಾಗೂ ಪಂಚಾಯತಿ ಯೋಜನೆಯಡಿಯಲ್ಲಿ ಸರ್ಕಾರಿ ಆದೇಶ ಸಂಖ್ಯೆ: FD 7 ZPA 2003 ದಿನಾಂಕ: 14.7.2005ರ ಸೂಚನೆಗಳನ್ವಯ ಭರಿಸುವುದು. ತಾಲ್ಲೂಕು ಪಂಚಾಯತ್‌ಗಳು ಮಾಸಿಕ ವರದಿಯನ್ನು ನಿಗದಿಪಡಿಸಿದ ನಮೂನೆಯಲ್ಲಿ ಸಲ್ಲಿಸುವುದು. ಕಾಲಂ 3ರಲ್ಲಿ ತಿಳಿಸಿದ ಅಂದಾಜು ಮೊತ್ತವು ರೂ.16.00 ಲಕ್ಷ ಮೀರಿದ್ದಲ್ಲಿ ಹೆಚ್ಚುವರಿ ವೆಚ್ಚವನ್ನು ಈಗಾಗಲೇ ತಾಲ್ಲೂಕು ಪಂಚಾಯತಿ ನಿರ್ಣಯಿಸಿದಂತೆ ತಾಲ್ಲೂಕು ಪಂಚಾಯತಿಗಳ ಸಂಪನ್ಮೂಲಗಳಿಂದ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.07.1996ರಲ್ಲಿ ಆಡಳಿತಾತ್ಮಕ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಎಸ್. ಶಾಮಸುಂದರ**
ಸರ್ಕಾರದ ಅಧೀನ ಕಾರ್ಯದರ್ಶಿಗಳು
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 119 ಗ್ರಾಸ್ವಯೋ 2007, ದಿನಾಂಕ: 03.07.2007ರ ಅನುಬಂಧ ಸಾಮರ್ಥ್ಯಸೌಧ ನಿರ್ಮಾಣಕ್ಕಾಗಿ ಎರಡನೇ ಕಂತಿನ ಅನುದಾನ ಬಿಡುಗಡೆ**

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಜಿಲ್ಲೆ | ತಾಲ್ಲೂಕು ಪಂಚಾಯತ್ | ಅಂದಾಜು ಮೊತ್ತ | ಯೋಜನೆಯಡಿ ನಿಗದಿಯಾದ ಮೊತ್ತ | ಎರಡನೇ ಕಂತಾಗಿ ಬಿಡುಗಡೆ ಮಾಡಿದ ಮೊತ್ತ | ಒಟ್ಟು ಮೊತ್ತ |
|---|---|---|---|---|---|---|
| 1 | ಬೀದರ್ | 1) ಬಸವಕಲ್ಯಾಣ | 18.00 | 16.00 | 10.00 | 10.00 |
| 2 | ಬೆಂಗಳೂರು (ಗ್ರಾಮಾಂತರ) | 2) ದೇವನಹಳ್ಳಿ | 18.00 | 16.00 | 10.00 | 30.00 |
| | | 3) ದೊಡ್ಡಬಳ್ಳಾಪುರ | 18.00 | 16.00 | 10.00 | |
| | | 4) ನೆಲಮಂಗಲ | 18.00 | 16.00 | 10.00 | |
| | | | | | **ಒಟ್ಟು ಮೊತ್ತ** | **40.00** |

**ಕೆ.ಎಸ್. ಶಾಮಸುಂದರ**
ಪಿ.ಆರ್. 1381 ಸರ್ಕಾರದ ಅಧೀನ ಕಾರ್ಯದರ್ಶಿಗಳು
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ವಿಷಯ:** ಗ್ರಾಮ ಸ್ವರಾಜ್ ಯೋಜನೆಯಡಿಯಲ್ಲಿ ಬರುವ ರಾಜ್ಯದ 39 ತಾಲ್ಲೂಕು ಸಂಪನ್ಮೂಲ ಕೋಶಗಳಲ್ಲಿನ ಸಮಾಲೋಚಕರ ಸಂಭಾವನೆ ಪಾವತಿಗೆ ಗ್ರಾಮ ಸ್ವರಾಜ್ ಯೋಜನೆಯಡಿಯಲ್ಲಿ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ:ಗ್ರಾ.ಅ.ಪ.76/ ಗ್ರಾ.ಸ್ವ.ಯೋ/ 2007, ದಿನಾಂಕ:4.1.07

**ಪ್ರಸ್ತಾವನೆ:**

ಗ್ರಾಮ ಸ್ವರಾಜ್ ಯೋಜನೆಯಡಿಯಲ್ಲಿ ಬರುವ ರಾಜ್ಯದ ಅತ್ಯಂತ ಹಿಂದುಳಿದ 39 ತಾಲ್ಲೂಕುಗಳಲ್ಲಿ ಸಂಪನ್ಮೂಲ ತಾಲ್ಲೂಕು ಕೋಶಗಳನ್ನು ಸ್ಥಾಪಿಸಿದ್ದು, ಸಮುದಾಯ ಸಂಘಟನಾ ಸಮಾಲೋಚಕರು, ಗಣಕೀಕರಣ ಸಮಾಲೋಚಕರು ಮತ್ತು ಲೆಕ್ಕ ಪತ್ರ ನಿರ್ವಹಣಾ ಸಮಾಲೋಚಕರುಗಳನ್ನು ಜಿಲ್ಲಾ ಪಂಚಾಯಿತಿಯಿಂದ ನೇಮಕ ಮಾಡಿಕೊಳ್ಳಲಾಗಿದ್ದು, ಅವರಿಗೆ ಮಾಸಿಕ ರೂ.5000/- ಸಂಭಾವನೆಯನ್ನು ನೀಡುವಂತೆ ಒಪ್ಪಂದ ಮಾಡಿಕೊಂಡು ಏಜನ್ಸಿ/ಸಂಸ್ಥೆಗಳ ಮೂಲಕ ಪಡೆಯಲಾಗಿದೆ. ಈ ಕುರಿತು ಒಪ್ಪಂದವನ್ನು ಮಾಡಿಕೊಳ್ಳಲಾಗಿದೆ. ಸಮಾಲೋಚಕರ ತೃಪ್ತಿಕರ ಕಾರ್ಯನಿರ್ವಹಿಸಿದ ಬಗ್ಗೆ ಪರಿಶೀಲಿಸಿ ಸಂಭಾವನೆಯನ್ನು ಸಂಬಂಧಪಟ್ಟ ಏಜೆನ್ಸಿ ಮೂಲಕ ಪಾವತಿಸಬೇಕು. ಕಾರಣ ಅನುದಾನವನ್ನು ತಾಲ್ಲೂಕು ಪಂಚಾಯಿತಿಗಳಿಗೆ ಬಿಡುಗಡೆ ಮಾಡುವ ಅವಶ್ಯಕತೆ ಇದೆ ಅದಕ್ಕಾಗಿ ಈ ಆದೇಶ.

**ಆದೇಶ ಸಂಖ್ಯೆ:ಗ್ರಾ.ಅ.ಪ/101/ಗ್ರಾ.ಸ್ವ.ಯೋ/2007, ಬೆಂಗಳೂರು, ದಿನಾಂಕ: 04ನೇ ಜುಲೈ 2007**

ಮೇಲಿನ ಪ್ರಸ್ತಾವನೆಯಲ್ಲಿಯ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ತಿಳಿಸಿದಂತೆ ತಾಲ್ಲೂಕು ಪಂಚಾಯಿತಿಗಳಿಗೆ ಒಟ್ಟು ರೂ.1755000/- (ಹದಿನೇಳು ಲಕ್ಷ ಐವತ್ತೈದು ಸಾವಿರ ರೂಪಾಯಿಗಳು ಮಾತ್ರ)ಗಳನ್ನು ಮೊದಲ ಮೂರು ತಿಂಗಳ ಸಂಭಾವನೆ ಪಾವತಿಸುವುದಕ್ಕಾಗಿ ಬಿಡುಗಡೆ ಮಾಡಿದೆ. ಸದರಿ ಸಂಭಾವನೆಯನ್ನು (terms of reference) ನಲ್ಲಿ ತಿಳಿಸಿದಂತೆ ಏಜೆನ್ಸಿಗಳಿಗೆ ಸಂದಾಯ ಮಾಡುವುದು.

ಈ ವೆಚ್ಚವನ್ನು 2007-08ರ ಸಾಲಿನ ಲೆಕ್ಕ ಶೀರ್ಷಿಕೆ "2515-00-101-0-80-059" ಗ್ರಾಮೀಣ ಬಡತನ ಹಾಗೂ ಪಂಚಾಯಿತಿ ಯೋಜನೆಯಡಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಎಸ್. ಶಾಮಸುಂದರ**
ಸರ್ಕಾರದ ಅಧೀನ ಕಾರ್ಯದರ್ಶಿಗಳು
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಸರ್ಕಾರಿ ಆದೇಶ ಸಂಖ್ಯೆ:ಗ್ರಾ.ಅ.ಪ./101/ಗ್ರಾ.ಸ್ವ.ಯೋ./2007 ದಿನಾಂಕ:30.06.2007 ರ ಅನುಬಂಧ**

**ಸಮಾಲೋಚಕರ ಸಂಭಾವನೆಯನ್ನು ಸಂದಾಯ ಮಾಡಲು ಮೊದಲನೇ ತ್ರೈಮಾಸಿಕದಲ್ಲಿ ಬಿಡುಗಡೆ ಮಾಡಿದ ಅನುದಾನ**

| ಕ್ರ. ಸಂ. | ಜಿಲ್ಲೆಯ ಹೆಸರು | ತಾಲ್ಲೂಕು ಪಂಚಾಯತ್ | ಒಟ್ಟು ಸಮಾಲೋಚಕರ ಸಂಖ್ಯೆ | ಪ್ರತಿ ಸಮಾಲೋಚಕರ ಮಾಸಿಕ ಸಂಭಾವನೆ ರೂ.5000/– ರಂತೆ ಒಟ್ಟು ಮೊತ್ತ | ಮೊದಲನೇ ತ್ರೈಮಾಸಿಕಕ್ಕೆ ಬಿಡುಗಡೆ ಮಾಡಿದ ಅನುದಾನ ರೂ. |
|---|---|---|---|---|---|
| 1 | ಬಾಗಲಕೋಟೆ | ಬೀಳಗಿ | 3 | 15000 | 45000 |
| 2 | ಬೆಂಗಳೂರು ಗ್ರಾಮಾಂತರ | ಕನಕಪುರ | 3 | 15000 | 45000 |
| 3 | | ಮಾಗಡಿ | 3 | 15000 | 45000 |
| 4 | ಬಳ್ಳಾರಿ | ಕೂಡ್ಲಗಿ | 3 | 15000 | 45000 |
| 5 | | ಸಂಡೂರ್ | 3 | 15000 | 45000 |
| 6 | ಬೀದರ್ | ಔರಾದ್ | 3 | 15000 | 45000 |
| 7 | | ಬಸವಕಲ್ಯಾಣ | 3 | 15000 | 45000 |
| 8 | | ಬಾಲ್ಕಿ | 3 | 15000 | 45000 |
| 9 | | ಹುಮ್ನಬಾದ್ | 3 | 15000 | 45000 |
| 10 | ಬಿಜಾಪುರ | ಬಸವ ಬಾಗೇವಾಡಿ | 3 | 15000 | 45000 |
| 11 | | ಇಂಡಿ | 3 | 15000 | 45000 |
| 12 | | ಮುದ್ದೇಬಿಹಾಲ್ | 3 | 15000 | 45000 |
| 13 | | ಸಿಂದಗಿ | 3 | 15000 | 45000 |
| 14 | ಚಾಮರಾಜ ನಗರ | ಚಾಮರಾಜ ನಗರ | 3 | 15000 | 45000 |
| 15 | ಚಿತ್ರದುರ್ಗ | ಹೊಸದುರ್ಗ | 3 | 15000 | 45000 |
| 16 | ದಾವಣಗೆರೆ | ಚನ್ನಗಿರಿ | 3 | 15000 | 45000 |
| 17 | | ಹರಪನಹಳ್ಳಿ | 3 | 15000 | 45000 |
| 18 | ಗುಲ್ಬರ್ಗ | ಅಫಜಾಲಪುರ | 3 | 15000 | 45000 |
| 19 | | ಅಲಾಂದ | 3 | 15000 | 45000 |
| 20 | | ಚಿಂಚೋಳಿ | 3 | 15000 | 45000 |
| 21 | | ಚಿತ್ತಾಪುರ | 3 | 15000 | 45000 |
| 22 | | ಜೇವರ್ಗಿ | 3 | 15000 | 45000 |
| 23 | | ಸೇಡಂ | 3 | 15000 | 45000 |
| 24 | | ಶಹಾಪುರ | 3 | 15000 | 45000 |
| 25 | | ಶೋರಾಪುರ | 3 | 15000 | 45000 |
| 26 | | ಯಾದಗಿರಿ | 3 | 15000 | 45000 |
| 27 | ಕೋಲಾರ | ಬಾಗೆಪಲ್ಲಿ | 3 | 15000 | 45000 |
| 28 | ಕೊಪ್ಪಳ | ಕುಷ್ಠಗಿ | 3 | 15000 | 45000 |
| 29 | | ಯಲಬುರ್ಗಿ | 3 | 15000 | 45000 |
| 30 | ಮೈಸೂರು | ಹೆಗ್ಗಡದೇವನಕೋಟೆ | 3 | 15000 | 45000 |
| 31 | ರಾಯಚೂರು | ದೇವದುರ್ಗ | 3 | 15000 | 45000 |
| 32 | | ಲಿಂಗಸುಗೂರು | 3 | 15000 | 45000 |
| 33 | | ಮಾನ್ವಿ | 3 | 15000 | 45000 |
| 34 | | ಸಿಂಧನೂರು | 3 | 15000 | 45000 |
| 35 | ತುಮಕೂರು | ಗುಬ್ಬಿ | 3 | 15000 | 45000 |
| 36 | | ಕುಣಿಗಲ್ | 3 | 15000 | 45000 |
| 37 | | ಮಧುಗಿರಿ | 3 | 15000 | 45000 |
| 38 | | ಪಾವಗಡ | 3 | 15000 | 45000 |
| 39 | | ಶಿರಾ | 3 | 15000 | 45000 |
| | ಒಟ್ಟು | | **117** | **585000** | **1755000** |

**ಕೆ.ಎಸ್. ಶಾಮಸುಂದರ**
ಸರ್ಕಾರದ ಅಧೀನ ಕಾರ್ಯದರ್ಶಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. 1387

**ಕಂದಾಯ ಸಚಿವಾಲಯ**

**ವಿಷಯ:** ಸದಲಗಾ ಉಪ ನೋಂದಣಿ ಕಛೇರಿ ಕಟ್ಟಡವನ್ನು ರೂ.10.40 ಲಕ್ಷಗಳಲ್ಲಿ ಕಟ್ಟಲು ಆಡಳಿತಾತ್ಮಕ ಮಂಜೂರಾತಿ ನೀಡಿರುವ ಕುರಿತು.

**ಓದಲಾಗಿದೆ:-** 1. ದಿನಾಂಕ: 29.03.2006 ರ ಸರ್ಕಾರದ ಆದೇಶ ಸಂಖ್ಯೆ: ಕಂಇ 88 ಮುನೋಮು 2006

2. ದಿನಾಂಕ: 25.05.2006 ರ ಸರ್ಕಾರದ ಆದೇಶ ಸಂಖ್ಯೆ: ಕಂಇ 88 ಮುನೋಮು 2006

3. ದಿನಾಂಕ: 14.02.2007 ರ ಸರ್ಕಾರದ ಆದೇಶ ಸಂಖ್ಯೆ: ಕಂಇ 37 ಮುನೋಸ 2006

4. ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ: ಬಿಎಲ್‌ಡಿ/8/06-07 ದಿನಾಂಕ: 31.07.2007

**ಪ್ರಸ್ತಾವನೆ:**

ಮೇಲೆ ಓದಲಾಗಿರುವ (1) ದಿನಾಂಕ 29.03.2006ರ ಸರ್ಕಾರದ ಆದೇಶದಲ್ಲಿ ಬೆಳಗಾಂವ್ ಜಿಲ್ಲೆ ಸದಲಗಾ ಉಪ ನೋಂದಣಿ ಕಛೇರಿ ಕಟ್ಟಡ ನಿರ್ಮಾಣಕ್ಕೆ ರೂ.10.40 ಲಕ್ಷಗಳಿಗೆ ಆಡಳಿತಾತ್ಮಕ ಮಂಜೂರಾತಿ ನೀಡುವ ಮೂಲಕ ಹಣ ಬಿಡುಗಡೆಗೊಳಿಸಿ ಆದೇಶಿಸಲಾಗಿದೆ. ಸದರಿ ಅನುದಾನವನ್ನು 2005-06ನೇ ಸಾಲಿನಲ್ಲಿ ಉಪಯೋಗಿಸಿಕೊಂಡಿರುವುದಿಲ್ಲ.

ಮೇಲೆ ಓದಲಾಗಿರುವ (2) ದಿನಾಂಕ: 25.05.2006ರ ಸರ್ಕಾರದ ಆದೇಶದಲ್ಲಿ ದಿನಾಂಕ: 29.03.2006ರ ಆದೇಶವನ್ನು 2006-07ನೇ ಸಾಲಿಗೆ ನವೀಕರಿಸಿ ಆದೇಶಿಸಲಾಗಿದೆ.

ಮೇಲೆ ಓದಲಾಗಿರುವ (3) ದಿನಾಂಕ: 14.02.2007ರ ಸರ್ಕಾರದ ಆದೇಶದಲ್ಲಿ ರೂ. 5.20 ಲಕ್ಷ ಮೊತ್ತ ಬಿಡುಗಡೆಗೊಳಿಸಿ ಆದೇಶಿಸಲಾಗಿದೆ.

ಮೇಲೆ ಓದಲಾಗಿರುವ (4) ದಿನಾಂಕ: 31.07.2007 ರ ಪತ್ರದಲ್ಲಿ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರು ಸದಲಗಾ ಉಪ ನೋಂದಣಿ ಕಛೇರಿಗೆ ಆಡಳಿತಾತ್ಮಕ ಮಂಜೂರಾತಿ ನೀಡಿರುವ ಹಣದ ಪೈಕಿ ರೂ.5.20 ಲಕ್ಷ ಮೊತ್ತವನ್ನು 2007-08ನೇ ಸಾಲಿನ ಆಯವ್ಯಯದಲ್ಲಿ ಒದಗಿಸಲಾಗಿರುವ ಅನುದಾನದಿಂದ ಬಿಡುಗಡೆ ಗೊಳಿಸುವಂತೆ ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 160 ಮುನೋಮು 2007, ಬೆಂಗಳೂರು, ದಿನಾಂಕ: 14.09.2007**

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಬೆಳಗಾಂವ್ ಜಿಲ್ಲೆಯ ಸದಲಗಾ ಪಟ್ಟಣದಲ್ಲಿ ನಿರ್ಮಿಸಲಿರುವ ಉಪ ನೋಂದಣಿ ಕಛೇರಿ ಕಟ್ಟಡ ನಿರ್ಮಾಣಕ್ಕಾಗಿ ಸರ್ಕಾರವು ರೂ.5.20 ಲಕ್ಷ ಮೊತ್ತವನ್ನು 2007-08 ನೇ ಸಾಲಿನ ಆಯವ್ಯಯದಿಂದ ಬಿಡುಗಡೆಗೊಳಿಸಿ ಆದೇಶಿಸಿದೆ.

ಈ ಮೊತ್ತವನ್ನು ಲೆಕ್ಕ ಶೀರ್ಷಿಕೆ 4059-80-051-36 ಉಪ ನೋಂದಣಿ ಕಛೇರಿ ಕಟ್ಟಡ ನಿರ್ಮಾಣ 2007-08 ರಡಿ ಭರಿಸತಕ್ಕದ್ದು.

ಈ ಆದೇಶವನ್ನು ದಿನಾಂಕ: 10.07.1996ರ ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96ರಲ್ಲಿ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರಿಗಳ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1726

**ಎಂ.ಎಫ್. ಯರಗೊಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ
(ನೋಂದಣಿ ಮತ್ತು ಮುದ್ರಾಂಕ)

**ವಿಷಯ:** ದೇಶೀಯ ವಿದ್ಯಾ ಶಾಲಾ ಸಮಿತಿ, ಶಿವಮೊಗ್ಗ ಈ ಸಂಸ್ಥೆಗೆ ನೇಮಕ ಮಾಡಲಾಗಿರುವ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸಿ ಆದೇಶಿಸಿರುವ ಕುರಿತು.

**ಓದಲಾಗಿದೆ:-** 1. ಸರ್ಕಾರದ ಆದೇಶ ಸಂಖ್ಯೆ: ಕಂಇ 17 ಮುನೊಸೊ 2006 ದಿನಾಂಕ: 24.2.2007.

2. ಜಿಲ್ಲಾಧಿಕಾರಿಗಳು, ಶಿವಮೊಗ್ಗ ಇವರ ಪತ್ರ ಸಂಖ್ಯೆ: ಇಎಸ್‌ಟಿ (1) ಸಿಆರ್/147/2007–08 ದಿನಾಂಕ:8.6.2007.

3. ಆಡಳಿತಾಧಿಕಾರಿಗಳು, ದೇಶೀಯ ವಿದ್ಯಾ ಶಾಲಾ ಸಮಿತಿ, ಶಿವಮೊಗ್ಗ ಇವರ ಪತ್ರ ಸಂಖ್ಯೆ: ಡಿವಿಎಸ್/ಎ.ಡಿ.ಎಂ.ಸಿ.ಆರ್.–1/06–07 ದಿ: 2.7.2007.

4. ಜಿಲ್ಲಾ ನೊಂದಣಾಧಿಕಾರಿಗಳು, ಶಿವಮೊಗ್ಗ ಇವರ ಪತ್ರ ಸಂಖ್ಯೆ: ಜಿನೋಶಿ:ಸಂಘ:44/07–08 ದಿನಾಂಕ:16.7.2007.

**ಪ್ರಸ್ತಾವನೆ:**

ಮೇಲೆ ಓದಲಾದ (1) ದಿನಾಂಕ 23.05.2006ರ ಸರ್ಕಾರಿ ಆದೇಶದಲ್ಲಿ ದೇಶೀಯ ವಿದ್ಯಾ ಶಾಲಾ ಸಮಿತಿ, ಶಿವಮೊಗ್ಗ ಬೆಂಗಳೂರು ಈ ಸಂಸ್ಥೆಗೆ ಸಾರ್ವಜನಿಕ ಹಾಗೂ ಮಕ್ಕಳ ಹಿತದೃಷ್ಟಿಯಿಂದ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27ಎ ರಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹಿರಿಯ ಉಪ ವಿಭಾಗಾಧಿಕಾರಿ, ಶಿವಮೊಗ್ಗ ಉಪ ವಿಭಾಗ, ಶಿವಮೊಗ್ಗ ಇವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಿ ಆಡಳಿತಾಧಿಕಾರಿಯ ಅವಧಿಯನ್ನು ದಿನಾಂಕ: 6.12.2006 ರಿಂದ 6 ತಿಂಗಳ ಅವಧಿಗೆ ವಿಸ್ತರಿಸಿ ಆದೇಶವನ್ನು ಹೊರಡಿಸಲಾಗಿದೆ. ಸದರಿ ಆದೇಶದಂತೆ ಶ್ರೀ ಎಸ್.ಹೆಚ್. ವಿಜಯಕುಮಾರ್, ಹಿರಿಯ ಉಪ ವಿಭಾಗಾಧಿಕಾರಿಗಳು ಸದರಿ ಸಂಸ್ಥೆಯ ಆಡಳಿತಾಧಿಕಾರಿಯಾಗಿ ದಿನಾಂಕ: 7.6.2006 ರಂದು ಅಧಿಕಾರ ವಹಿಸಿಕೊಂಡು ಕಾರ್ಯನಿರ್ವಹಿಸುತ್ತಿದ್ದಾರೆ.

ಮೇಲೆ ಓದಲಾದ (2) ದಿನಾಂಕ: 8.6.2007ರ ಜಿಲ್ಲಾಧಿಕಾರಿಗಳು, ಶಿವಮೊಗ್ಗ ಇವರು ತಮ್ಮ ಪತ್ರದಲ್ಲಿ, ಸದರಿ ಸಂಸ್ಥೆಯ ಆಡಳಿತ ಮಂಡಳಿ ಪರ ಮತ್ತು ವಿರುದ್ಧವಾಗಿ ನಾಲ್ಕು ಪ್ರಕರಣಗಳು ಶಿವಮೊಗ್ಗದ ಸಿವಿಲ್ ನ್ಯಾಯಾಲಯದಲ್ಲಿ ಇತ್ಯರ್ಥವಾಗದೇ ಬಾಕಿ ಇರುತ್ತವೆ. ಅಲ್ಲದೆ ಹೆಚ್ಚುವರಿಯಾಗಿ ನೋಂದಣಿಯಾದ 208 ಜನ ಸದಸ್ಯರ ವಿಚಾರವು ಸಹ ನ್ಯಾಯಾಲಯದಲ್ಲಿ ವಿಚಾರಣೆಗೊಳಪಟ್ಟಿರುತ್ತದೆ. ಈ ಹೆಚ್ಚುವರಿ ಸದಸ್ಯರನ್ನು ಹೊರತುಪಡಿಸಿ ಹಾಲಿ ಇರುವ ಮತದಾರರನ್ನು ಒಳಗೊಂಡಂತೆ ಸಂಸ್ಥೆಗೆ ಚುನಾವಣೆ ನಡೆಸಲು ಅನುಮತಿ ನೀಡುವಂತೆ ನ್ಯಾಯಾಲಯದಲ್ಲಿ ಮಧ್ಯಂತರ ಅರ್ಜಿಯನ್ನು ಸಹ ಸಲ್ಲಿಸಲಾಗಿದ್ದು, ನ್ಯಾಯಾಲಯದಲ್ಲಿ ಬಾಕಿ ಇರುವ ಯಾವುದೇ ಪ್ರಕರಣಗಳು ಸಧ್ಯದ ಪರಿಸ್ಥಿತಿಯಲ್ಲಿ ಇತ್ಯರ್ಥ ಗೊಳ್ಳುವುದು ಕಷ್ಟಸಾಧ್ಯವಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಚುನಾವಣೆಯನ್ನು ಆರು ತಿಂಗಳ ಒಳಗೆ ನಡೆಸಲು ಸಾಧ್ಯವಿಲ್ಲ ಅಲ್ಲದೇ ಈ ಸಂಸ್ಥೆಯ ಲೆಕ್ಕಪತ್ರ, ಹಣಕಾಸು ವ್ಯವಹಾರ ಇನ್ನು ಇತರೆ ಮಹತ್ವದ ವಿಷಯಗಳಿಗೆ ಸಂಬಂಧಿಸಿದಂತೆ ಪೂರ್ಣ ಪ್ರಮಾಣದ ಅಧಿಕಾರಿಯೊಬ್ಬರ ಸೇವೆಯ ಅಗತ್ಯತೆ ಇರುತ್ತದೆ. ಅಲ್ಲದೆ ಹಿರಿಯ ಉಪ ವಿಭಾಗಾಧಿಕಾರಿಗಳ ಹುದ್ದೆಯ ಜೊತೆಗೆ ಆಡಳಿತಾಧಿಕಾರಿ ಹುದ್ದೆಯೊಡನೆ 4 ಹೆಚ್ಚುವರಿ ಪ್ರಭಾರದಲ್ಲಿರುವ ಶ್ರೀ ಎಸ್.ಹೆಚ್. ವಿಜಯಕುಮಾರ್, ಹಿರಿಯ ಉಪ ವಿಭಾಗಾಧಿಕಾರಿಗಳು, ಶಿವಮೊಗ್ಗ ಇವರು ದೇಶೀಯ ವಿದ್ಯಾ ಶಾಲಾ, ಶಿವಮೊಗ್ಗ ಈ ಸಂಸ್ಥೆಯ ಆಡಳಿತಾಧಿಕಾರಿಗಳಾಗಿ ಕಾರ್ಯನಿರ್ವಹಿಸುವುದು ಬಹಳ ಕಷ್ಟಕರವಾಗಿರುತ್ತದೆಂದು ತಿಳಿಸುತ್ತಾ, ಆಡಳಿತಾಧಿಕಾರಿಯ ಪ್ರಭಾರವನ್ನು ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರಿಗೆ ಅಥವಾ ಜಿಲ್ಲಾ ಪಂಚಾಯತ್ ಕಛೇರಿಯ ಯಾವುದೇ ಹಿರಿಯ ಅಧಿಕಾರಿಗಳಿಗೆ ವಹಿಸಿ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ ಮತ್ತು ದೇಶೀಯ ವಿದ್ಯಾ ಶಾಲಾ, ಶಿವಮೊಗ್ಗ ಈ ಸಮಿತಿಯ ಆಡಳಿತಾಧಿಕಾರಿಗಳ ಅಧಿಕಾರಾವಧಿಯನ್ನು ಮುಂದಿನ ಆರು ತಿಂಗಳ ಅವಧಿಗೆ ವಿಸ್ತರಿಸಿ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ. ಈ ಮದ್ಯೆ ಸರ್ಕಾರವು ಹೊರಡಿಸಿರುವ ಆದೇಶ ಸಂಖ್ಯೆ: ಸಿಆಸುಇ 117 ಕಸೇವ 2007 ದಿನಾಂಕ: 25.6.2007 ರಂತೆ ಶ್ರೀ ಎನ್.ಆರ್. ನಾಗರಾಜು ಇವರನ್ನು ಶಿವಮೊಗ್ಗ ಉಪ ವಿಭಾಗಾಧಿಕಾರಿಗಳನ್ನಾಗಿ ನೇಮಕ ಮಾಡಿ ಆದೇಶಿಸಿರುವುದರಿಂದ, ಶ್ರೀ ಎನ್.ಆರ್. ನಾಗರಾಜು ಇವರು ಸದರಿ ಆದೇಶದಂತೆ ದಿನಾಂಕ: 2.7.2007 ರಂದು ಉಪ ವಿಭಾಗಾಧಿಕಾರಿಯಾಗಿ ಅಧಿಕಾರ ವಹಿಸಿಕೊಂಡಿದ್ದು ಹಾಗೂ ಅದೇ ದಿವಸದಂತೆ ದೇಶೀಯ ವಿದ್ಯಾ ಶಾಲಾ, ಶಿವಮೊಗ್ಗ ಈ ಸಂಸ್ಥೆಯ ಆಡಳಿತಾಧಿಕಾರಿಯಾಗಿ ಅಧಿಕಾರ ವಹಿಸಿಕೊಂಡಿರುತ್ತಾರೆ.

ಮೇಲೆ ಓದಲಾದ (3) ದಿನಾಂಕ: 2.7.2007ರ ಆಡಳಿತಾಧಿಕಾರಿಗಳು, ದೇಶೀಯ ವಿದ್ಯಾ ಶಾಲಾ ಸಮಿತಿ, ಶಿವಮೊಗ್ಗ ಇವರು ಸರ್ಕಾರಕ್ಕೆ ಪತ್ರ ಬರೆದು ಸದರಿ ಸಮಿತಿಯ ಆಡಳಿತಾಧಿಕಾರಿಗಳ ಅಧಿಕಾರಾವಧಿಯನ್ನು ಮುಂದಿನ ಆರು ತಿಂಗಳ ಅವಧಿಗೆ ವಿಸ್ತರಿಸಿ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ.

ಮೇಲೆ ಓದಲಾದ (4) ದಿನಾಂಕ: 16.7.2007ರ ಜಿಲ್ಲಾ ನೋಂದಣಾಧಿಕಾರಿಗಳು, ಶಿವಮೊಗ್ಗ ಇವರು ಸಹ ಸರ್ಕಾರಕ್ಕೆ ಪತ್ರ ಬರೆದು ದೇಶೀಯ ವಿದ್ಯಾ ಶಾಲಾ, ಶಿವಮೊಗ್ಗ ಈ ಸಂಸ್ಥೆಯ ಆಡಳಿತಾಧಿಕಾರಿಗಳ ಅವಧಿ ಮುಕ್ತಾಯಗೊಳ್ಳುತ್ತಿರುವುದರಿಂದ ಮುಂದಿನ ಆರು ತಿಂಗಳ ಅವಧಿಗೆ ವಿಸ್ತರಿಸಿ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ.

ಆದ್ದರಿಂದ, ಉಪ ವಿಭಾಗಾಧಿಕಾರಿಗಳು, ಶಿವಮೊಗ್ಗ ಇವರ ಕೋರಿಕೆಯಂತೆ ಹಾಗೂ ಜಿಲ್ಲಾ ನೋಂದಣಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ ಇವರು ತಮ್ಮ ಪತ್ರದಲ್ಲಿ ಕೋರಿರುವಂತೆ ದೇಶೀಯ ವಿದ್ಯಾ ಶಾಲಾ, ಶಿವಮೊಗ್ಗ ಈ ಸಂಸ್ಥೆಗೆ ನೇಮಕ ಮಾಡಲಾಗಿದ್ದ ಆಡಳಿತಾಧಿಕಾರಿಗಳ ಅವಧಿಯು ದಿನಾಂಕ: 5.6.2007ಕ್ಕೆ ಮುಕ್ತಾಯವಾಗಿದ್ದು, ಸದರಿ ಆಡಳಿತಾಧಿಕಾರಿಯ ಅವಧಿಯನ್ನು ದಿನಾಂಕ: 6.6.2007 ರಿಂದ ಇನ್ನು 6 ತಿಂಗಳ ಅವಧಿಗೆ ಅಂದರೆ ದಿನಾಂಕ: 6.6.2007 ರಿಂದ 5.12.2007 ರವರೆಗೆ ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 40 ಮುನೊಸೊ 2007, ಬೆಂಗಳೂರು, ದಿನಾಂಕ: 17.09.2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27–ಎ ಪ್ರಕಾರ, ದೇಶೀಯ ವಿದ್ಯಾ ಶಾಲಾ, ಶಿವಮೊಗ್ಗ ಈ ಸಂಸ್ಥೆಗೆ ಆಡಳಿತಾಧಿಕಾರಿಯಾಗಿ ನೇಮಕವಾಗಿರುವ ಉಪ ವಿಭಾಗಾಧಿಕಾರಿಗಳು, ಶಿವಮೊಗ್ಗ ಉಪ ವಿಭಾಗ, ಶಿವಮೊಗ್ಗ ಇವರ ಆಡಳಿತಾಧಿಕಾರಿಯ ಅವಧಿಯನ್ನು ದಿನಾಂಕ 6.6.2007 ರಿಂದ 5.12.2007 ರವರೆಗೆ ವಿಸ್ತರಿಸಿ ಆದೇಶಿಸಿದೆ.

ಆಡಳಿತಾಧಿಕಾರಿಯವರು ವಿಸ್ತರಣಾ ಅವಧಿಯೊಳಗೆ ಕಡ್ಡಾಯವಾಗಿ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1713

**ಶಿವಲಿಂಗ**
ಪೀಠಾಧಿಕಾರಿ
ಕಂದಾಯ ಇಲಾಖೆ
(ನೋಂದಣಿ ಮತ್ತು ಮುದ್ರಾಂಕ)

**ವಿಷಯ:** ಕರ್ನಾಟಕ ಪ್ರದೇಶ್ ಬಂಜಾರ (ಲಂಬಾಣಿ) ಸೇವಾ ಸಂಘ, ಬೆಂಗಳೂರು ಈ ಸಂಸ್ಥೆಗೆ ಆಡಳಿತಾಧಿಕಾರಿ ನೇಮಕ ಕುರಿತು.

**ಓದಲಾಗಿದೆ:–**
1. ಜಿಲ್ಲಾ ನೋಂದಣಾಧಿಕಾರಿಗಳ ಪತ್ರ ಸಂಖ್ಯೆ: ರಿ.ಸಂ.82/69–70 ದಿನಾಂಕ: 11/14.7.2005
2. ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ: ಕಂಇ 26 ಮುನೊಸೊ 2005, ದಿನಾಂಕ: 8.9.2005
3. ಅಧ್ಯಕ್ಷರು ಹಾಗೂ ಪ್ರಧಾನ ಕಾರ್ಯದರ್ಶಿಗಳು, ಕರ್ನಾಟಕ ಪ್ರದೇಶ್ ಬಂಜಾರ (ಲಂಬಾಣಿ) ಸೇವಾ ಸಂಘ ಇವರ ಲಿಖಿತ ಹೇಳಿಕೆ ಸಂಖ್ಯೆ: ದಿನಾಂಕ: 27.9.2005.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ: 14.7.2005ರ ಪತ್ರದಲ್ಲಿ ಕರ್ನಾಟಕ ಪ್ರದೇಶ್ ಬಂಜಾರ (ಲಂಬಾಣಿ) ಸೇವಾ ಸಂಘ, ಬೆಂಗಳೂರು ಈ ಸಂಸ್ಥೆ ಕುರಿತು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 25ರ ಪ್ರಕಾರ ತನಿಖೆ ನಡೆಸಿ ನೀಡಿರುವ ವರದಿಯನುಸಾರ ಸದರಿ ಸಂಸ್ಥೆಯ ಆಡಳಿತದಲ್ಲಿ ಅವ್ಯವಹಾರ ಹಾಗೂ ಹಣದ ದುರುಪಯೋಗ ಆಗಿರುವುದು ಮೇಲ್ನೋಟಕ್ಕೆ ಕಂಡುಬಂದದ್ದರಿಂದ ಸದರಿ ಸಂಸ್ಥೆಯ ಹಾಗೂ ಸಾರ್ವಜನಿಕರ ಹಿತದೃಷ್ಟಿಯಿಂದ ಮತ್ತು ಹಾಗೂ ಸಂಸ್ಥೆಯ ಆಡಳಿತ ಸುಗಮವಾಗಿ ನಡೆಯಲು, ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27ಎ ರನ್ವಯ ಆಡಳಿತಾಧಿಕಾರಿಯನ್ನು ನೇಮಿಸುವುದು ಸೂಕ್ತವೆಂದು ಜಿಲ್ಲಾ ನೋಂದಣಾಧಿಕಾರಿಗಳು ಶಿಫಾರಸ್ಸು ಮಾಡಿರುತ್ತಾರೆ.

ಜಿಲ್ಲಾ ನೋಂದಣಾಧಿಕಾರಿಗಳ ಶಿಫಾರಸ್ಸಿನನ್ವಯ ಸದರಿ ಸಂಘಕ್ಕೆ ಆಡಳಿತಾಧಿಕಾರಿಯನ್ನು ಏಕೆ ನೇಮಕ ಮಾಡಬಾರದೆಂದು ಸದರಿ ಸಂಸ್ಥೆಗೆ, ಮೇಲೆ ಓದಲಾದ–2 ರ ದಿನಾಂಕ: 8.9.2005ರ ಪತ್ರದಲ್ಲಿ ಕಾರಣ ಕೇಳುವ ಸೂಚನಾ ಪತ್ರವನ್ನು ಜಾರಿ ಮಾಡಲಾಗಿತ್ತು. ಸದರಿ ಸೂಚನಾ ಪತ್ರಕ್ಕೆ ಅಧ್ಯಕ್ಷರು ಹಾಗೂ ಪ್ರಧಾನ ಕಾರ್ಯದರ್ಶಿಗಳು, ಕರ್ನಾಟಕ ಪ್ರದೇಶ್ ಬಂಜಾರ (ಲಂಬಾಣಿ) ಸೇವಾ ಸಂಘ, ಬೆಂಗಳೂರು ಇವರು ಮೇಲೆ ಓದಲಾದ–3ರ ದಿನಾಂಕ: 27.9.2005ರ

ಪತ್ರದಲ್ಲಿ ಸಲ್ಲಿಸಿರುವ ಲಿಖಿತ ಹೇಳಿಕೆಯನ್ನು ಪರಿಶೀಲಿಸಿ ಸಂಘದಲ್ಲಿ ಅವ್ಯವಹಾರ ಹಾಗೂ ಹಣದ ದುರುಪಯೋಗ ನಡೆದಿರುವುದು ಮೇಲ್ನೋಟಕ್ಕೆ ಕಂಡು ಬಂದಿದ್ದು, ಸಂಸ್ಥೆಯ ಹಿತದೃಷ್ಟಿಯಿಂದ ಸಂಸ್ಥೆಗೆ ಆಡಳಿತಾಧಿಕಾರಿ ನೇಮಕ ಮಾಡಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 11 ಮುನೊಸೊ 2007, ಬೆಂಗಳೂರು, ದಿನಾಂಕ 02.04.2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಸಾರ್ವಜನಿಕ ಹಿತದೃಷ್ಟಿಯಿಂದ ಕರ್ನಾಟಕ ಪ್ರದೇಶ್ ಬಂಜಾರ (ಲಂಬಾಣಿ) ಸೇವಾ ಸಂಘ, ಬೆಂಗಳೂರು ಈ ಸಂಘಕ್ಕೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27ಎ ಪ್ರಕಾರ ಸರ್ಕಾರಕ್ಕೆ ನಿಹಿತವಾಗಿರುವ ಅಧಿಕಾರವನ್ನು ಚಲಾಯಿಸಿ ಸಹಾಯಕ ಆಯುಕ್ತರು, ಬೆಂಗಳೂರು ದಕ್ಷಿಣ ಇವರನ್ನು ಆಡಳಿತಾಧಿಕಾರಿಯನ್ನಾಗಿ, ಆರು ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೊ ಅಲ್ಲಿಯವರೆಗೆ ನೇಮಿಸಿ ಆದೇಶಿಸಿದೆ.

ಆಡಳಿತಾಧಿಕಾರಿಗಳು ಈ ಅವಧಿಯಲ್ಲಿ ಸಂಘದ ಅವ್ಯವಹಾರಗಳನ್ನು ಸರಿಪಡಿಸಿ, ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 672

**ಶಿವಲಿಂಗ**
ಪೀಠಾಧಿಕಾರಿ
ಕಂದಾಯ ಇಲಾಖೆ
(ನೋಂದಣಿ ಮತ್ತು ಮುದ್ರಾಂಕ)

**ವಿಷಯ:** ಶ್ರೀ ಸೀತಾರಾಘವ ಎಜುಕೇಷನ್ ಸೊಸೈಟಿ, ಕೋಟೆ, ಅರಕಲಗೂಡು, ಹಾಸನ ಜಿಲ್ಲೆ ಈ ಸಂಸ್ಥೆಗೆ ನೇಮಕ ಮಾಡಿದ ಆಡಳಿತಾಧಿಕಾರಿಗಳ ಬದಲಾವಣೆ ಕುರಿತು.

**ಓದಲಾಗಿದೆ:-** 1. ಸರ್ಕಾರದ ಆದೇಶ ಸಂಖ್ಯೆ: ಕಂಇ 31 ಮುನೊಸೊ 2005 ದಿನಾಂಕ: 4.12.2006

2. ಆಡಳಿತಾಧಿಕಾರಿಗಳು, ಶ್ರೀ ಸೀತಾರಾಘವ ಎಜುಕೇಷನ್ ಸೊಸೈಟಿ, ಕೋಟೆ, ಅರಕಲಗೂಡು, ಹಾಸನ ಜಿಲ್ಲೆ ಇವರ ಪತ್ರ ದಿನಾಂಕ: 31.1.2007.

3. ಜಿಲ್ಲಾಧಿಕಾರಿಗಳು, ಹಾಸನ ಜಿಲ್ಲೆ, ಹಾಸನ ಇವರ ಪತ್ರ ಸಂಖ್ಯೆ: ಸಿಬ್ಬಂದಿ (1)425/06-07 ದಿನಾಂಕ:2.2.2007

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ಶ್ರೀ ಸೀತಾರಾಘವ ಎಜುಕೇಷನ್ ಸೊಸೈಟಿ, ಕೋಟೆ, ಅರಕಲಗೂಡು, ಹಾಸನ ಜಿಲ್ಲೆ ಈ ಸಂಸ್ಥೆಯ ಹಿತದೃಷ್ಟಿಯಿಂದ ತಹಸೀಲ್ದಾರ್, ಅರಕಲಗೂಡು, ಹಾಸನ ಜಿಲ್ಲೆ ಇವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಮೇಲೆ ಓದಲಾದ (2)ರ ಆಡಳಿತಾಧಿಕಾರಿಯವರ ಪತ್ರದಲ್ಲಿ ತಾವು ಅರಕಲಗೂಡು ಪಟ್ಟಣ ಪಂಚಾಯ್ತಿಯ ಆಡಳಿತಾಧಿಕಾರಿಯಾಗಿಯೂ ನೇಮಕವಾಗಿದ್ದು, ಮತದಾರರ ಪಟ್ಟಿಯು ಪರಿಷ್ಕರಣೆ ಕಾರ್ಯ, ಬಿ.ಪಿ.ಎಲ್. ಕಾರ್ಡು ವಿತರಣೆ ಕಾರ್ಯಗಳಿಂದ ಆಡಳಿತಾಧಿಕಾರಿ, ಶ್ರೀ ಸೀತಾರಾಘವ ಎಜುಕೇಷನ್ ಸೊಸೈಟಿ, ಕೋಟೆ, ಅರಕಲಗೂಡು, ಹಾಸನ ಜಿಲ್ಲೆ ಈ ಸಂಸ್ಥೆಯ ಕಾರ್ಯವನ್ನು ನಿರ್ವಹಿಸಲು ಸಾಧ್ಯವಾಗಿರುವುದಿಲ್ಲ ಎಂದು ತಿಳಿಸಿರುತ್ತಾರೆ. ಆದ್ದರಿಂದ ಮೇಲೆ ಓದಲಾದ-3ರ ದಿನಾಂಕ: 2.2.2007 ರ ಜಿಲ್ಲಾಧಿಕಾರಿಗಳ ಪತ್ರದಲ್ಲಿ ತಹಸೀಲ್ದಾರ್, ಹಾಸನ ಜಿಲ್ಲೆ ಹಾಗೂ ಆಡಳಿತಾಧಿಕಾರಿಗಳು, ಶ್ರೀ ಸೀತಾರಾಘವ ಎಜುಕೇಷನ್ ಸೊಸೈಟಿ, ಕೋಟೆ, ಅರಕಲಗೂಡು, ಹಾಸನ ಜಿಲ್ಲೆ ಈ ಸಂಸ್ಥೆಯ ಆಡಳಿತಾಧಿಕಾರಿ ಕಾರ್ಯವನ್ನು ನಿರ್ವಹಿಸಲು ಸಾಧ್ಯವಾಗಿರುವುದಿಲ್ಲವೆಂದು ತಿಳಿಸಿದ್ದು ಕಾರ್ಯನಿರ್ವಾಹಕ ಅಧಿಕಾರಿಗಳು, ತಾಲ್ಲೂಕು ಪಂಚಾಯತಿ, ಅರಕಲಗೂಡು ಅಥವಾ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಅರಕಲಗೂಡು ಇವರಿಬ್ಬರಲ್ಲಿ ಯಾರನ್ನಾದರೂ

ಒಬ್ಬರನ್ನು ನೇಮಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ. ಆದ್ದರಿಂದ ಓದಲಾದ 2 ಮತ್ತು 3 ರ ಪ್ರಸ್ತಾವನೆಗಳನ್ನು ಪರಿಶೀಲಿಸಿ ಸದರಿ ಸಂಸ್ಥೆಗೆ ಆಡಳಿತಾಧಿಕಾರಿಯನ್ನು ಬದಲಾಯಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 31 ಮುನೊಸೊ 2007, ಬೆಂಗಳೂರು, ದಿನಾಂಕ 03.04.2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಕಂಇ 31 ಮುನೊಸೊ 2005 ದಿನಾಂಕ: 4.12.2006 ರಲ್ಲಿ ಶ್ರೀ ಸೀತಾರಾಘವ ಎಜುಕೇಷನ್ ಸೊಸೈಟಿ, ಕೋಟೆ, ಅರಕಲಗೂಡು, ಹಾಸನ ಜಿಲ್ಲೆ ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27–ಎ ಪ್ರಕಾರ ಆಡಳಿತಾಧಿಕಾರಿಯಾಗಿ ನೇಮಕ ಮಾಡಲಾಗಿದ್ದ ತಹಸೀಲ್ದಾರ್, ಅರಕಲಗೂಡು, ಹಾಸನ ಜಿಲ್ಲೆ ಇವರನ್ನು ಬದಲಾಯಿಸಿ ಕಾರ್ಯನಿರ್ವಹಣಾಧಿಕಾರಿ, ತಾಲ್ಲೂಕು ಪಂಚಾಯತಿ, ಹಾಸನ ಇವರನ್ನು ಆಡಳಿತಾಧಿಕಾರಿಯಾಗಿ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 674

**ಶಿವಲಿಂಗ**
ಪೀಠಾಧಿಕಾರಿ
ಕಂದಾಯ ಇಲಾಖೆ
(ನೋಂದಣಿ ಮತ್ತು ಮುದ್ರಾಂಕ)

**ಸಹಕಾರ ಸಚಿವಾಲಯ**

**ವಿಷಯ:–** ಗೌನಪಲ್ಲಿ ದೊಡ್ಡ ಪ್ರಮಾಣದ ಕೃಷಿ ಪತ್ತಿನ ಸಹಕಾರ ಬ್ಯಾಂಕ್ ನಿ., ಶ್ರೀನಿವಾಸಪುರ ತಾಲ್ಲೂಕು ಕೋಲಾರ ಜಿಲ್ಲೆ ಇದರ ವಿಶೇಷಾಧಿಕಾರಿ ಅವಧಿ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:–** 1. ಸರ್ಕಾರಿ ಆದೇಶದ ಸಂಖ್ಯೆ: ಸಿಎಂಡಬ್ಲ್ಯೂ 337 ಸಿಎಲ್‌ಎಂ 2005 ದಿನಾಂಕ: 30.01.2006

2. ಸಹಕಾರ ಸಂಘಗಳ ನಿಬಂಧಕರ ಪತ್ರಸಂಖ್ಯೆ: ಸಿಆರ್‌ಡಿ/04/ಕೆಎಂಇ–5/2002–03 ದಿನಾಂಕ: 04.05.2007

**ಪ್ರಸ್ತಾವನೆ:**

ಗೌನಪಲ್ಲಿ ದೊಡ್ಡ ಪ್ರಮಾಣದ ಕೃಷಿ ಪತ್ತಿನ ಸಹಕಾರ ಬ್ಯಾಂಕ್ ನಿ., ಶ್ರೀನಿವಾಸಪುರ ತಾಲ್ಲೂಕು, ಕೋಲಾರ ಜಿಲ್ಲೆ ಇದರ ಆಡಳಿತ ಮಂಡಳಿಯಲ್ಲಿ ಕೋರಂ ಇಲ್ಲದಿದ್ದ ಪ್ರಯುಕ್ತ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 31(1)ರ ಅನ್ವಯ ಕೋಲಾರ ಉಪವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು ದಿನಾಂಕ: 19.09.2002ರ ಆದೇಶದ ಪ್ರಕಾರ ವಿಶೇಷಾಧಿಕಾರಿಯನ್ನು ನೇಮಿಸಿದ್ದು ಸದರಿ ವಿಶೇಷಾಧಿಕಾರಿಯು ದಿನಾಂಕ: 23.09.2002ರಂದು ಸಂಘದ ಪ್ರಭಾರವನ್ನು ವಹಿಸಿಕೊಂಡಿದು ತದನಂತರ ವಿಶೇಷಾಧಿಕಾರಿಯ ಅವಧಿಯನ್ನು ಕಾಲಕಾಲಕ್ಕೆ ವಿಸ್ತರಿಸಲಾಗಿದ್ದು ಮೇಲೆ ಓದಲಾದ (1)ರ ಆದೇಶದಲ್ಲಿ ಸದರಿ ಅವಧಿಯನ್ನು ದಿನಾಂಕ: 31.12.2006ರ ವರೆಗೆ ವಿಸ್ತರಿಸಿದ್ದು ಹಾಗೆ ವಿಸ್ತರಣೆಗೊಂಡ ಅವಧಿಯು ದಿನಾಂಕ: 31.12.2006ಕ್ಕೆ ಮುಕ್ತಾಯವಾಗಿರುತ್ತದೆ. ಸಹಕಾರ ಸಂಘಗಳ ನಿಬಂಧಕರು ಕೆಳಕಂಡ ಕಾರಣಗಳಿಗಾಗಿ ವಿಶೇಷಾಧಿಕಾರಿಯ ಅವಧಿಯನ್ನು ದಿನಾಂಕ 01.01.2007 ರಿಂದ 31.12.2007ರವರೆಗೆ ವಿಸ್ತರಿಸುವಂತೆ ಮೇಲೆ ಓದಲಾದ (2)ರ ಪತ್ರದಲ್ಲಿ ಶಿಫಾರಸ್ಸು ಮಾಡಿದ್ದಾರೆ.

1. ಬ್ಯಾಂಕಿನ 1994–95 ರಿಂದ 1996–97ನೇ ಸಾಲುಗಳ ಮರು ಲೆಕ್ಕಪರಿಶೀಲನಾ ವರದಿಯ ಬಗ್ಗೆ ಸಲ್ಲಿಸಿರುವ ಆಕ್ಷೇಪಣೆಗಳ ಮೇಲೆ ಮರು ಲೆಕ್ಕಪರಿಶೀಲನೆ ನಡೆಯುತ್ತಿದ್ದು, ಇದರ ವರದಿ ಬಂದ ನಂತರ ಕಾನೂನು ಕ್ರಮ ಕೈಗೊಳ್ಳುವುದು.

2. ಸಂಘದಲ್ಲಿ ನಡೆದಿರುವ ಅವ್ಯವಹಾರಗಳ ಬಗ್ಗೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64ರಂತೆ ವಿಚಾರಣೆ ನಡೆಯುತ್ತಿದ್ದು, ವಿಚಾರಣೆ ಪೂರ್ಣಗೊಂಡು ವರದಿ ಬಂದ ನಂತರ ಕಾನೂನು ರೀತ್ಯಾ ಕ್ರಮ ಕೈಗೊಳ್ಳುವುದು.
3. ಸಂಘದ 2001-02 ರಿಂದ 2004-05ನೇ ಸಾಲುಗಳ ಲೆಕ್ಕ ಪರಿಶೋಧನೆ ನಡೆಯುತ್ತಿದ್ದು, ಲೆಕ್ಕ ಪರಿಶೋಧನೆ ಪೂರ್ಣಗೊಂಡ ನಂತರ ಕಾನೂನು ರೀತ್ಯಾ ಕ್ರಮ ಕೈಗೊಳ್ಳುವುದು.
4. ಸಂಘದಲ್ಲಿ ನಡೆದಿರುವ ಅವ್ಯವಹಾರಗಳ ಬಗ್ಗೆ ಸಿ.ಓ.ಡಿ. ವಿಚಾರಣೆ ನಡೆಯುತ್ತಿದ್ದು, ಸಿಓಡಿ ಅಧಿಕಾರಿಗಳಿಗೆ ದಾಖಲಾತಿಗಳನ್ನು ನೀಡಬೇಕಾಗಿರುತ್ತದೆ.
5. ಸುಸ್ತಿದಾರರಿಂದ ಬರಬೇಕಾಗಿರುವ ವಿವಿಧ ತರಹದ ಸಾಲಗಳನ್ನು ವಸೂಲಿ ಮಾಡಲು ಕಾನೂನು ರೀತ್ಯಾ ಕ್ರಮವನ್ನು ಕೈಗೊಳ್ಳುವುದು.
6. ಸಂಘದ ಮಾಜಿ ಕಾರ್ಯದರ್ಶಿಯು ಸಂಘದ ದಾಖಲಾತಿಗಳ ಪ್ರಭಾರ ನೀಡದೆ ಇದ್ದ ಮತ್ತು ಸಂಘದ ದಾಖಲಾತಿಗಳ ಪುಟಗಳನ್ನು ಕಿತ್ತುಹಾಕಿರುವ ಹಿನ್ನೆಲೆಯಲ್ಲಿ ಶ್ರೀನಿವಾಸಪುರ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ಪ್ರಕರಣ 109(3) (16) ರನ್ವಯ ಕ್ರಿಮಿನಲ್ ಮೊಕದ್ದಮೆಯನ್ನು ದಾಖಲು ಮಾಡಿದ್ದು, ನ್ಯಾಯಾಲಯಕ್ಕೆ ದಾಖಲಾತಿಗಳನ್ನು ಹಾಜರುಪಡಿಸಲು ಕ್ರಮ ಕೈಗೊಳ್ಳುವುದು.
7. ಸಂಘದಲ್ಲಿ ಮಾಜಿ ಕಾರ್ಯದರ್ಶಿ ವಿರುದ್ಧ ಗೌನಪಲ್ಲಿ ಪೊಲೀಸ್ ಠಾಣೆಯಲ್ಲಿ ಕ್ರಿಮಿನಲ್ ಮೊಕದ್ದಮೆಯನ್ನು ದಾಖಲು ಮಾಡಲಾಗಿದ್ದು, ಕ್ರಿಮಿನಲ್ ಮೊಕದ್ದಮೆಗೆ ಸಂಬಂಧಿಸಿದಂತೆ ಸಂಘದಿಂದ ದಾಖಲಾತಿಗಳನ್ನು ಪೊಲೀಸ್ ಠಾಣೆಗೆ ಒದಗಿಸುವುದು.

ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವವನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 128 ಸಿಎಲ್ಎಮ್ 2007, ಬೆಂಗಳೂರು, ದಿನಾಂಕ: 26.06.2007**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ ಪ್ರಕರಣ 31(1)ನ್ನು ಈ ಕೆಳಕಂಡ ಮಾರ್ಪಾಟುಗಳೊಂದಿಗೆ, ಗೌನಪಲ್ಲಿ ದೊಡ್ಡ ಪ್ರಮಾಣದ ಕೃಷಿ ಪತ್ತಿನ ಸಹಕಾರ ಬ್ಯಾಂಕ್ ನಿ., ಶ್ರೀನಿವಾಸಪುರ ತಾಲ್ಲೂಕು, ಕೋಲಾರ ಜಿಲ್ಲೆ ಇದಕ್ಕೆ ಅನ್ವಯವಾಗತಕ್ಕದ್ದೆಂದು ನಿರ್ದೇಶಿಸುತ್ತದೆ ಎಂದರೇ:

**31ರ ಪ್ರಕರಣದಲ್ಲಿ:**

2ನೇ ಉಪಪ್ರಕರಣದಲ್ಲಿರುವ **"ಒಂದು ವರ್ಷ"** ಎಂಬ ಪದಗಳಿಗೆ ಬದಲಾಗಿ **"ಐವತ್ತೆಂಟು ತಿಂಗಳು"** ಎಂಬುದಾಗಿ ಪ್ರತಿಯೋಜಿಸತಕ್ಕದ್ದು.

**ಸೂಚನೆ:** ಪ್ರಕರಣ 31(1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 31.12.2007 ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 31(1)ರ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1213

**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

**ವಿಷಯ:-** ಹಳಿಯಾಳ ಪಟ್ಟಣ ಸಹಕಾರಿ ಬ್ಯಾಂಕ್ ನಿಯಮಿತ, ಹಳಿಯಾಳ ಇದರ 2005-06ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ನಡೆಸಲು ಅವಧಿ ವಿಸ್ತರಣೆ ಬಗ್ಗೆ.

**ಓದಲಾಗಿದೆ:-** ಸಹಕಾರ ಸಂಘಗಳ ನಿಬಂಧಕರುರವರ ಪತ್ರ ಸಂಖ್ಯೆ: ಯುಬಿಸಿ-5/ಜಿಬಿಎಂ/26/2007-08 ದಿನಾಂಕ:27.4.2007

**ಪ್ರಸ್ತಾವನೆ:**

ಹಳಿಯಾಳ ಪಟ್ಟಣ ಸಹಕಾರಿ ಬ್ಯಾಂಕ್ ನಿಯಮಿತ, ಹಳಿಯಾಳ ಬ್ಯಾಂಕಿನ 2005-06ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ದಿನಾಂಕ: 31.03.2007ರೊಳಗೆ ನಡೆಸಬೇಕಾಗಿದ್ದು ಸದರಿ ಬ್ಯಾಂಕಿನ ಏಕಕಾಲಿಕ ಸಾಲ ತೀರುವಳಿ ಯೋಜನೆಯಡಿಯಲ್ಲಿ ಸಾಲ ವಸೂಲಾತಿಗೆ ಹೆಚ್ಚಿನ ಗಮನ ನೀಡುವ ಸಲುವಾಗಿ ಸದರಿ ವಾರ್ಷಿಕ ಮಹಾಸಭೆಯನ್ನು ನಡೆಸಲು ಸಾಧ್ಯವಿಲ್ಲದ ಪ್ರಯುಕ್ತ ದಿನಾಂಕ: 30.09.2007ರೊಳಗೆ ನಡೆಸಲು ಅನುಮತಿ ನೀಡುವಂತೆ ದಿನಾಂಕ: 09.02.2007ರ ಪತ್ರದಲ್ಲಿ ಸದರಿ ಬ್ಯಾಂಕಿನ ವ್ಯವಸ್ಥಾಪಕರು ಕೋರಿದ್ದು ಸದರಿ ಪ್ರಸ್ತಾವವನ್ನು ಸಹಕಾರ ಸಂಘಗಳ ನಿಬಂಧಕರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 132 ಸಿಎಲ್‌ಎಮ್ 2007, ಬೆಂಗಳೂರು, ದಿನಾಂಕ: 25.06.2007**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಹಳಿಯಾಳ ಪಟ್ಟಣ ಸಹಕಾರಿ ಬ್ಯಾಂಕ್ ನಿಯಮಿತ., ಹಳಿಯಾಳ ಇದರ 2005-06ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ನಡೆಸಲು ದಿನಾಂಕ: 30.09.2007ರ ವರೆಗೆ ಕಾಲಾವಕಾಶ ನೀಡಲು ಅನುವಾಗುವಂತೆ ಹಳಿಯಾಳ ಪಟ್ಟಣ ಸಹಕಾರಿ ಬ್ಯಾಂಕ್ ನಿಯಮಿತ, ಹಳಿಯಾಳ ಇದಕ್ಕೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಉಪಬಂಧಗಳು ಕೆಳಗಿನ ಮಾರ್ಪಾಟಿನೊಂದಿಗೆ ಅನ್ವಯವಾಗುತ್ತದೆಂದು ನಿರ್ದೇಶಿಸುತ್ತದೆ ಎಂದರೆ:

**27ರ ಪ್ರಕರಣದಲ್ಲಿ:**

27ನೇ ಪ್ರಕರಣ ಉಪಪ್ರಕರಣ(1)ರ ಪರಂತುಕದಲ್ಲಿನ **"ಆರು ತಿಂಗಳು"** ಎಂಬ ಪದಗಳಿಗೆ ಬದಲಾಗಿ **"ಹನ್ನೆರಡು ತಿಂಗಳು"** ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:** ಪ್ರಕರಣ 27(1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 30.09.2007ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27(1)ಕ್ಕೆ ಪ್ರಕರಣದ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1214

**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ ಮತ್ತು
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

**ವಿಷಯ:-** ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39ಎ (4) ರನ್ವಯ ದಿನಾಂಕ: 31.12.2006 ರೊಳಗೆ ನಡೆಸಬೇಕಿರುವ ಹಳಿಯಾಳ ಪಟ್ಟಣ ಸಹಕಾರಿ ಬ್ಯಾಂಕಿನ ಆಡಳಿತ ಸಮಿತಿಯ ಚುನಾವಣೆಯನ್ನು ಮುಂದೂಡುವ ಬಗ್ಗೆ.

**ಓದಲಾಗಿದೆ:-**
1. ಸರ್ಕಾರಿ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ 77 ಸಿಎಲ್‌ಎಂ 2006 ದಿ: 7.4.2006
2. ಸರ್ಕಾರಿ ಆದೇಶ ಸಂಖ್ಯೆ: ಸಿಒ 180 ಸಿಎಲ್‌ಎಂ 06 ದಿನಾಂಕ: 16.09.2006
3. ಸರ್ಕಾರದ ಆದೇಶದ ಸಂ: ಸಿಒ 256 ಸಿಎಲ್‌ಎಂ 2006 ದಿನಾಂಕ: 21.12.2006
4. ಸಹಕಾರ ಸಂಘಗಳ ನಿಬಂಧಕರ ಪತ್ರದ ಸಂಖ್ಯೆ: ಯುಬಿಸಿ-1/225/ಅಮಂ/2006-07 ದಿನಾಂಕ:08.06.2007

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದ ಪ್ರಕಾರ ಕರ್ನಾಟಕ ಸರ್ಕಾರವು ಸದರಿ ಬ್ಯಾಂಕಿನ ಆಡಳಿತ ಸಮಿತಿಯ ಚುನಾವಣೆಯನ್ನು ದಿನಾಂಕ: 30.09.2006ರವರೆಗೆ ಮುಂದೂಡಿರುತ್ತದೆ. ಮೇಲೆ ಓದಲಾದ 2ರ ಆದೇಶದ ಪ್ರಕಾರ ಸದರಿ ಬ್ಯಾಂಕಿನ ಆಡಳಿತ ಸಮಿತಿಯ ಚುನಾವಣೆಯನ್ನು ದಿನಾಂಕ: 31.12.2006ರ ವರೆಗೆ ಮುಂದೂಡಿರುತ್ತದೆ. ಮೇಲೆ ಓದಲಾದ 3ರ ಆದೇಶದನ್ವಯ ಸದರಿ ಬ್ಯಾಂಕಿನ ಚುನಾವಣೆಯನ್ನು ದಿನಾಂಕ: 30.06.2007ರವರೆಗೆ ಮುಂದೂಡಿರುತ್ತದೆ. ಹಳಿಯಾಳ ಪಟ್ಟಣ ಸಹಕಾರಿ ಬ್ಯಾಂಕಿನ ಆಡಳಿತಗಾರರು ಏಕಕಾಲಿಕ ಸಾಲ ತೀರುವಳಿ ಯೋಜನೆಯನ್ನು ದಿನಾಂಕ: 31.12.2007ರವರೆಗೆ ವಿಸ್ತರಿಸಿದ್ದು ಅದರ ಸದುಪಯೋಗವನ್ನು ಹೆಚ್ಚಿನ ಸಂಖ್ಯೆಯ ಸಾಲಗಾರರು ಪಡೆಯಲು ಸಮಯದ ಅವಶ್ಯಕತೆ ಇರುವುದರಿಂದ ದಿನಾಂಕ: 30.06.2007ರೊಳಗೆ ನಡೆಸಬೇಕಾಗಿರುವ ಸದರಿ ಬ್ಯಾಂಕಿನ ಚುನಾವಣೆಯನ್ನು ಮುಂದೂಡಿ ಆಡಳಿತಗಾರರ ಅವಧಿಯನ್ನು ದಿನಾಂಕ: 01.07.2007ರಿಂದ 6 ತಿಂಗಳ ಅವಧಿಗೆ ಅಂದರೆ ದಿನಾಂಕ: 31.12.2007ರವರೆಗೆ ವಿಸ್ತರಿಸುವಂತೆ ಕೋರಿದ್ದು ಸದರಿ ಮನವಿಯನ್ನು ಸಹಕಾರ ಸಂಘಗಳ ನಿಬಂಧಕರು ಪರಿಶೀಲಿಸಿ, ಸದರಿ ಬ್ಯಾಂಕಿನ ಆಡಳಿತಗಾರರ ಅವಧಿಯನ್ನು ದಿನಾಂಕ: 31.12.2007ರವರೆಗೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರ ಅನ್ವಯ ಪ್ರಕರಣ 39ಎ(4)ಕ್ಕೆ ವಿನಾಯಿತಿ ನೀಡಿ ವಿಸ್ತರಿಸುವಂತೆ ಮೇಲೆ ಓದಲಾದ (4)ರ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಸಹಕಾರಿ ಸಂಘಗಳ ನಿಬಂಧಕರ ಪ್ರಸ್ತಾವನೆಯನ್ನು ಕೂಲಂಕುಶವಾಗಿ ಪರಿಗಣಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಓ 126 ಸಿಎಲ್‌ಎಮ್ 2007, ಬೆಂಗಳೂರು, ದಿನಾಂಕ: 23.06.2007**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ಮತ್ತು 39ಎ(4) ರಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ದಿನಾಂಕ: 30.06.2007 ರೊಳಗೆ ನಡೆಸಬೇಕಿರುವ ಹಳಿಯಾಳ ಪಟ್ಟಣ ಸಹಕಾರಿ ಬ್ಯಾಂಕಿನ ಆಡಳಿತ ಸಮಿತಿಯ ಚುನಾವಣೆಯನ್ನು ಪುನಃ ಯಾವುದೇ ಸಂದರ್ಭದಲ್ಲಿ ಮುಂದೂಡತಕ್ಕದ್ದಲ್ಲ ಎಂಬ ಷರತ್ತಿನೊಂದಿಗೆ ಮುಂದೂಡಿ ದಿನಾಂಕ: 31.12.2007ರೊಳಗೆ ನಡೆಸತಕ್ಕದೆಂದೂ ಹಾಗೆ ಆಡಳಿತ ಸಮಿತಿಗೆ ಚುನಾವಣೆ ನಡೆಸುವವರೆಗೆ ಹಾಲಿ ಇರುವ ಆಡಳಿತ ವ್ಯವಸ್ಥೆಯು ಮುಂದುವರೆಯತಕ್ಕದ್ದೆಂದೂ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1215

**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

**ವಿಷಯ:-** ಹೊಸಕೆರೆ ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ, ಮದ್ದೂರು ತಾಲ್ಲೂಕು ಇದರ ವಿಶೇಷಾಧಿಕಾರಿಯ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:-** 1. ಸಹಕಾರ ಸಂಘಗಳ ಅಪರ ನಿಬಂಧಕರು (ಕೈ & ಇತರೆ) ಇವರ ಪತ್ರ ಸಂ:ಡಿಎವೈ-1/ಜೆಎಂಸಿ/53/2006-07 ದಿನಾಂಕ: 27.12.2006.

2. ಸರ್ಕಾರದ ಪತ್ರ ಸಂಖ್ಯೆ: ಸಿಓ 03 ಸಿಎಲ್‌ಎಂ 2007 ದಿನಾಂಕ: 09.01.2007

3. ಸಹಕಾರ ಸಂಘಗಳ ಅಪರ ನಿಬಂಧಕರು (ಕೈ & ಇತರೆ) ಇವರ ಪತ್ರ ಸಂಖ್ಯೆ:ಡಿಎವೈ-1/ಜೆಎಂಸಿ/53/2006-07 ದಿನಾಂಕ: 21.5.2007

**ಪ್ರಸ್ತಾವನೆ:**

ಮದ್ದೂರು ತಾಲ್ಲೂಕು ಹೊಸಕೆರೆ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಈ ಸಂಘದ ಆಡಳಿತ ಮಂಡಳಿಯಲ್ಲಿ ಕೋರಂ ಇಲ್ಲದಿದ್ದ ಪ್ರಯುಕ್ತ ಮಂಡ್ಯ ಉಪವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 31ರಂತೆ ಸದರಿ ಸಂಘಕ್ಕೆ ದಿನಾಂಕ: 03.07.2003 ರಂದು ವಿಶೇಷಾಧಿಕಾರಿಯನ್ನು

ನೇಮಿಸಿದ್ದು ಅವರ ಅವಧಿಯನ್ನು ಕಾಲಕಾಲಕ್ಕೆ ವಿಸ್ತರಿಸಿದ್ದು ಹಾಗೆ ವಿಸ್ತರಿಸಿದ ಅವಧಿಯು ದಿನಾಂಕ 02.01.2005ಕ್ಕೆ ಮುಕ್ತಾಯವಾಗಿರುತ್ತದೆ. ಮೇಲೆ ಓದಲಾದ (1)ರ ಪತ್ರದಲ್ಲಿ ಸಂಘದ ಮಾಜಿ ಕಾರ್ಯದರ್ಶಿಯವರು ಲೆಕ್ಕಪತ್ರಗಳನ್ನು ಹಾಲಿ ಕಾರ್ಯದರ್ಶಿಯವರಿಗೆ ವಹಿಸಿಕೊಡದೇ ಬೆನಗರಹಳ್ಳಿ ಪೊಲೀಸ್ ಠಾಣೆಯಲ್ಲಿ ಕೇಸು ದಾಖಲಿಸಿ ಲೆಕ್ಕಪತ್ರಗಳು ಲಭ್ಯವಿಲ್ಲದೆ ಆಡಳಿತ ಮಂಡಳಿಯ ಚುನಾವಣೆಯನ್ನು ನಡೆಸಲು ಸಾಧ್ಯವಾಗುವುದಿಲ್ಲವೆಂದು ತಿಳಿಸಿ ದಿನಾಂಕ 03.01.2005 ರಿಂದ 02.06.2007ರವರೆಗೆ ವಿಶೇಷಾಧಿಕಾರಿಯ ಅವಧಿಯನ್ನು ವಿಸ್ತರಿಸುವಂತೆ ಸಹಕಾರ ಸಂಘಗಳ ನಿಬಂಧಕರು ಶಿಫಾರಸ್ಸು ಮಾಡಿದ್ದರು. ವಿಶೇಷಾಧಿಕಾರಿಯ ಅವಧಿಯು ದಿನಾಂಕ: 02.01.2005 ರಂದು ಮುಕ್ತಾಯವಾಗಿದ್ದು ಸುಮಾರು ಎರಡು ವರ್ಷಗಳ ವಿಳಂಬದ ನಂತರ ಅವಧಿ ವಿಸ್ತರಣೆಗೆ ಪ್ರಸ್ತಾವ ಸಲ್ಲಿಸಲು ಕಾರಣವೇನು ಎಂಬ ಬಗ್ಗೆ ಸ್ಪಷ್ಟನೆ ನೀಡುವಂತೆ ಮೇಲೆ ಓದಲಾದ (2)ರ ಪತ್ರದಲ್ಲಿ ತಿಳಿಸಲಾಗಿತ್ತು. ಮೇಲೆ ಓದಲಾದ (3)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಸದರಿ ವಿಳಂಬಕ್ಕೆ ನಿರ್ದಿಷ್ಟವಾದ ಯಾವುದೇ ಕಾರಣವನ್ನು ನೀಡದೆ ಇದ್ದರೂ ಸಂಘದ ಆಡಳಿತ ಮಂಡಳಿಯ ಚುನಾವಣೆ ನಡೆದು ದಿನಾಂಕ 22.04.2007 ರಂದು ಅಧ್ಯಕ್ಷರ ಚುನಾವಣೆ ನಡೆದಿರುತ್ತದೆಂದು ತಿಳಿಸಿ ದಿನಾಂಕ 03.01.2005 ರಿಂದ 22.4.2007ರವರೆಗೆ ವಿಶೇಷಾಧಿಕಾರಿಯ ಅವಧಿಯನ್ನು ವಿಸ್ತರಿಸುವಂತೆ ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಸಹಕಾರಿ ಸಂಘಗಳ ನಿಬಂಧಕರ ಪ್ರಸ್ತಾವವನ್ನು ಕೂಲಂಕುಶವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 03 ಸಿಎಲ್ಎಮ್ 2007, ಬೆಂಗಳೂರು, ದಿನಾಂಕ: 25.06.2007**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಸದರಿ ಅಧಿನಿಯಮದ ಪ್ರಕರಣ 31(1) ಈ ಕೆಳಕಂಡ ಮಾರ್ಪಾಟುಗಳೊಂದಿಗೆ, ಮದ್ದೂರು ತಾಲ್ಲೂಕು ಹೊಸಕೆರೆ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಇದಕ್ಕೆ ಅನ್ವಯವಾಗತಕ್ಕದೆಂದು ನಿರ್ದೇಶಿಸುತ್ತದೆ ಎಂದರೆ;

**"31ನೇ ಪ್ರಕರಣದಲ್ಲಿ,**

(1)ನೇ ಉಪ ಪ್ರಕರಣದಲ್ಲಿರುವ "ಒಂದು ವರ್ಷ" ಎಂಬ ಪದಕ್ಕೆ ಬದಲಾಗಿ "ನಲವತ್ತು ತಿಂಗಳು" ಎಂಬುದಾಗಿ ಪ್ರತಿಯೋಜಿಸತಕ್ಕದ್ದು.

**ಸೂಚನೆ:** ಪ್ರಕರಣ 31(1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 22.04.2007ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿಯು ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 31(1)ರ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1216

**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ ಮತ್ತು
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

**ವಿಷಯ:-** ರಾಜ್ಯದ ರೈತರಿಗೆ ಕೃಷಿ ಪತ್ತಿನ ಸಹಕಾರಿ ಸಂಸ್ಥೆಗಳು ಶೇಕಡ 4ರ ಬಡ್ಡಿ ದರದಲ್ಲಿ ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಸಾಲ ನೀಡುವ ಬಗ್ಗೆ.

**ಓದಲಾಗಿದೆ:-**
1. ಸರ್ಕಾರಿ ಆದೇಶ ಸಂಖ್ಯೆ: ಸಿಒ 41 ಸಿಎಲ್ಎಸ್ 2006 ದಿನಾಂಕ: 15.05.2006
2. ಸರ್ಕಾರಿ ಆದೇಶ ಸಂಖ್ಯೆ: ಸಿಒ 41 ಸಿಎಲ್ಎಸ್ 2006 ದಿನಾಂಕ: 21.11.2006
3. ಸರ್ಕಾರಿ ಆದೇಶ ಸಂಖ್ಯೆ: ಸಿಒ 41 ಸಿಎಲ್ಎಸ್ 2006 ದಿನಾಂಕ: 09.02.2007
4. ಸಹಕಾರ ಸಂಘಗಳ ನಿಬಂಧಕರ ಪತ್ರಸಂಖ್ಯೆ: ಸಿಆರ್‌ಡಿ/11/ಕೆಆರ್ಎಫ್/2006-07 ದಿನಾಂಕ:21.02.2007

ಪ್ರಸ್ತಾವನೆ:

ಮೇಲೆ ಓದಲಾದ ಆದೇಶ (1) ಮತ್ತು (2)ರಲ್ಲಿ ದಿನಾಂಕ:01.04.2006 ರಿಂದ ರಾಜ್ಯದ ರೈತರಿಗೆ ಕೃಷಿ ಪತ್ತಿನ ಸಹಕಾರಿ ಸಂಸ್ಥೆಗಳ ಮೂಲಕ ಶೇಕಡಾ 4ರ ಬಡ್ಡಿದರದಲ್ಲಿ ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಸಾಲ ನೀಡಲು ಕೆಲವು ಷರತ್ತುಗಳಿಗೊಳಪಟ್ಟು ಮಂಜೂರಾತಿ ನೀಡಲಾಗಿದೆ. ಮೇಲೆ ಓದಲಾದ (3)ರ ಆದೇಶದಲ್ಲಿ ಸರ್ಕಾರವು ಕೃಷಿ ಪತ್ತಿನ ಸಹಕಾರಿ ಸಂಘಗಳು 2006-07ನೇ ಸಾಲಿನಲ್ಲಿ ರಾಜ್ಯದ ರೈತರಿಗೆ ಶೇ.4ರ ಬಡ್ಡಿ ದರದಲ್ಲಿ ಶೇಕಡಾ 4ರ ಬಡ್ಡಿದರದಲ್ಲಿ ಅಲ್ಪಾವಧಿ, ಮಾಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಸಾಲಗಳನ್ನು ಒದಗಿಸಲು ಅನುವಾಗುವಂತೆ ಕೆಳಕಂಡ ಪ್ರಮಾಣದಲ್ಲಿ ಬಡ್ಡಿ ಸಹಾಯಧನವನ್ನು ಒದಗಿಸಲು ಮಂಜೂರಾತಿ ನೀಡಲಾಗಿದೆ.

ಅ) ಅಲ್ಪಾವಧಿ ಬೆಳೆ ಸಾಲಗಳಿಗೆ ಸಂಬಂಧಪಟ್ಟಂತೆ,

1. ನಬಾರ್ಡಿನ ಪುನರ್ಧನದಿಂದ ಪ್ರಾಥಮಿಕ ಹಂತದಲ್ಲಿ ನೀಡಿದ ಸಾಲಗಳ ಮೇಲೆ ಶೇಕಡ 3.0ರಷ್ಟು

2. ನಬಾರ್ಡಿನ ಪುನರ್ಧನ ಪಡೆಯದೇ ಇತರ ಮೂಲಗಳಿಂದ ಸಂಗ್ರಹಿಸಿದ ಸಂಪನ್ಮೂಲಗಳಿಂದ ಪ್ರಾಥಮಿಕ ಹಂತದಲ್ಲಿ ನೀಡಿದ ಸಾಲಗಳ ಮೇಲೆ ಶೇಕಡ 5.5ರಷ್ಟು

3. ರೂ. 3.00 ಲಕ್ಷಕ್ಕಿಂತ ಹೆಚ್ಚಿನ ಬೆಳೆ ಸಾಲವನ್ನು ನೀಡಿದ ಪ್ರಕರಣಗಳಲ್ಲಿ ಪ್ರಾಥಮಿಕ ಹಂತದಲ್ಲಿ ನೀಡಿದ ಅಂತಹ ಸಾಲಗಳ ಮೇಲೆ ಶೇಕಡ 7.5ರಷ್ಟು

ಆ) ಪ್ರಾಥಮಿಕ ಹಂತದಲ್ಲಿ ನೀಡಿದ ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಸಾಲಗಳಿಗೆ ಸಂಬಂಧಪಟ್ಟಂತೆ ಶೇಕಡ 7.5ರಷ್ಟು

ಮೇಲೆ ಓದಲಾದ (4)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು 2006-07ನೇ ಸಾಲಿನ ಬಡ್ಡಿ ಸಹಾಯಧನದ ಬೇಡಿಕೆಯು ಸುಮಾರು 160.42 ಕೋಟಿ ರೂ.ಗಳಾಗುತ್ತದೆಂದು ತಿಳಿಸಿ ಸದರಿ ಹಣವನ್ನು ಬಿಡುಗಡೆ ಮಾಡಬೇಕೆಂದು ಕೋರಿದ್ದಾರೆ. ಸದರಿ ಪ್ರಸ್ತಾವವನ್ನು ಪರಿಗಣಿಸಿ 2006-07ನೇ ಸಾಲಿನ ಆಯವ್ಯಯದಲ್ಲಿ ಲಭ್ಯವಿರುವ ಅನುದಾನದಲ್ಲಿ ಬಾಕಿ ಇರುವ 38.25 ಕೋಟಿ ರೂ.ಗಳನ್ನು ಬಿಡುಗಡೆ ಮಾಡಲು ತೀರ್ಮಾನಿಸಲಾಗಿದೆ.

ಆದ್ದರಿಂದ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 41 ಸಿಎಲ್ಎಮ್ 2006, ಬೆಂಗಳೂರು, ದಿನಾಂಕ: 24.03.2007**

ಪ್ರಸ್ತಾವನೆಯಲ್ಲಿ ತಿಳಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕೃಷಿ ಪತ್ತಿನ ಸಹಕಾರಿ ಸಂಸ್ಥೆಗಳು ರಾಜ್ಯದ ರೈತರಿಗೆ ಶೇಕಡಾ 4ರ ಬಡ್ಡಿ ದರದಲ್ಲಿ 2006-07ನೇ ಸಾಲಿನಲ್ಲಿ ಅಲ್ಪಾವಧಿ, ಮಾಧ್ಯಮಾವಧಿ ಮತ್ತು ದೀರ್ಘಾವಧಿ ಸಾಲ ನೀಡಿರುವ ಬಾಬ್ತು ರೂ.38.25 ಕೋಟಿಗಳನ್ನು (ರೂ. ಮುವತ್ತೆಂಟು ಕೋಟಿ ಇಪ್ಪತ್ತೈದು ಲಕ್ಷಗಳು ಮಾತ್ರ) ಬಿಡುಗಡೆ ಮಾಡಲಾಗಿದೆ.

ಈ ವೆಚ್ಚವನ್ನು 2006-07ನೇ ಸಾಲಿನ ಈ ಕೆಳಕಂಡ ಲೆಕ್ಕ ಮುಖ್ಯ ಶೀರ್ಷಿಕೆಗಳ ಯೋಜನೆಯಡಿಯಲ್ಲಿ ಭರಿಸತಕ್ಕದ್ದು.

1. 2425-00-107-2-41-106 (ಸಹಾಯಧನ)
2. 2425-00-107-2-41-422 (ಎಸ್‌ಸಿಪಿ)
3. 2425-00-107-2-41-423 (ಟಿಎಸ್‌ಪಿ)

ಈ ಹಣವನ್ನು ಸಹಕಾರ ಸಂಘಗಳ ಜಂಟಿ ನಿಬಂಧಕರು (ಪತ್ತು), ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿ ಮೂಲಕ ಅಪರ ಸಹಕಾರ ಸಂಘಗಳ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ) ಬೆಂಗಳೂರು ಇವರ ಮೇಲು ಸಹಿ ಪಡೆದು ಖಜಾನೆಯಿಂದ ಪಡೆಯತಕ್ಕದ್ದು.

ಸಹಕಾರ ಸಂಘಗಳ ನಿಬಂಧಕರು ಸದರಿ ಹಣವನ್ನು ಲೆಕ್ಕಪರಿಶೋಧನೆ ಕ್ಲೇಮುಗಳನ್ನು ಪರಿಶೀಲಿಸಿ ಸಹಕಾರಿ ಸಂಸ್ಥೆಗಳಿಗೆ ಬಿಡುಗಡೆ ಮಾಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆ.ಇ. 173 ವೆಚ್ಚ-2/2007, ದಿನಾಂಕ: 22.03.2007ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ

**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

ಪಿ.ಆರ್. 655

**ವಿಷಯ:–** ಚೆನ್ನಪಟ್ಟಣ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ (ನಿ)., ಇದರ 2005–06ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ಮುಂದೂಡುವ ಬಗ್ಗೆ.

**ಓದಲಾಗಿದೆ:–** ಅಧ್ಯಕ್ಷರು ಚೆನ್ನಪಟ್ಟಣ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ (ನಿ)., ರವರ ಪತ್ರದ ಸಂಖ್ಯೆ: ಟಿಎನಂ. 409/2006–07 ದಿನಾಂಕ: 15.02.2007.

**ಪ್ರಸ್ತಾವನೆ:**

ಚೆನ್ನಪಟ್ಟಣ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ (ನಿ)., ಇದರ 2005–06ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ದಿನಾಂಕ: 31.03.2007ರೊಳಗಾಗಿ ನಡೆಸಬೇಕಾಗಿದ್ದು, ತಾಲ್ಲೂಕಿನಲ್ಲಿ ಬರಗಾಲ ತಲೆದೋರಿದ್ದು ಮತ್ತು ಸಾಲ ಮನ್ನಾ ಯೋಜನೆ ಪ್ರಕಟವಾದ ನಂತರ ತಾಲ್ಲೂಕಿನ ರೈತರು ಸಂಕಷ್ಟದಲ್ಲಿದ್ದು, ಸಾಲ ಮರುಪಾವತಿ ಮಾಡಲು ಸಾಧ್ಯವಾಗದೇ ಇರುವುದರಿಂದ ಬ್ಯಾಂಕಿನಲ್ಲಿ ಹಣಕಾಸಿನ ವ್ಯವಹಾರ ಸ್ಥಗಿತಗೊಂಡಿದ್ದು ಈ ಹಿಂದೆ ಬ್ಯಾಂಕಿನ ವಾರ್ಷಿಕ ಮಹಾಸಭೆ ಹಾಗೂ ಚುನಾವಣೆಯನ್ನು ನಡೆಸಲು ಸುಮಾರು 1ಲಕ್ಷ ರೂ.ಗಳು ಖರ್ಚಾಗಿದ್ದು ಈ ಬ್ಯಾಂಕಿನ ವಾರ್ಷಿಕ ಮಹಾಸಭೆ ಮತ್ತು ಚುನಾವಣೆ ನಡೆಸಲು ಮಾನ್ಯ ಸದಸ್ಯರಿಗೆ ತಿಳುವಳಿಕೆ ಪತ್ರ ಹಾಗೂ ಚುನಾವಣೆ ವೆಚ್ಚ ಸೇರಿ ಸುಮಾರು ಒಂದೂವರೆ ಲಕ್ಷ ರೂ.ಗಳು ಖರ್ಚಾಗುವ ಸಂಭವವಿರುತ್ತದೆ ಎಂದು ಬ್ಯಾಂಕಿನಲ್ಲಿ ಹಣಕಾಸು ವ್ಯವಹಾರ ಇಲ್ಲದಿರುವುದರಿಂದ ವಾರ್ಷಿಕ ಮಹಾಸಭೆಯನ್ನು ಒಂದು ವರ್ಷಗಳ ಕಾಲ ಮುಂದೂಡಲು ದಿನಾಂಕ: 10.02.2007ರಂದು ನಡೆದ ಆಡಳಿತ ಮಂಡಳಿಯಲ್ಲಿ ನಿರ್ಧರಿಸಿದ್ದು 2005–06ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ಒಂದು ವರ್ಷಗಳ ಕಾಲ ಮುಂದೂಡುವಂತೆ ಬ್ಯಾಂಕಿನ ಅಧ್ಯಕ್ಷರು ಮೇಲೆ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಬ್ಯಾಂಕಿನ ಪ್ರಸ್ತಾವೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 46 ಸಿಎಲ್‌ಎಮ್ 2007, ಬೆಂಗಳೂರು, ದಿನಾಂಕ: 09.04.2007**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಚೆನ್ನಪಟ್ಟಣ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಇದರ 2005–06ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ದಿನಾಂಕ:30.09.2007 ವರೆಗೆ ಕಾಲಾವಕಾಶ ನೀಡಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಉಪಬಂಧಗಳು ಕೆಳಗಿನ ಮಾರ್ಪಾಟಿನೊಂದಿಗೆ ಅನ್ವಯವಾಗುತ್ತದೆಂದು ನಿರ್ದೇಶಿಸುತ್ತದೆ ಎಂದರೆ:

**27ರ ಪ್ರಕರಣದಲ್ಲಿ:**

27ನೇ ಪ್ರಕರಣ ಉಪಪ್ರಕರಣ (1)ರ ಪರಂತುಕದಲ್ಲಿನ **"ಆರು ತಿಂಗಳು"** ಎಂಬ ಪದಗಳಿಗೆ ಬದಲಾಗಿ **"ಹನ್ನೆರಡು ತಿಂಗಳು"** ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:** ಪ್ರಕರಣ 27(1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 30.09.2007ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 27(1)ರ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ
**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

ಪಿ.ಆರ್. 684

**ವಿಷಯ:–** ಪಾಂಡವರಪುರ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ (ನಿ)., ಇದರ 2005–06ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ಮುಂದೂಡುವ ಬಗ್ಗೆ.

**ಓದಲಾಗಿದೆ:–** ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಎಲ್‌ಡಿಬಿ–2/203/ಸಸಸಭೆ/2006–07 ದಿನಾಂಕ:8.3.2007

**ಪ್ರಸ್ತಾವನೆ:**

ಮಂಡ್ಯ ಜಿಲ್ಲೆಯ ಪಾಂಡವಪುರ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಇದರ 2005–06ನೇ ಸಾಲಿನ ವಾರ್ಷಿಕ ಸರ್ವ ಸದಸ್ಯರ ಸಭೆಯನ್ನು ಮಾರ್ಚ್–2007ರೊಳಗೆ ನಡೆಸಬೇಕಾಗಿದ್ದು ಸರ್ಕಾರದ ಸಾಲ ಮನ್ನಾ ಧೋರಣೆಯ ಹಿನ್ನೆಲೆಯಲ್ಲಿ ಬ್ಯಾಂಕಿನ ಸಾಲ ವಸೂಲಾತಿ ಕುಂಠಿತಗೊಂಡಿರುವುದರಿಂದ ಮತ್ತು ಕಾವೇರಿ

ನ್ಯಾಯಾಧಿಕರಣದ ತೀರ್ಪಿನ ವಿರುದ್ಧ ಗಲಾಟೆ ಮುಂದುವರೆಯುವ ಸಂಭವವಿರುವುದರಿಂದ ಮಾರ್ಚ್–2007ರ ಒಳಗೆ ನೆಡೆಸಬೇಕಾದ ವಾರ್ಷಿಕ ಮಹಾಸಭೆಯನ್ನು ಸೆಪ್ಟೆಂಬರ್–2007ರಲ್ಲಿ ನಡೆಸಲು ದಿನಾಂಕ: 13.02.2007 ರಂದು ಬ್ಯಾಂಕಿನ ಆಡಳಿತ ಮಂಡಳಿಯ ಸಭೆಯಲ್ಲಿ ತೀರ್ಮಾನಿಸಿದ್ದು ಅದರಂತೆ ಬ್ಯಾಂಕಿನ 2005–06ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ಸೆಪ್ಟೆಂಬರ್–2007ರವರೆಗೆ ಕಾಲಾವಕಾಶ ಕೋರಿದ್ದು ಬ್ಯಾಂಕಿನ ಮನವಿಯನ್ನು ಸಹಕಾರ ಸಂಘಗಳ ನಿಬಂಧಕರು ಸೂಕ್ತ ಶಿಫಾರಸ್ಸಿನೊಂದಿಗೆ ಕಳುಹಿಸಿದ್ದು ಬ್ಯಾಂಕಿನ 2005–06ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ಸೆಪ್ಟೆಂಬರ್–2007ರೊಳಗೆ ನಡೆಸಲು ಅನುಮತಿ ನೀಡುವಂತೆ ಮೇಲೆ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಕೋರಿರುತ್ತಾರೆ.

ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 75 ಸಿಎಲ್ಎಮ್ 2007, ಬೆಂಗಳೂರು, ದಿನಾಂಕ: 10.04.2007**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಪಾಂಡವಪುರ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಇದರ 2005–06ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ದಿನಾಂಕ:30.09.2007 ವರೆಗೆ ಕಾಲಾವಕಾಶ ನೀಡಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಉಪಬಂಧಗಳು ಕೆಳಗಿನ ಮಾರ್ಪಾಟಿನೊಂದಿಗೆ ಅನ್ವಯವಾಗುತ್ತದೆಂದು ನಿರ್ದೇಶಿಸುತ್ತದೆ ಎಂದರೆ:

**27ರ ಪ್ರಕರಣದಲ್ಲಿ:**

27ನೇ ಪ್ರಕರಣ ಉಪಪ್ರಕರಣ (1)ರ ಪರಂತುಕದಲ್ಲಿನ **"ಆರು ತಿಂಗಳು"** ಎಂಬ ಪದಗಳಿಗೆ ಬದಲಾಗಿ **"ಹನ್ನೆರಡು ತಿಂಗಳು"** ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:** ಪ್ರಕರಣ 27(1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 30.09.2007ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 27(1)ರ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 685

**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

**ವಿಷಯ:–** 2004–05 ಹಾಗೂ 2005–06 ನೇ ಸಾಲುಗಳ ವಾರ್ಷಿಕ ಮಹಾಸಭೆ ನಡೆಸಲು ಕಾಲಾವಕಾಶ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:–** 1. ಸರ್ಕಾರದ ಆದೇಶ ಸಂಖ್ಯೆ ಸಇ 203 ಸಸಕಾ 2006, ದಿನಾಂಕ: 7.10.06

2. ಅಧ್ಯಕ್ಷರು, ಭದ್ರಾ ಸಹಕಾರಿ ಸಕ್ಕರೆ ಕಾರ್ಖಾನೆ (ನಿ), ದೊಡ್ಡಬಾತಿ, ದಾವಣಗೆರೆ ಜಿಲ್ಲೆ ರವರು ದಿನಾಂಕ:20.2.2007 ರಂದು ಮಾನ್ಯ ಸಹಕಾರ ಸಚಿವರಿಗೆ ಬರೆದ ಪತ್ರ

**ಪ್ರಸ್ತಾವನೆ:**

ಮೇಲೆ ಓದಲಾದ ಉಲ್ಲೇಖ (1)ರ ಆದೇಶದಲ್ಲಿ ಭದ್ರಾ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ದೊಡ್ಡಬಾತಿ ಇದರ 2004–05 ಮತ್ತು 2005–06 ನೇ ಸಾಲಿನ ವಾರ್ಷಿಕ ಮಹಾಸಭೆಗಳನ್ನು ನಡೆಸಲು ದಿನಾಂಕ: 31.3.2007 ರವರೆಗೆ ಕಾಲಾವಕಾಶ ನೀಡಲಾಗಿದೆ.

(3) ಹಾಲಿ ಇರುವ ಜಿ.ಆರ್.ಪಿ.ಕೊಳವೆ ಮಾರ್ಗವನ್ನು 323.00 ಎಂ.ಎಂ. ಹೊರ ವ್ಯಾಸದ ಎಂ.ಎಸ್ ಕೊಳವೆಗಳಿಂದ ಬದಲಾಯಿಸುವುದು.

(4) ನಗರದ ಕಾಮನ್ ಪಾಯಿಂಟಿದಿಂದ ಪ್ರಸ್ತಾಪಿಸಿರುವ ಮಲ್ಲಪ್ಪನ ಗುಡ್ಡದ ಮೇಲೆ 5.00 ಲಕ್ಷ ಲೀಟರ್ ಸಾಮರ್ಥ್ಯದ ನೆಲಮಟ್ಟದ ಜಲ ಸಂಗ್ರಹಾಗಾರಕ್ಕೆ ಏರು ಕೊಳವೆ ಮಾರ್ಗ ಅಳವಡಿಸುವುದು.

(5) ಪಟ್ಟಣದ ಜೋನ್-1, ಜೋನ್-2, ಜೋನ್-3 ಹಾಗೂ ಜೋನ್-4 ರಲ್ಲಿ ವಿತರಣೆ ಕೊಳವೆ ಮಾರ್ಗಗಳನ್ನು ಅಳವಡಿಸುವುದು.

(6) 10 ಹೆಚ್.ಪಿ. ಸಾಮರ್ಥ್ಯದ ಪೋಲ್ಡರ್ ಪಂಪ್‌ಸೆಟ್ ಒಸಗಿಸುವುದು ಮತ್ತು ಅಳವಡಿಸುವುದು.

ಈ ಮೇಲಿನ ಕಾಮಗಾರಿಗಳಿಗೆ ಜಲಮಂಡಳಿಯು ಲೋಕೋಪಯೋಗಿ ಇಲಾಖೆಯ 2006-07ನೇ ಸಾಲಿನ ದರಪಟ್ಟಿಯನ್ವಯ ರೂ. 440.00 ಲಕ್ಷಗಳಿಗೆ ಅಂದಾಜು ತಯಾರಿಸಿ ಈ ಯೋಜನೆಯನ್ನು ಈ ಕೆಳಗಿನ ಆರ್ಥಿಕ ಮಾದರಿಯಂತೆ ಕೈಗೊಳ್ಳಲು ಉದ್ದೇಶಿಸಿದೆ.

| | |
|---|---|
| ಆರ್ಥಿಕ ಸಂಸ್ಥೆಗಳಿಂದ ಸಾಲ (ಶೇ.50) | ರೂ.220.00 ಲಕ್ಷಗಳು |
| ಸರ್ಕಾರದಿಂದ ಅನುದಾನ (ಶೇ.50) | ರೂ.220.00 ಲಕ್ಷಗಳು |

ಈ ಯೋಜನೆಯನ್ನು ಮಂಡಳಿಯ 2007-08 ನೇ ಸಾಲಿನ ಅನುಮೋದಿತ ಕ್ರಿಯಾ ಯೋಜನೆಯಲ್ಲಿ ಸೇರಿಸಿದ್ದು ರೂ.147.00 ಲಕ್ಷಗಳನ್ನು ಒದಗಿಸಲಾಗಿದೆ.

ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ಬೆಂಗಳೂರುರವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ನಅಇ 6 ಯುಡಬ್ಲ್ಯೂಎಸ್ 2007, ಬೆಂಗಳೂರು, ದಿನಾಂಕ: 25ನೇ ಆಗಸ್ಟ್ 2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಬ್ಯಾಡಗಿ ಪಟ್ಟಣದ ಸುಧಾರಿತ ನೀರು ಸರಬರಾಜು ಯೋಜನೆಯನ್ನು ಅಂದಾಜು ಮೊತ್ತ ರೂ. 440.00 ಲಕ್ಷಗಳಲ್ಲಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗೊಳಪಟ್ಟು ಆಡಳಿತಾತ್ಮಕ ಅನುಮೋದನೆ ನೀಡಿದೆ.

(1) ಸದರಿ ಯೋಜನೆಯನ್ನು ನಿಗಧಿತ ವೇಳೆಯಲ್ಲಿ ಪೂರ್ಣಗೊಳಿಸುವುದು.

(2) ಸದರಿ ಕಾಮಗಾರಿಯನ್ನು ಕೈಗೊಳ್ಳುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ನಿಯಮ 2000ನ್ನು ಪಾಲಿಸುವುದು.

(3) ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡಕೂಡದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1686

**ಸಿ.ಟಿ. ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**ವಿಷಯ:** ಚಿಕ್ಕನಾಯಕನಹಳ್ಳಿ ಪಟ್ಟಣಕ್ಕೆ ಸುಧಾರಿತ ನೀರು ಸರಬರಾಜು ಯೋಜನೆಯ ಅಂದಾಜು ವೆಚ್ಚ ರೂ.150.00 ಲಕ್ಷಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1) ಅಧ್ಯಕ್ಷರು ಮತ್ತು ವ್ಯ.ನಿ. ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರು ರವರ ಪತ್ರ ಸಂಖ್ಯೆ: ಕಜಮಂ/ಮುಅ/ಉಮುಅ-/ಚಿಕ್ಕನಾಯಕಹಳ್ಳಿ/ 2007-08/1476 ದಿ:10-8-2007.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಚಿಕ್ಕನಾಯಕನಹಳ್ಳಿ ಪಟ್ಟಣಕ್ಕೆ ಸುಧಾರಿತ ನೀರು ಸರಬರಾಜು ಯೋಜನೆಯ ಅಂದಾಜು ವೆಚ್ಚ ರೂ.150.00 ಲಕ್ಷಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುಲು ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ಬೆಂಗಳೂರುರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಚಿಕ್ಕನಾಯಕನಹಳ್ಳಿಯು ತುಮಕೂರು ಜಿಲ್ಲೆಯ ಒಂದು ತಾಲ್ಲೂಕು ಕೇಂದ್ರವಾಗಿದ್ದು, ತುಮಕೂರುನಿಂದ ಸುಮಾರು 60 ಕಿ.ಮೀ. ದೂರದಲ್ಲಿದೆ ಈ ಪಟ್ಟಣಕ್ಕೆ ಹೇಮಾವತಿ ನಾಲೆಯನ್ನು ಮೂಲವಾಗಿಟ್ಟುಕೊಂಡು ನೀರು ಸರಬರಾಜು ಯೋಜನೆಯನ್ನು 2005ನೇ ಸಾಲಿನಲ್ಲಿ ಚಾಲನೆಗೊಳಿಸಲಾಗಿದೆ. ಹಾಗೂ ಚಿಕ್ಕನಾಯಕನಹಳ್ಳಿ ನಗರಸಭೆಗೆ ನಿರ್ವಹಣೆಗಾಗಿ ಹಸ್ತಾಂತರಿಸಲಾಗಿದೆ.

ಹೇಮಾವತಿ ನಾಲೆಯಿಂದ ನೀರನ್ನು ಚಿಕ್ಕನಾಯಕನಹಳ್ಳಿ ಕೆರೆಗೆ ಪಂಪ್ ಮಾಡಿ ನೀರನ್ನು ಶೇಖರಿಸಲಾಗುತ್ತಿದೆ. ನೀರು ಶುದ್ದೀಕರಣ ಘಟಕವನ್ನು ಸಹ ಪಟ್ಟಣದ ಹತ್ತಿರ ನಿರ್ಮಾಣ ಮಾಡಲಾಗಿದೆ. ಕೊಳಚೆ ನೀರು ಮತ್ತು ಮಳೆಯ ನೀರು ಚಿಕ್ಕನಾಯಕನಹಳ್ಳಿ ಕೆರೆಗೆ ಹರಿದು ಬರುತ್ತಿದ್ದು, ಕೆರೆಯ ನೀರನ್ನು ಕಲುಷಿತಗೊಳಿಸುತ್ತಿದೆ. ಅದುದರಿಂದ ಚಿಕ್ಕನಾಯಕನಹಳ್ಳಿ ನಗರ ಸಭೆಯು ಈ ಕೊಳಚೆ ನೀರನ್ನು ಪ್ರತ್ಯೇಕವಾಗಿ ಬಂಡ್ ನಿರ್ಮಾಣ ಮಾಡಿ ಕೆಲವು ಕೊಳವೆ ಪೈಪುಗಳನ್ನು

ಬದಲಾಯಿಸಲು ಕೋರಿರುತ್ತದೆ. ಹಾಗೂ ಪಟ್ಟಣವು ಸಹ ಬೆಳೆಯುತ್ತಿದ್ದು, ವಿತರಣಾ ಜಾಲವನ್ನು ಸಹ ಹೆಚ್ಚಿಸಿ, ಒಂದು 5.00 ಲಕ್ಷ ಲೀಟರ್ ಸಾಮರ್ಥ್ಯದ ಮೇಲ್ಮಟ್ಟದ ಜಲಸಂಗ್ರಹಾಗಾರವನ್ನು ನಿರ್ಮಿಸುವುದು ಸಹ ಆಗತ್ಯವಾಗಿರುತ್ತದೆ. ಅದುದರಿಂದ, ಮಂಡಳಿಯ 2007-08ನೇ ಸಾಲಿನ ದರಪಟ್ಟಿಯಂತೆ ಅಂದಾಜು ರೂ.150.00 ಲಕ್ಷಗಳಿಗೆ ಯೋಜನೆಯನ್ನು ರೂಪಿಸಿ, ಕೊಳವೆ ನೀರು ಸರಬರಾಜು ಯೋಜನೆಯಡಿ ಕೈಗೆತ್ತಿಗೊಳ್ಳಲು ಉದ್ದೇಶಿಸಲಾಗಿದೆ.

ಈ ಯೋಜನೆಗೆ 2007-08ನೇ ಸಾಲಿನ ಮಂಡಳಿಯ ಅನುಮೋದಿತ ಕ್ರಿಯಾ ಯೋಜನೆಯಲ್ಲಿ ರೂ.50.00 ಲಕ್ಷಗಳನ್ನು ಅನವು ಮಾಡಿದೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 38 ಯುಡಬ್ಲ್ಯೂಎಸ್ 2007, ಬೆಂಗಳೂರು, ದಿನಾಂಕ: 27ನೇ ಆಗಸ್ಟ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರವು ಚಿಕ್ಕನಾಯಕನಹಳ್ಳಿ ಪಟ್ಟಣಕ್ಕೆ ಸುಧಾರಿತ ನೀರು ಸರಬರಾಜು ಯೋಜನೆಯನ್ನು ಅಂದಾಜು ವೆಚ್ಚ ರೂ.150.00 (ಒಂದು ನೂರೈವತ್ತು ಲಕ್ಷ ರೂ.ಗಳು ಮಾತ್ರ) ಲಕ್ಷಗಳಲ್ಲಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಕೊಳವೆ ನೀರು ಸರಬರಾಜು ಯೋಜನೆ ಅಡಿಯಲ್ಲಿ ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತುಗಳಿಗೊಳಪಡಿಸಿ ಆಡಳಿತಾತ್ಮಕ ಮಂಜೂರಾತಿಯನ್ನು ನೀಡಿದೆ.

(1) ಸದರಿ ಯೋಜನೆಯನ್ನು ನಿಗಧಿತ ವೇಳೆಯಲ್ಲಿ ಪೂರ್ಣಗೊಳಿಸುವುದು.

(2) ಸದರಿ ಕಾಮಗಾರಿಯನ್ನು ಕೈಗೊಳ್ಳುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ನಿಯಮ 2000ನ್ನು ಪಾಲಿಸುವುದು.

(3) ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡಕೂಡದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫಡಿ 1 ಟಿಎಫ್‌ಪಿ 2002 ದಿನಾಂಕ:20-01-2003ರಲ್ಲಿ ಸರ್ಕಾರದ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1681

**ಸಿ.ಟಿ. ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**ವಿಷಯ:** ಚಿಕ್ಕಬಳ್ಳಾಪುರ ನಗರಕ್ಕೆ ಮತ್ತು ಮಾರ್ಗ ಮಧ್ಯದ ಹಳ್ಳಿಗಳಿಗೆ ಜಕ್ಕಲಮಡಗು ಜಲಾಶಯದಿಂದ ಕುಡಿಯುವ ನೀರು ಒದಗಿಸುವ ಮೂರನೇ ಹಂತದ ನೀರು ಸರಬರಾಜು ಯೋಜನೆ ಅಂದಾಜು ಮೊತ್ತ ರೂ.2700.00 ಲಕ್ಷಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** ಅಧ್ಯಕ್ಷರು ಮತ್ತು ವ್ಯ.ನಿ. ಕನನೀಸ ಮತ್ತು ಒಚ ಮಂಡಳಿ,ಬೆಂಗಳೂರು ರವರ ಪತ್ರ ಸಂಖ್ಯೆ: ಕಜಮಂ/ಮುಅ/ಉಮುಅ-1/ಅಸ-5/ಜಕ್ಕಲಮಡಗು/2007-08/1442ರ ದಿ:6-8-2007.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ಬೆಂಗಳೂರುರವರು, ಚಿಕ್ಕಬಳ್ಳಾಪುರ ನಗರಕ್ಕೆ ಮತ್ತು ಮಾರ್ಗ ಮಧ್ಯದ ಹಳ್ಳಿಗಳಿಗೆ ಜಕ್ಕಲಮಡಗು ಜಲಾಶಯದಿಂದ ಕುಡಿಯುವ ನೀರು ಒದಗಿಸುವ ಮೂರನೇ ಹಂತದ ನೀರು ಸರಬರಾಜು ಯೋಜನೆ ಅಂದಾಜು ಮೊತ್ತ ರೂ.2700.00 ಲಕ್ಷಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಚಿಕ್ಕಬಳ್ಳಾಪುರ ನಗರವು ರಾಜ್ಯದ ರಾಜಧಾನಿಯಿಂದ 56 ಕಿ.ಮೀ.ದೂರದಲ್ಲಿದ್ದು, 2001ರ ಜನಗಣತಿಯ ಪ್ರಕಾರ 54,938 ಇರುತ್ತದೆ. 2039ಕ್ಕೆ ಅಂದಾಜಿಸಲಾದ ಜನಸಂಖ್ಯೆಯು 100578 ಮತ್ತು 10 ಗ್ರಾಮಗಳ ಜನಸಂಖ್ಯೆ 12812ಗಳಾಗಿರುತ್ತದೆಂದು ಅಂದಾಜಿಸಲಾಗಿದೆ. ಚಿಕ್ಕಬಳ್ಳಾಪುರ ಪಟ್ಟಣಕ್ಕೆ ಜಕ್ಕಲಮಡಗು ಜಲಾಶಯದಿಂದ ನೀರು ಒದಗಿಸುವ ರೂ.106.50 ಲಕ್ಷಗಳ ವೆಚ್ಚದಲ್ಲಿ ಮೊದಲನೇ ಹಂತದ ಯೋಜನೆಯನ್ನು 1991ರಲ್ಲಿ ಚಾಲ್ತಿಗೊಳಿಸಲಾಗಿದ್ದು, ಎರಡನೇ ಹಂತದ ಅಭಿವೃದ್ಧಿ ಯೋಜನೆಯನ್ನು ರೂ.184.72 ಲಕ್ಷಗಳ ವೆಚ್ಚದಲ್ಲಿ ಮಾರ್ಚಿ 2001ರಲ್ಲಿ ಚಾಲ್ತಿಗೊಳಿಸಲಾಗಿದೆ, ಹಾಗೂ 65 ಸಂಖ್ಯೆ ವಿದ್ಯುತ್‌ಚಾಲಿತ ಕೊಳವೆ ಬಾವಿಗಳಿಂದ ದಿನಂಪ್ರತಿ 58 ಲೀಟರ್ ನಂತೆ ನೀರು ಸರಬರಾಜು ಮಾಡಲಾಗುತ್ತಿದೆ.

ಸರ್ಕಾರವು ಆದೇಶ ಸಂಖ್ಯೆ:ನಅಇ 55 ಯುಡಬ್ಲ್ಯೂಎಸ್ 2006 ದಿನಾಂಕ:5-5-2007ರ ಆದೇಶದಲ್ಲಿ ಜಲಾಶಯದ ಹೆಸರು ನೀರಿನ ಹಂಚಿಕೆ ಹಾಗೂ ಸಮನ್ವಯ ಸಮಿತಿ ರಚಿಸಿ, ಅದರಂತೆ ಚಿಕ್ಕಬಳ್ಳಾಪುರ ನಗರಕ್ಕೆ ತಲಾ ದಿನಂಪ್ರತಿ 100 ಲೀಟರ್‌ನಂತೆ ಹಾಗೂ ಮಾರ್ಗ ಮಧ್ಯದ ಹಳ್ಳಿಗಳಿಗೆ ತಲಾ ದಿನಂಪ್ರತಿ 55 ಲೀಟರ್‌ನಂತೆ ಕುಡಿಯುವ ನೀರು ಸರಬರಾಜು ಮಾಡಲು ವಿನ್ಯಾಸಿಸಲಾಗಿದೆ. ಈ ಮೇಲಿನ ಬೇಡಿಕೆ 2007-08ನೇ ಸಾಲಿನ ದರಪಟ್ಟಿಯಂತೆ ಅಂದಾಜು ರೂ.2700-00 ಲಕ್ಷಗಳಿಗೆ ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ತೆಗೆದುಕೊಳ್ಳಲು ರೂಪಿಸಲಾಗಿದೆ.

| | | |
|---|---|---|
| 1 | ಚಿಕ್ಕಬಳ್ಳಾಪುರ ನಗರದ ನೀರು ಸರಬರಾಜಿಗೆ<br>ಸರ್ಕಾರದ ಅನುದಾನ ಶೇ:50ರಷ್ಟು<br>ಆರ್ಥಿಕ ಸಂಸ್ಥೆಗಳ ಸಾಲ ಶೇ:50ರಷ್ಟು<br>ಒಟ್ಟು | <br>ರೂ.1295.445 ಲಕ್ಷಗಳು<br>ರೂ.1295.445 ಲಕ್ಷಗಳು<br>ರೂ.2590.890 ಲಕ್ಷಗಳು |
| 2 | ಮಾರ್ಗ ಮಧ್ಯದ 10 ಗ್ರಾಮದ ನೀರು ಸೌಕರ್ಯಕ್ಕಾಗಿ:<br>ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ. | ರೂ. 109.11 ಲಕ್ಷಗಳು |
| | **ಒಟ್ಟು** | **ರೂ.2700.00 ಲಕ್ಷಗಳು** |

ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ಬೆಂಗಳೂರುರವರ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ನಅಇ 36 ಯುಡಬ್ಲ್ಯೂಎಸ್ 2007, ಬೆಂಗಳೂರು, ದಿನಾಂಕ:22-8-2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಚಿಕ್ಕಬಳ್ಳಾಪುರ ನಗರಕ್ಕೆ ಮತ್ತು ಮಾರ್ಗ ಮಧ್ಯದ 10 ಹಳ್ಳಿಗಳಿಗೆ ಚಿಕ್ಕಬಳ್ಳಾಪುರ ಜಕ್ಕಲಮಡಗು ಜಲಾಶಯದಿಂದ ಕುಡಿಯುವ ನೀರು ಒದಗಿಸುವ ಮೂರನೇ ಹಂತದ ನೀರು ಸರಬರಾಜು ಯೋಜನೆಯನ್ನು ಅಂದಾಜು ಮೊತ್ತ ರೂ.2700.00 ಲಕ್ಷಗಳಲ್ಲಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು, **ನಗರ ನೀರು ಸರಬರಾಜು ಯೋಜನೆಯಡಿಯಲ್ಲಿ** ಕೈಗೆತ್ತಿಕೊಳ್ಳಲು ಈ ಕೆಳಕಂಡ ನಿಬಂಧನಗಳಿಗೊಳಪಟ್ಟು ಆಡಳಿತಾತ್ಮಕ ಅನುಮೋದನೆ ನೀಡಿದೆ.

(1) ಸದರಿ ಯೋಜನೆಯನ್ನು ನಿಗದಿತ ವೇಳೆಯಲ್ಲಿ ಪೂರ್ಣಗೊಳಿಸುವುದು.
(2) ಸದರಿ ಕಾಮಗಾರಿಯನ್ನು ಕೈಗೊಳ್ಳುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ನಿಯಮ 2000ನ್ನು ಪಾಲಿಸುವುದು.
(3) ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡಕೂಡದು.
(4) Administrative Department must soon review the Escalation and Tender Premium charges being levied by the KUWS&DB.
(5) Any escalation in cost of the project shall be shared between all Departments and Central Government.
(6) No Government guarantee will be given for raising loan from FIs.
(7) Concurrence of RDPR should be obtained for contribution of their share of Rs.109.11 lakhs.
(8) Water rates as proposed by KUWS&DB has to be implemented by the ULBs to take care of O&M cost.
(9) Cabinet approval should be obtained.
(10) No additionality will be provided by Government.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1679

**ಸಿ.ಟಿ. ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**ವಿಷಯ:** ಗುಂಡ್ಲುಪೇಟೆ ಪಟ್ಟಣಕ್ಕೆ ವಿತರಣಾ ಜಾಲವನ್ನು ಒದಗಿಸುವ ಕಾಮಗಾರಿ ಅಂದಾಜು ಮೊತ್ತ ರೂ.255.00 ಲಕ್ಷಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:** 1) ಅಧ್ಯಕ್ಷರು ಮತ್ತು ವ್ಯ.ನಿ. ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರುರವರ ಪತ್ರ ಸಂಖ್ಯೆ:ಕಜಮಂ/ತಾಂತ್ರಿಕ/ಗುಂಡಟ್ಲುಪೇಟೆ/ನೀಸ/ 01/419/2007-08, ದಿ: 10-5-2007.
2) ದಿನಾಂಕ 27-7-2007ರ ಕ್ರಿಯಾ ಯೋಜನೆಯ ಸರ್ಕಾರಿ ಆದೇಶ ಸಂಖ್ಯೆ: ನಅಇ: 76: ಯು.ಎಂ.ಎಸ್. 2007.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ ಸಂಖ್ಯೆ (1)ರ ಪತ್ರದಲ್ಲಿ ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ಬೆಂಗಳೂರು ರವರು, ಗುಂಡ್ಲುಪೇಟೆ ಪಟ್ಟಣಕ್ಕೆ ನೀರು ಸರಬರಾಜು ವಿತರಣಾ ಜಾಲವನ್ನು ಒದಗಿಸುವ ಕಾಮಗಾರಿ ಅಂದಾಜು ಮೊತ್ತ ರೂ.255.00 ಲಕ್ಷಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಗುಂಡ್ಲುಪೇಟೆ ಪಟ್ಟಣವು ಚಾಮರಾಜನಗರ ಜಿಲ್ಲೆಯ ಒಂದು ತಾಲ್ಲೂಕು ಕೇಂದ್ರವಾಗಿದ್ದು, ಪಟ್ಟಣದ ಜನಸಂಖ್ಯೆ 2001ರ ಜನಗಣತಿ ಪ್ರಕಾರ 26,368 ಇದ್ದು, 2036ರಲ್ಲಿ 44,760 ಜನಸಂಖ್ಯೆ ಆಗಬಹುದೆಂದು ಅಂದಾಜಿಸಲಾಗಿದೆ. ಗುಂಡ್ಲುಪೇಟೆ ಪಟ್ಟಣಕ್ಕೆ ಮತ್ತು ಮಾರ್ಗ ಮಧ್ಯದ ಹಳ್ಳಿಗಳಿಗೆ ಕಬಿನಿ ನದಿ ಮೂಲವಾಗಿಟ್ಟುಕೊಂಡು ಅಂದಾಜು ರೂ.615.00 ಲಕ್ಷಗಳಲ್ಲಿ ನೀರು ಸರಬರಾಜು ಯೋಜನೆಯನ್ನು ಮಾರ್ಚ್ 2003ರ ಅಂತ್ಯದಲ್ಲಿ ಪೂರ್ಣಗೊಳಿಸಿ, ಗುಂಡ್ಲುಪೇಟೆ ಪುರಸಭೆಗೆ ಹಸ್ತಂತರಿಸಲಾಗಿದೆ.

ಈ ಯೋಜನೆಯಿಂದ ತಲಾ ದಿನಂಪ್ರತಿ 100 ಲೀಟರ್‌ನಂತೆ ನೀರು ಸರಬರಾಜು ಮಾಡಲಾಗುತ್ತಿದೆ. ಪ್ರಸ್ತುತ ಗುಂಡುಪೇಟೆ ಪಟ್ಟಣಕ್ಕೆ ಕುಡಿಯುವ ನೀರನ್ನು ಸಮರ್ಪಕವಾಗಿ ಪಟ್ಟಣದ ಜನತೆಗೆ ಒದಗಿಸಲು ಕೊಳವೆ ಮಾರ್ಗದ ಜಾಲದ ಕೊರತೆಯಿಂದಾಗಿ ಸಾರ್ವಜನಿಕರಿಗೆ ನೀರು ಸರಬರಾಜನ್ನು ವ್ಯವಸ್ಥಿತ ರೀತಿಯಲ್ಲಿ ವಿತರಿಸಲು ಸಾಧ್ಯವಾಗುತ್ತಿಲ್ಲ. ಹಾಗೂ ಕೆಲವು ಪ್ರದೇಶಗಳಲ್ಲಿ ಹಳೆಯ ಮತ್ತು ತುಕ್ಕು ಹಿಡಿದಿರುವ ಕೊಳವೆ ಮಾರ್ಗಗಳನ್ನು ಬದಲಾಯಿಸ ಬೇಕಾಗಿರುತ್ತದೆ. ಈ ಪಟ್ಟಣವು ಸಾಕಷ್ಟು ಬೆಳೆದು ಹೊಸ ಬಡಾವಣೆಗಳು ಸೇರಿಕೊಂಡಿರುವ ಪ್ರಯುಕ್ತ ವಿತರಣಾ ಜಾಲವನ್ನು ಹೆಚ್ಚಿಸಿ, ಕೊಳವೆ ಕಾಮಗಾರಿಗಳನ್ನು ತ್ವರಿತವಾಗಿ ನಿರ್ವಹಿಸಲು ರೂ.255.00 ಲಕ್ಷಗಳ ಅಂದಾಜು ಪಟ್ಟಿಯನ್ನು ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ಕೈಗೊಳ್ಳಲು ಉದ್ದೇಶಿಸಿದೆ.

| | | |
|---|---|---|
| ಸರ್ಕಾರದ ಅನುದಾನ | (50%) | ರೂ.127.50 ಲಕ್ಷಗಳು |
| ಆರ್ಥಿಕ ಸಂಸ್ಥೆಗಳಿಂದ ಸಾಲ | (50%) | ರೂ.127.50 ಲಕ್ಷಗಳು |
| | **ಒಟ್ಟು** | **ರೂ.255.00 ಲಕ್ಷಗಳು** |

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಈ ಯೋಜನೆಗೆ ಮಂಡಳಿಯ ಅನುಮೋದಿತ 2007-08ನೇ ಸಾಲಿನ ಕ್ರಿಯಾ ಯೋಜನೆಯಲ್ಲಿ ಪ್ರಸ್ತುತ ಸಾಲಿನಲ್ಲಿ ರೂ.85.00 ಲಕ್ಷಗಳನ್ನು ಒದಗಿಸಲಾಗಿದೆ.

ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ಬೆಂಗಳೂರುರವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 16 ಯುಡಬ್ಲ್ಯೂಎಸ್ 2007, ಬೆಂಗಳೂರು, ದಿನಾಂಕ:27ನೇ ಆಗಸ್ಟ್ 2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಗುಂಡ್ಲುಪೇಟೆ ಪಟ್ಟಣಕ್ಕೆ ನೀರು ಸರಬರಾಜು ವಿತರಣಾ ಜಾಲ ಅಳವಡಿಸುವ ಯೋಜನೆಯನ್ನು ಅಂದಾಜು ಮೊತ್ತ ರೂ.255.00 ಲಕ್ಷಗಳಲ್ಲಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ನಗರ ನೀರು ಸರಬರಾಜು ಯೋಜನೆಯಡಿ ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತುಗಳಿಗೊಳಪಡಿಸಿ ಆಡಳಿತಾತ್ಮಕ ಅನುಮೋದನೆ ನೀಡಿದೆ.

(1) ಸದರಿ ಯೋಜನೆಯನ್ನು ನಿಗದಿತ ವೇಳೆಯಲ್ಲಿ ಪೂರ್ಣಗೊಳಿಸುವುದು.

(2) ಸದರಿ ಕಾಮಗಾರಿಯನ್ನು ಕೈಗೊಳ್ಳುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ನಿಯಮ 2000ನ್ನು ಪಾಲಿಸುವುದು.

(3) ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡಕೂಡದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1683

**ಸಿ.ಟಿ. ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**ವಿಷಯ:** ಚಾಮರಾಜನಗರ ಜಿಲ್ಲೆಯ ಕೊಳ್ಳೇಗಾಲ ತಾಲ್ಲೂಕಿನ ಹನೂರು ಪಟ್ಟಣ ಹಾಗೂ ಮಾರ್ಗಮಧ್ಯದ 7 ಹಳ್ಳಿಗಳಿಗೆ ಕಾವೇರಿ ನದಿ ಮೂಲದಿಂದ ರೂ.1387.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ನೀರು ಸರಬರಾಜು ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** ಅಧ್ಯಕ್ಷರು ಮತ್ತು ವ್ಯ.ನಿ. ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರು ರವರ ಪತ್ರ ಸಂಖ್ಯೆ: ಕಜಮಂ/ತಾಂತ್ರಿಕ/ಹನೂರು/ನೀ.ಸ.ಯೋ/158/ 2491/2006-07/ ದಿ:27-11-06.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಚಾಮರಾಜನಗರ ಜಿಲ್ಲೆಯ ಕೊಳ್ಳೇಗಾಲ ತಾಲ್ಲೂಕಿನ ಹನೂರು ಪಟ್ಟಣ ಹಾಗೂ ಮಾರ್ಗಮಧ್ಯದ 7 ಹಳ್ಳಿಗಳಿಗೆ ಕಾವೇರಿ ನದಿ ಮೂಲದಿಂದ ರೂ.1387.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ನೀರು ಸರಬರಾಜು ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡಲು ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ಬೆಂಗಳೂರು ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಹನೂರು ಪಟ್ಟಣ ಹಾಗೂ ಮಾರ್ಗ ಮಧ್ಯದ 7 ಗ್ರಾಮಗಳ ಜನಸಂಖ್ಯೆಯು 2001 ರ ಜನಗಣತಿಯ ಪ್ರಕಾರ 32,045 ಇದೆ. ಹಾಲಿ ಇರುವ ನೀರು ಸರಬರಾಜು ಯೋಜನೆಯನ್ನು 9 ಕೊಳವೆ ಬಾವಿಗಳ ಮೂಲದಿಂದ, 1999 ರಲ್ಲಿ

ವರ್ಲ್ಡ್ ಬ್ಯಾಂಕ್ ಅನುದಾನದಿಂದ ಜಿಲ್ಲಾ ಪಂಚಾಯಿತಿ ವತಿಯಿಂದ ಕಾರ್ಯಗತಗೊಳಿಸಲಾಗಿದೆ. ಇತ್ತೀಚಿನ ವರ್ಷಗಳಲ್ಲಿ ಮಳೆಯ ಪ್ರಮಾಣವು ಕಡಿಮೆಯಾಗಿರುವುದರಿಂದ ಕೊಳವೆ ಬಾವಿಗಳಲ್ಲಿನ ನೀರಿನ ಇಳುವರಿ ಕಡಿಮೆಯಾಗಿದ್ದು, ದಿನಂಪ್ರತಿ ತಲಾ 25 ರಿಂದ 30 ಲೀಟರ್ ನೀರು ಸರಬರಾಜು ಮಾಡಲಾಗುತ್ತಿದೆ. ನೀರಿನ ತೊಂದರೆ ನೀಗಿಸಲು ಹನೂರು ಪಟ್ಟಣ ಹಾಗೂ ಮಾರ್ಗ ಮಧ್ಯದ 7 ಹಳ್ಳಿಗಳಿಗೆ ಕಾವೇರಿ ನದಿ ಮೂಲದಿಂದ ಶಾಶ್ವತ ಕುಡಿಯುವ ನೀರು ಸರಬರಾಜು ಮಾಡಲು ಯೋಜನೆಯನ್ನು ಕೊಳವೆ ನೀರು ಸರಬರಾಜು ಯೋಜನೆಯಡಿ ಕೈಗೆತ್ತಿಕೊಳ್ಳಲು ಉದ್ದೇಶಿಸಲಾಗಿದೆ.

ಸದರಿ ಯೋಜನೆಯು 2006-07 ನೇ ಸಾಲಿನ ದರ ಪಟ್ಟಿಯಂತೆ ಅಂದಾಜು ರೂ.1387.00 ಲಕ್ಷಗಳಾಗಿದ್ದು, ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ಕೈಗೊಳ್ಳಲು ಉದ್ದೇಶಿಸಲಾಗಿದೆ.

| | |
|---|---|
| ಸರ್ಕಾರದ ವಂತಿಕೆ | ರೂ. 906.00 ಲಕ್ಷಗಳು |
| ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ವಂತಿಕೆ | ರೂ. 481.00 ಲಕ್ಷಗಳು |
| **ಒಟ್ಟು** | **ರೂ.1387.00 ಲಕ್ಷಗಳು** |

2007-08ನೇ ಸಾಲಿನ ಮಂಡಳಿಯ ಅನುಮೋದಿತ ಕ್ರಿಯಾ ಯೋಜನೆಯಲ್ಲಿ ಈ ಯೋಜನೆಗೆ ರೂ.462.00 ಲಕ್ಷಗಳನ್ನು ಅನುವು ಮಾಡಿದೆ.

ಸರ್ಕಾರವು ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ಬೆಂಗಳೂರುರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ನಅಇ 21 ಯುಡಬ್ಲ್ಯೂಎಸ್ 2005, ಬೆಂಗಳೂರು, ದಿನಾಂಕ: 4ನೇ ಸೆಪ್ಟೆಂಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಚಾಮರಾಜನಗರ ಜಿಲ್ಲೆಯ ಕೊಳ್ಳೇಗಾಲ ತಾಲ್ಲೂಕಿನ ಹನೂರು ಪಟ್ಟಣ ಹಾಗೂ ಮಾರ್ಗಮಧ್ಯದ 7 ಹಳ್ಳಿಗಳಿಗೆ ಕಾವೇರಿ ನದಿ ಮೂಲದಿಂದ ರೂ.1387.00 (ರೂ.ಒಂದು ಸಾವಿರದ ಮುನ್ನೂರ ಎಂಭತ್ತೇಳು ಲಕ್ಷಗಳು ಮಾತ್ರ) ಲಕ್ಷಗಳ ಅಂದಾಜು ವೆಚ್ಚದಲ್ಲಿ ನೀರು ಸರಬರಾಜು ಯೋಜನೆಯನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಕೊಳವೆ ನೀರು ಸರಬರಾಜು ಯೋಜನೆ ಅಡಿಯಲ್ಲಿ ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗೊಳಪಟ್ಟು ಆಡಳಿತಾತ್ಮಕ ಮಂಜೂರಾತಿಯನ್ನು ನೀಡಿದೆ.

(1) ಸದರಿ ಯೋಜನೆಯನ್ನು ನಿಗದಿತ ವೇಳೆಯಲ್ಲಿ ಪೂರ್ಣಗೊಳಿಸುವುದು.

(2) ಸದರಿ ಕಾಮಗಾರಿಯನ್ನು ಕೈಗೊಳ್ಳುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ನಿಯಮ 2000ನ್ನು ಪಾಲಿಸುವುದು.

(3) ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡಕೂಡದು.

(4) Water rates as proposed by the KUWS&DB has to be implemented by the ULB to take care of O & M costs."

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: FD 542 Exp-9/2006 ದಿನಾಂಕ: 9-10-2006ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1643

**ಸಿ.ಟಿ. ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**ವಿಷಯ:** ಕೋಲಾರ, ಮಾಲೂರು ಮತ್ತು ಬಂಗಾರಪೇಟೆ ಪಟ್ಟಣಗಳು ಹಾಗೂ ಮಾರ್ಗ ಮಧ್ಯದ 45 ಗ್ರಾಮಗಳಿಗೆ ಕುಡಿಯುವ ನೀರು ಒದಗಿಸುವ ಸಲುವಾಗಿ ಯರಗೋಳು ಗ್ರಾಮದ ಬಳಿ ಮಾರ್ಕಂಡೇಯ ನದಿಗೆ ಅಡ್ಡಲಾಗಿ ಅಣೆಕಟ್ಟು ನಿರ್ಮಿಸುವ ಅಂದಾಜು ವೆಚ್ಚ ರೂ.160.00 ಕೋಟಿಗಳ ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1) ಅಧ್ಯಕ್ಷರು ಮತ್ತು ವ್ಯ.ನಿ. ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರು ರವರ ಪತ್ರ ಸಂಖ್ಯೆ: ಕಜಮಂ/ ಮುಅ/ಉಮುಅ-1/ಅಸ-5/ಯರಗೋಳು/2007-08/689ರ ದಿ:6-6-2007.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ಇವರು ಕೋಲಾರ, ಮಾಲೂರು ಮತ್ತು ಬಂಗಾರಪೇಟೆ ಪಟ್ಟಣಗಳು ಹಾಗೂ ಮಾರ್ಗ ಮಧ್ಯದ 45 ಗ್ರಾಮಗಳಿಗೆ ಕುಡಿಯುವ ನೀರು ಒದಗಿಸುವ ಸಲುವಾಗಿ ಯರಗೋಳು ಗ್ರಾಮದ ಬಳಿ ಮಾರ್ಕಂಡೇಯ ನದಿಗೆ ಅಡ್ಡಲಾಗಿ ಅಣೆಕಟ್ಟು ನಿರ್ಮಿಸುವ ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಕೋಲಾರ ನಗರ, ಮಾಲೂರು ಮತ್ತು ಬಂಗಾರುಪೇಟೆ ಪಟ್ಟಣಗಳು, ಕೋಲಾರ ಜಿಲ್ಲೆಯ ತಾಲ್ಲೂಕು ಕೇಂದ್ರಗಳಾಗಿದ್ದು, ಸದರಿ ಪಟ್ಟಣಗಳ ಜನಸಂಖ್ಯೆ 2001ರ ಜನಗಣತಿಯ ಪ್ರಕಾರ ಕ್ರಮವಾಗಿ 1,13,299, 27,791 ಹಾಗೂ 38,684 ಇರುತ್ತದೆ. ಪ್ರಸ್ತುತ ಕೋಲಾರ ನಗರಕ್ಕೆ ಕೊಳವೆ ಬಾವಿಗಳಿಂದ ಹಾಗೂ ಅಮ್ಮೇರಹಳ್ಳಿ ಕೆರೆಯಿಂದ ಕುಡಿಯುವ ನೀರು ಸರಬರಾಜು ಮಾಡುತ್ತಿದ್ದು, ಮಾಲೂರು, ಮುಳಬಾಗಿಲು ಮತ್ತು ಬಂಗಾರುಪೇಟೆ ಪಟ್ಟಣಗಳಿಗೆ ಕೊಳವೆ ಬಾವಿ ಆಧಾರಿಸಿ ನೀರು ಸರಬರಾಜು ಮಾಡಲಾಗುತ್ತಿದೆ. ಮಳೆಯ ವೈಫಲ್ಯತೆಯಿಂದಾಗಿ ಹಾಗೂ ಕೊಳವೆ ಬಾವಿಯಲ್ಲಿನ ನೀರಿನ ಒರತೆ ಸಾಕಷ್ಟು ಇಲ್ಲದಿರುವುದರಿಂದ ತಲಾ ದಿನಂಪ್ರತಿ 30 ರಿಂದ 40 LPCD ಮಾತ್ರ ನೀಡಲಾಗುತ್ತಿದ್ದು, ಬೇಸಿಗೆಯಲ್ಲಿ ನೀರಿನ ಅಭಾವ ಹೆಚ್ಚಾಗಿ ಕಂಡು ಬರುತ್ತಿರುವ ಕಾರಣ ಶಾಶ್ವತ ಕುಡಿಯುವ ನೀರಿನ ಸರಬರಾಜು ಮಾಡುವ ಸಲುವಾಗಿ ಯರಗೋಳು ಗ್ರಾಮದ ಬಳಿ ಮಾರ್ಕಂಡೇಯ ನದಿಗೆ ಅಡ್ಡಲಾಗಿ ಅಣೆಕಟ್ಟು ನಿರ್ಮಿಸಿ, ನೀರು ಒದಗಿಸುವ ಯರಗೋಳು ಯೋಜನೆಯನ್ನು ಕೋಲಾರ ಬಂಗಾರುಪೇಟೆ ಮತ್ತು ಮಾಲೂರು ಪಟ್ಟಣಗಳು ಹಾಗೂ ಮಾರ್ಗ ಮಧ್ಯದ 45 ಗ್ರಾಮಗಳ ಕುಡಿಯುವ ನೀರಿನ ಅವಶ್ಯಕತೆಗನುಗುಣವಾಗಿ ಯೋಜಿಸಲಾಗಿದೆ.

ಯರಗೋಳು ಯೋಜನೆಯನ್ನು ಅಣೆಕಟ್ಟು ನಿರ್ಮಿಸಲು ಹಾಗೂ ಈ ಅಣೆಕಟ್ಟಿನಿಂದ ಕೋಲಾರ ಬಂಗಾರುಪೇಟೆ ಮತ್ತು ಮಾಲೂರು ಪಟ್ಟಣಗಳು ಹಾಗೂ ಮಾರ್ಗ ಮಧ್ಯದ 45 ಗ್ರಾಮಗಳ ಕುಡಿಯುವ ನೀರಿನ ಒದಗಿಸುವ ಯೋಜನೆಯನ್ನು 2006-07ರ ದರಪಟ್ಟಿಯಂತೆ ಅಂದಾಜನ್ನು ರೂ.240.00 ಕೋಟಿಗಳಿಗೆ ತಯಾರಿಸಲಾಗಿತ್ತು. ಈ ಸದರಿ ಯೋಜನೆಯನ್ನು ಕೇಂದ್ರ ಸರ್ಕಾರದ ಅನುದಾನವಿರುವ UIDSSMT ಯೋಜನೆಯಡಿ ಕೈಗೊಳ್ಳಲು ಪ್ರಸ್ತಾಪನೆ ಸಲ್ಲಿಸಲಾಗಿತ್ತು. ದಿನಾಂಕ: 15-2-2007ರಂದು ನಡೆದ 2ನೇ ರಾಜ್ಯಮಟ್ಟದ UIDSSMT ಸಭೆಯಲ್ಲಿ ಯೋಜನೆಯನ್ನು ರೂ.192.00 ಕೋಟಿಗಳಿಗೆ CPHEEO.,ಗೆ ಪ್ರಸ್ತಾಪಿಸಲಾಗಿ, UIDSSMT ಮಾರ್ಗಸೂಚಿಯಲ್ಲಿ ಅಣೆಕಟ್ಟನ್ನು ನಿರ್ಮಿಸಲು ಅವಕಾಶವಿರದ ಕಾರಣ ಸದರಿ ಯೋಜನೆಯಿಂದ ಅಣೆಕಟ್ಟನ್ನು ನಿರ್ಮಿಸುವ ಕಾಮಗಾರಿಯ ವೆಚ್ಚವನ್ನು ಕಳೆದು ಬಾಕಿ ರೂ.7992.80 ಲಕ್ಷಗಳಿಗೆ ಮಾತ್ರ ವಿತರಣಾ ವ್ಯವಸ್ಥೆಗಾಗಿ ಮಂಜೂರಾತಿ ನೀಡಿದೆ. ಅದರಂತೆ ಯರಗೋಳು ಡ್ಯಾಂ ನಿರ್ಮಾಣದ ಯೋಜನೆಯನ್ನು 632 Mcft ನೀರು ಶೇಕರಣೆಗಾಗಿ ವಿನ್ಯಾಸಿಸಿ 2007-08ರ ದರಪಟ್ಟಿಯಂತೆ ರೂ.160.00 ಕೋಟಿಗಳಿಗೆ ರಾಜ್ಯ ಸರ್ಕಾರದ ಯೋಜನೆಯಡಿ ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ಕೈಗೆತ್ತಿಕೊಳ್ಳುವ ಯೋಜನೆಯ ಪ್ರಸ್ತಾವನೆ ಸಲ್ಲಿಸಲಾಗಿದೆ.

| ಪಟ್ಟಣ ಮತ್ತು ಗ್ರಾಮಗಳ ಹೆಸರು | ಸರ್ಕಾರದ ಅನುದಾನ | ಹಣಕಾಸು ಸಂಸ್ಥೆಗಳಿಂದ ಸಾಲ | ಸ್ಥಳೀಯ ಸಂಸ್ಥೆಯ ವಂತಿಕೆ | ಆರ್.ಡಿ.ಪಿ.ಆರ್., ಇಲಾಖೆಯವರು ಭರಿಸಬೇಕಾದ ಮೊತ್ತ | ಒಟ್ಟು |
|---|---|---|---|---|---|
| ಕೋಲಾರ | 2300.300 | 6573.54 | 985.98 | -- | 9859.82 |
| ಬಂಗಾರಪೇಟೆ | 1171.205 | 1171.205 | -- | -- | 2342.41 |
| ಮಾಲೂರು | 872.805 | 872.805 | -- | -- | 1745.61 |
| 45 ಗ್ರಾಮಗಳ ಸಲುವಾಗಿ ಆರಿ.ಡಿ.ಪಿ.ಆರ್., ಭರಿಸಬೇಕಾದ ಮೊತ್ತ | -- | -- | -- | 2052.16 | 2052.16 |
| **ಒಟ್ಟು ರೂ.** | **4344.31** | **8617.55** | **985.98** | **2052.46** | **16000.00** |

ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ಬೆಂಗಳೂರುರವರ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 26 ಯುಡಬ್ಲ್ಯೂಎಸ್ 2006, ಬೆಂಗಳೂರು, ದಿನಾಂಕ: 22ನೇ ಆಗಸ್ಟ್ 2007.**

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದ್ದ, ಕೋಲಾರ, ಮಾಲೂರು ಮತ್ತು ಬಂಗಾರಪೇಟೆ ಪಟ್ಟಣಗಳು ಹಾಗೂ ಮಾರ್ಗ ಮಧ್ಯದ 45 ಗ್ರಾಮಗಳಿಗೆ ಕುಡಿಯುವ ನೀರು ಒದಗಿಸುವ ಸಲುವಾಗಿ ಯರಗೋಳು ಗ್ರಾಮದ ಬಳಿ ಮಾರ್ಕಂಡೇಯ ನದಿಗೆ ಅಡ್ಡಲಾಗಿ ಅಣೆಕಟ್ಟು ನಿರ್ಮಿಸುವ ಯೋಜನೆಯನ್ನು ಅಂದಾಜು ವೆಚ್ಚ ರೂ.160.00 ಕೋಟಿಗಳಲ್ಲಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ನಗರ ನೀರು ಸರಬರಾಜು ಯೋಜನೆಯಡಿ ಕೈಗೆತ್ತಿಕೊಳ್ಳಲು ಆಡಳಿತಾತ್ಮಕ ಅನುಮೋದನೆಯನ್ನು ಈ ಕೆಳಕಂಡ ನಿಬಂಧನಗಳಿಗೊಳಪಟ್ಟು ನೀಡಿದೆ.

(1) ಸದರಿ ಯೋಜನೆಯನ್ನು ನಿಗದಿತ ವೇಳೆಯಲ್ಲಿ ಪೂರ್ಣಗೊಳಿಸುವುದು.

(2) ಸದರಿ ಕಾಮಗಾರಿಯನ್ನು ಕೈಗೊಳ್ಳುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ನಿಯಮ 2000ನ್ನು ಪಾಲಿಸುವುದು.

(3) ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡಕೂಡದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1687

**ಸಿ.ಟಿ. ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**ವಿಷಯ:** ಧಾರವಾಡ ಜಿಲ್ಲೆ ಕುಂದಗೋಳ ಪಟ್ಟಣದಲ್ಲಿ 10.00 ಲಕ್ಷ ಲೀಟರ್ ಸಾಮರ್ಥ್ಯದ ಜಲಸಂಗ್ರಹಾಗಾರ ನಿರ್ಮಾಣದ ಯೋಜನೆ ಅಂದಾಜು ವೆಚ್ಚ ರೂ.39.00 ಲಕ್ಷಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1) ಅಧ್ಯಕ್ಷರು ಮತ್ತು ವ್ಯ.ನಿ. ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರು ರವರ ಪತ್ರ ಸಂಖ್ಯೆ: ಕಜಮಂ/ತಾಂತ್ರಿಕ/ಮುಅ/ಉಮುಅ-1/ತಾಂಸ-1/ ಸಅ-12/2007-08/359 ದಿ:4-5-2007.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಧಾರವಾಡ ಜಿಲ್ಲೆ ಕುಂದಗೋಳು ಪಟ್ಟಣದಲ್ಲಿ 10.00 ಲಕ್ಷ ಲೀಟರ್ ಸಾಮರ್ಥ್ಯದ ಜಲಸಂಗ್ರಹಾಗಾರ ನಿರ್ಮಾಣದ ಯೋಜನೆ ಅಂದಾಜು ವೆಚ್ಚ ರೂ.39.00 ಲಕ್ಷಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಲು ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ಬೆಂಗಳೂರು ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಕುಂದಗೋಳ ಪಟ್ಟಣದ 2001 ಜನಗಣತಿ ಪ್ರಕಾರ 16,832 ಇರುತ್ತದೆ. ಈ ಪಟ್ಟಣಕ್ಕೆ ನೀರು ಸರಬರಾಜು ಯೋಜನೆಯ ವ್ಯವಸ್ಥೆಯನ್ನು ಹುಬ್ಬಳ್ಳಿ-ಧಾರವಾಡ ನೀರು ಸರಬರಾಜು ಯೋಜನೆಯಿಂದ ಮಾಡಲಾಗುತ್ತಿದೆ. ಕುಂದಗೋಳ ಪಟ್ಟಣದ ನೀರು ಸರಬರಾಜು ಅಭಿವೃದ್ಧಿ ಯೋಜನೆಯನ್ನು ರೂ.186.35 ಲಕ್ಷಗಳ ಅಂದಾಜು ವೆಚ್ಚದಲ್ಲಿ 1992ರಲ್ಲಿ ಪೂರ್ಣಗೊಳಿಸಿ ಚಾಲನೆಗೊಳಿಸಲಾಗಿದೆ. ಸದರಿ ಯೋಜನೆಯನ್ನು 2021ಕ್ಕೆ ಅಂದಾಜಿಸಲಾದ 21,000 ಜನಸಂಖ್ಯೆಗೆ ತಲಾ 70 LPCD ನಂತೆ ಪರಿಗಣಿಸಿ ಯೋಜನೆಯನ್ನು ವಿನ್ಯಾಸಗೊಳಿಸಲಾಗಿದೆ.

ಪಟ್ಟಣದ ನೀರು ಸರಬರಾಜು ವ್ಯವಸ್ಥೆಯು ನೂಲ್ವಿ ಹಳ್ಳಿಯಲ್ಲಿದ್ದು ವಿದ್ಯುತ್ ಅಡಚಣೆಯಿಂದಾಗಿ ನೂಲ್ವಿ ಪಂಪ್ ಹೌಸ್ ನಿಂದ ಕುಂದಗೋಳ ಪಟ್ಟಣಕ್ಕೆ ನೀರು ಸರಬರಾಜು ಮಾಡುವಲ್ಲಿ ವ್ಯತ್ಯೆಯ ಉಂಟಾಗುತ್ತಿರುತ್ತದೆ. ಹಾಗೂ ಹುಬ್ಬಳ್ಳಿಯಿಂದ ನೂಲ್ವಿ ಹಳ್ಳಿಯವರೆಗೆ ಗುರುತ್ವಾಕರ್ಷಣೆ ಮೂಲಕ ಸುಮಾರು 12.61 ಕಿ.ಮೀ.ಉದ್ದದ ಕೊಳವೆ ಮಾರ್ಗದ ಮೂಲಕ ಹರಿದು ಬರುವ ನೀರು ಜಲಸಂಗ್ರಹಾಗಾರ ತುಂಬಿ ಹರಿದು ಪೋಲಾಗುತ್ತಿರುತ್ತದೆ. ಈ ಪರಿಸ್ಥಿತಿಯನ್ನು ನೀಗಿಸಲು ನೂಲ್ವಿ ಹಳ್ಳಿಯ ಹತ್ತಿರ 10.00 ಲಕ್ಷ ಲೀಟರ್ ಸಾಮರ್ಥ್ಯದ

ಜಲಸಂಗ್ರಹಾಗಾರ ನಿರ್ಮಿಸಿ ಶೇಖರಣೆಯಾದ ನೀರುನ್ನು ವಿದ್ಯುತ್ ಸರಬರಾಜು ಇರುವ ಸಮಯದಲ್ಲಿ ಕುಂದಗೋಳ ಪಟ್ಟಣಕ್ಕೆ ಪಂಪ್ ಮಾಡಲು ಪ್ರಸ್ತಾಪಿಸಿ ಅಂದಾಜು ಸಲ್ಲಿಸಲಾಗಿದೆ. ಅಂದಾಜು ಪಟ್ಟಿಯನ್ನು 2006-07ನೇ ಸಾಲಿನ ದರಪಟ್ಟಿಗೆ ಅನುಗುಣವಾಗಿ ರೂ.39.00 ಲಕ್ಷಗಳಿಗೆ ತಯಾರಿಸಿ ಕೊಳವೆ ನೀರು ಸರಬರಾಜು ಯೋಜನೆ ಅಡಿಯಲ್ಲಿ ಕೈಗೆತ್ತಿಗೊಳ್ಳಲು ಉದ್ದೇಶಿಸಲಾಗಿದೆ. 2007-08ನೇ ಸಾಲಿನ ಮಂಡಳಿಯ ಅನುಮೋದಿತ ಕ್ರಿಯಾ ಯೋಜನೆಯಲ್ಲಿ ಈ ಯೋಜನೆಗೆ ರೂ.13.00 ಲಕ್ಷಗಳನ್ನು ಅನವು ಮಾಡಿದೆ.

ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 41 ಯುಡಬ್ಲ್ಯೂಎಸ್ 2006, ಬೆಂಗಳೂರು, ದಿನಾಂಕ: 20ನೇ ಆಗಸ್ಟ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಧಾರವಾಡ ಜಿಲ್ಲೆ ಕುಂದಗೋಳ ಪಟ್ಟಣದಲ್ಲಿ 10.00 ಲಕ್ಷ ಲೀಟರ್ ಸಾಮರ್ಥ್ಯದ ಜಲಸಂಗ್ರಹಾಗಾರ ನಿರ್ಮಾಣದ ಕುಡಿಯುವ ನೀರಿನ ಯೋಜನೆಯನ್ನು ಅಂದಾಜು ವೆಚ್ಚ ರೂ.39.00 ಲಕ್ಷಗಳಲ್ಲಿ (ಮೂವತ್ತೊಂಭತ್ತು ಲಕ್ಷ ರೂ.ಗಳು ಮಾತ್ರ) ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಕೊಳವೆ ನೀರು ಸರಬರಾಜು ಯೋಜನೆ ಅಡಿಯಲ್ಲಿ ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗೊಳಪಟ್ಟು ಆಡಳಿತಾತ್ಮಕ ಮಂಜೂರಾತಿಯನ್ನು ನೀಡಿದೆ.

(1) ಸದರಿ ಯೋಜನೆಯನ್ನು ನಿಗದಿತ ವೇಳೆಯಲ್ಲಿ ಪೂರ್ಣಗೊಳಿಸುವುದು.

(2) ಸದರಿ ಕಾಮಗಾರಿಯನ್ನು ಕೈಗೊಳ್ಳುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ನಿಯಮ 2000ನ್ನು ಪಾಲಿಸುವುದು.

(3) ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡಕೂಡದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002 ದಿನಾಂಕ:20-01-2003ರಲ್ಲಿ ಸರ್ಕಾರದ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1682

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

**ವಿಷಯ:** ಮಡಿಕೇರಿ ಪಟ್ಟಣಕ್ಕೆ ಕುಡಿಯುವ ನೀರು ಸರಬರಾಜು ಮಾಡಲು ಕುಂಡಾಮೇಸ್ತ್ರೀ ಹೊಳೆಯಿಂದ ಕೂಟುಹೊಳೆಗೆ ನೀರು ಹಾಯಿಸುವ ರೂ.700.00 ಲಕ್ಷಗಳ ಯೋಜನೆಯ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** ಅಧ್ಯಕ್ಷರು ಮತ್ತು ವ್ಯ.ನಿ. ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರುರವರ ಪತ್ರ ಸಂಖ್ಯೆ: ಕಜಮಂ/ತಾಂತ್ರಿಕ/ಮಡಿಕೇರಿ-ನೀ.ಸ.ಯೋ/15/2147/2006-07 ದಿನಾಂಕ:19-10-2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಮಡಿಕೇರಿ ಪಟ್ಟಣಕ್ಕೆ ಕುಡಿಯುವ ನೀರು ಸರಬರಾಜು ಮಾಡಲು ಕುಂಡಾಮೇಸ್ತ್ರೀ ಹೊಳೆಯಿಂದ ಕೂಟುಹೊಳೆಗೆ ನೀರು ಹಾಯಿಸುವ ರೂ.700.00 ಲಕ್ಷಗಳ ಯೋಜನೆಯ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆ ನೀಡಲು ಕೋರಿ ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ಬೆಂಗಳೂರು ಇವರು, ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮಡಿಕೇರಿ ಪಟ್ಟಣವು ಕೊಡಗು ಜಿಲ್ಲೆಯ ಕೇಂದ್ರ ಸ್ಥಾನವಾಗಿರುತ್ತದೆ. ಪಟ್ಟಣದ ಜನಸಂಖ್ಯೆಯು 2001ರ ಜನಗಣತಿಯ ಪ್ರಕಾರ 32,286 ಆಗಿದ್ದು, 2031ನೇ ಇಸವಿಗೆ ಸುಮಾರು 48,252 ಆಗುವ ನಿರೀಕ್ಷೆ ಇರುತ್ತದೆ. ಪ್ರಸ್ತುತ ಮಡಿಕೇರಿ ಪಟ್ಟಣಕ್ಕೆ ಕೂಟುಹೊಳೆ ಮೂಲದಿಂದ ಎರಡು ಹಂತಗಳಲ್ಲಿ ನೀರು ಸರಬರಾಜು ಯೋಜನೆಯನ್ನು 1966 ರಲ್ಲಿ ಹಾಗೂ 2003ರಲ್ಲಿ ಚಾಲ್ತಿಗೊಳಿಸಲಾಗಿದೆ. ಬೇಸಿಗೆ ಕಾಲದಲ್ಲಿ ಕೂಟುಹೊಳೆಯು ಬತ್ತಿ ಹೋಗುವುದರಿಂದ ಮತ್ತು ಜನಸಂಖ್ಯೆ ಹೆಚ್ಚಾಗಿರುವುದರಿಂದ ಪಟ್ಟಣಕ್ಕೆ ನೀರಿನ ಅಭಾವ ಉಂಟಾಗುತ್ತಿದೆ. ಆದುದರಿಂದ ಈ ಮಡಿಕೇರಿ ಪಟ್ಟಣಕ್ಕೆ ಬೇರೆ ಮೂಲದಿಂದ ನೀರು ಸರಬರಾಜು ಯೋಜನೆ ಅನುಷ್ಠಾನಗೊಳಿಸುವ ಅವಶ್ಯವಿರುತ್ತದೆ. ಈ ಕೊರತೆಯನ್ನು ನೀಗಿಸುವ ಸಂಬಂಧ, ಕೂಟು ಹೊಳೆಯಿಂದ 7.5 ಕಿ.ಮಿ. ದೂರದಲ್ಲಿ ಹರಿಯುತ್ತಿರುವ ಕುಂಡಾ ಮೇಸ್ತ್ರಿ ಹೊಳೆಯಿಂದ ಕೂಟು ಹೊಳೆಗೆ ನೀರು ಹಾಯಿಸಿ ಮಡಿಕೇರಿ ಪಟ್ಟಣಕ್ಕೆ ಕುಡಿಯುವ ನೀರು ಸರಬರಾಜು ಮಾಡಲು ನಗರ ನೀರು ಸರಬರಾಜು ಯೋಜನೆಯಡಿ 2031ನೇ ಎಸವಿಯಲ್ಲಿ ಅಂದಾಜಿಸಲಾದ 48,252 ಜನಸಂಖ್ಯೆಗೆ ತಲಾ ದಿನಂಪ್ರತಿ 100 ಲೀಟರ್‌ನಂತೆ ಯೋಜನೆಯನ್ನು ತಯಾರಿಸಲಾಗಿದೆ.

ಈ ಯೋಜನೆಗೆ 2005-06ನೇ ಸಾಲಿನ ದರಪಟ್ಟಿಯಂತೆ ರೂ.700.00 ಲಕ್ಷಗಳಿಗೆ ಅಂದಾಜು ತಯಾರಿಸಿ, ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ಕೈಗೆತ್ತಿಕೊಳ್ಳಲು ಉದ್ದೇಶಿಸಲಾಗಿದೆ.

| | |
|---|---|
| ಆರ್ಥಿಕ ಸಂಸ್ಥೆಗಳಿಂದ ಸಾಲ (ಶೇ.50) | - ರೂ.350.00 ಲಕ್ಷ |
| ಸರ್ಕಾರದ ಅನುದಾನ (ಶೇ.50) | - ರೂ.350.00 ಲಕ್ಷ |
| **ಒಟ್ಟು** | **- ರೂ.700.00 ಲಕ್ಷ** |

ಮಂಡಳಿಯ 2007-08ನೇ ಸಾಲಿನ ಕ್ರಿಯಾ ಯೋಜನೆಯಲ್ಲಿ ಸದರಿ ಯೋಜನೆಗೆ ರೂ.233.00 ಲಕ್ಷಗಳ ಅನುವು ಮಾಡಲಾಗಿದೆ.

ಮಂಡಳಿಯ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 73 ಯುಡಬ್ಲ್ಯೂಎಸ್ 2006, ಬೆಂಗಳೂರು, ದಿನಾಂಕ: 4ನೇ ಸೆಪ್ಟೆಂಬರ್ 2007**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮಡಿಕೇರಿ ಪಟ್ಟಣಕ್ಕೆ ಕುಡಿಯುವ ನೀರು ಸರಬರಾಜು ಮಾಡಲು ಕುಂಡಾಮೇಸ್ತ್ರೀ ಹೊಳೆಯಿಂದ ಕೂಟುಹೊಳೆಗೆ ನೀರು ಹಾಯಿಸುವ ಯೋಜನೆಯನ್ನು ಅಂದಾಜು ವೆಚ್ಚ ರೂ.700.00 (ರೂ.ಏಳು ನೂರು ಲಕ್ಷಗಳಲ್ಲಿ) ಲಕ್ಷಗಳಲ್ಲಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ನಗರ ನೀರು ಸರಬರಾಜು ಯೋಜನೆಯಡಿಯಲ್ಲಿ ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗೊಳಪಟ್ಟು ಆಡಳಿತಾತ್ಮಕ ಮಂಜೂರಾತಿಯನ್ನು ನೀಡಿದೆ.

(1) ಸದರಿ ಯೋಜನೆಯನ್ನು ನಿಗದಿತ ವೇಳೆಯಲ್ಲಿ ಪೂರ್ಣಗೊಳಿಸುವುದು.

(2) ಸದರಿ ಕಾಮಗಾರಿಯನ್ನು ಕೈಗೊಳ್ಳುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ನಿಯಮ 2000ನ್ನು ಪಾಲಿಸುವುದು.

(3) ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡಕೂಡದು.

(4) Water rates proposed by KUWS&DB has to be implemented by ULB to take care of O&M cost.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:FD 640 Exp–9/2006, ದಿನಾಂಕ:6–12–2006ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1642

**ಸಿ.ಟಿ. ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**ವಿಷಯ:** ರಾಮನಗರ ಪಟ್ಟಣದ ಕುಡಿಯುವ ನೀರು ಸರಬರಾಜು ವ್ಯವಸ್ಥೆ ಅಭಿವೃದ್ಧಿ ಪಡಿಸುವ ಕಾಮಗಾರಿಯನ್ನೊಳಗೊಂಡ ಅಂದಾಜು ಮೊತ್ತ ರೂ.504.80 ಲಕ್ಷಗಳ ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1) ಅಧ್ಯಕ್ಷರು ಮತ್ತು ವ್ಯ.ನಿ. ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರು ರವರ ಪತ್ರ ಸಂಖ್ಯೆ: ಕಜಮಂ/ಮುಅ/ಉಮುಅ–1/ಸಅ–5/2006–07/ 1942 ದಿ:23–9–2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ರಾಮನಗರ ಪಟ್ಟಣದ ಕುಡಿಯುವ ನೀರು ಸರಬರಾಜು ವ್ಯವಸ್ಥೆ ಅಭಿವೃದ್ಧಿ ಪಡಿಸುವ ಕಾಮಗಾರಿಯನ್ನೊಳಗೊಂಡ ಅಂದಾಜು ರೂ.504.80 ಲಕ್ಷಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುಲು ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ಬೆಂಗಳೂರು ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ರಾಮನಗರ ಪಟ್ಟಣವು ಹೊಸದಾಗಿ ರಚನೆಯಾಗಿರುವ ರಾಮನಗರ ಜಿಲ್ಲೆಯ ಕೇಂದ್ರಸ್ಥಾನವಾಗಿದ್ದು ರಾಜಧಾನಿಯಿಂದ 50 ಕಿ.ಮೀ. ದೂರದಲ್ಲಿದೆ. 2001 ರ ಜನಗಣತಿಯ ಪ್ರಕಾರ ಪಟ್ಟಣದ ಜನಸಂಖ್ಯೆಯು 80,000 ಆಗಿರುತ್ತದೆ ಮತ್ತು ಪ್ರಸ್ತುತ ಜನಸಂಖ್ಯೆಯು ಸುಮಾರು 83,000 ಇರುತ್ತದೆ. ಸದರಿ ಪಟ್ಟಣಕ್ಕೆ ನೀರನ್ನು ಉಪಯೋಗಿಸಲು ಅರ್ಕಾವತಿ ನದಿಯನ್ನು ಮೂಲವಾಗಿಟ್ಟುಕೊಂಡು ಕುಡಿಯುವ ನೀರು ಸರಬರಾಜು ಯೋಜನೆಯನ್ನು 1985 ರಲ್ಲಿ ಅನುಷ್ಠಾನಗೊಳಿಸಲಾಗಿದ್ದು, ಸುಮಾರು 2.0 MLD ಯಷ್ಟು ನೀರನ್ನು ಸರಬರಾಜು ಮಾಡಲಾಗುತ್ತಿದೆ. ತದನಂತರ ಶಿಂಷಾ ನದಿಯನ್ನು ಮೂಲವಾಗಿಟ್ಟುಕೊಂಡು ರಾಮನಗರ ಮತ್ತು ಚನ್ನಪಟ್ಟಣ ನಗರಗಳಿಗೆ ಕುಡಿಯುವ ನೀರು ಸರಬರಾಜು ಮಾಡುವ ರೂ.2424.00 ಲಕ್ಷಗಳ ಅಂದಾಜು ವೆಚ್ಚದ ಯೋಜನೆಯನ್ನು ಏಷ್ಯಾ ಅಭಿವೃದ್ಧಿ ಬ್ಯಾಂಕ್‌ನ (ಎ.ಡಿ.ಬಿ.) ಆರ್ಥಿಕ ನೆರವಿನೊಂದಿಗೆ ನವೆಂಬರ್ 2002 ರಲ್ಲಿ ಚಾಲ್ತಿಗೊಳಿಸಲಾಗಿದೆ. ಇದರಿಂದ ತಲಾ ದಿನಂಪ್ರತಿ 100 ಎಲ್‌ಪಿಸಿಡಿ ಕುಡಿಯುವ ನೀರನ್ನು ಸರಬರಾಜು ಮಾಡಲಾಗುತ್ತಿದೆ. ಈ ಯೋಜನೆಯನ್ನು 2021ನೇ ಇಸವಿಯಲ್ಲಿ ಇರಬಹುದೆಂದು ಅಂದಾಜಿಸಲಾದ ರಾಮನಗರದ 92,000 ಜನಸಂಖ್ಯೆ ಮತ್ತು ಚನ್ನಪಟ್ಟಣದ 99,000 ಜನಸಂಖ್ಯೆಗೆ ಹಾಗೂ ಮಾರ್ಗಮಧ್ಯದಲ್ಲಿ ಬರುವ ಗ್ರಾಮಗಳ 18,000 ಜನಸಂಖ್ಯೆಗೆ ಕುಡಿಯುವ ನೀರನ್ನು ಸರಬರಾಜು ಮಾಡಲು ಈ ಯೋಜನೆಯನ್ನು ರೂಪಿಸಲಾಗಿರುತ್ತದೆ. ಇಸವಿ 2006 ರಲ್ಲಿ ಒಟ್ಟಾರೆ 15 MLD ಗಳಷ್ಟು ನೀರನ್ನು ಹಾಗೂ 2021 ರಲ್ಲಿ ಒಟ್ಟಾರೆ 26 ಒಐಆ ಗಳಷ್ಟು ನೀರನ್ನು ಸರಬರಾಜು ಮಾಡಲು ವಿನ್ಯಾಸಿಸಲಾಗಿರುತ್ತದೆ. ಪ್ರಸ್ತುತ ಶಿಂಷಾ ಮತ್ತು ಅರ್ಕಾವತಿ ನದಿಗಳನ್ನು ಮೂಲವಾಗಿಟ್ಟುಕೊಂಡು ರಾಮನಗರ ಮತ್ತು ಚನ್ನಪಟ್ಟಣ ಪಟ್ಟಣಗಳಿಗೆ ಕ್ರಮವಾಗಿ 8.0 MLD ಹಾಗೂ 7.0 MLD ಗಳಷ್ಟು ನೀರನ್ನು ಉಪಯೋಗಿಸಲಾಗುತ್ತಿದೆ.

ಬೇಸಿಗೆಯಲ್ಲಿ ಕುಡಿಯುವ ನೀರಿನ ಸಮಸ್ಯೆಯನ್ನು ನೀಗಿಸಲು ಸಾಕಷ್ಟು ನೀರನ್ನು ಶೇಖರಿಸಿಕೊಳ್ಳಲು ಈಗಿನ ನೀರು ಸರಬರಾಜು ವ್ಯವಸ್ಥೆಯನ್ನು ಅಭಿವೃದ್ಧಿಗೊಳಿಸಲು 2005–06ನೇ ಸಾಲಿನ ದರ ಪಟ್ಟಿಯಂತೆ ಈ ಯೋಜನೆಯ ಅಂದಾಜು ರೂ.504.80 ಲಕ್ಷಗಳಿಗೆ ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ಈ ಯೋಜನೆಯನ್ನು ಕೈಗೆತ್ತಿಕೊಳ್ಳಲು ಉದ್ದೇಶಿಸಲಾಗಿದೆ.

| | |
|---|---|
| ಸರ್ಕಾರದ ಅನುದಾನ (ಶೇ.50) | – ರೂ. 252.40 ಲಕ್ಷಗಳು |
| ಆರ್ಥಿಕ ಸಂಸ್ಥೆಗಳಿಂದ ಸಾಲ (ಶೇ.50) | – ರೂ. 252.40 ಲಕ್ಷಗಳು |
| **ಒಟ್ಟು** | **– ರೂ. 504.80 ಲಕ್ಷಗಳು** |

2007–08ನೇ ಸಾಲಿನ ಮಂಡಳಿಯ ಅನುಮೋದಿತ ಕ್ರಿಯಾ ಯೋಜನೆಯಲ್ಲಿ ಈ ಯೋಜನೆಗೆ ರೂ.168.00 ಲಕ್ಷಗಳನ್ನು ಅನವು ಮಾಡಿದೆ. ಸರ್ಕಾರವು ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ಬೆಂಗಳೂರುರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 52 ಯುಡಬ್ಲ್ಯೂಎಸ್ 2006, ಬೆಂಗಳೂರು, ದಿನಾಂಕ: 04ನೇ ಸೆಪ್ಟೆಂಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ರಾಮನಗರ ಪಟ್ಟಣದ ಕುಡಿಯುವ ನೀರು ಸರಬರಾಜು ವ್ಯವಸ್ಥೆ ಅಭಿವೃದ್ಧಿ ಪಡಿಸುವ ಕಾಮಗಾರಿಯನ್ನೊಳಗೊಂಡ ಯೋಜನೆಯನ್ನು ಅಂದಾಜು ಮೊತ್ತ ರೂ.504.80 ಲಕ್ಷಗಳಲ್ಲಿ (ರೂ.ಐದು ನೂರ ನಾಲ್ಕು ಲಕ್ಷ ಮತ್ತು ಎಂಬತ್ತು ಸಾವಿರ ಮಾತ್ರ) ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ನಗರ ನೀರು ಸರಬರಾಜು ಯೋಜನೆ ಅಡಿಯಲ್ಲಿ ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗೊಳಪಟ್ಟು ಆಡಳಿತಾತ್ಮಕ ಮಂಜೂರಾತಿಯನ್ನು ನೀಡಿದೆ.

1. ಸದರಿ ಯೋಜನೆಯನ್ನು ನಿಗಧಿತ ವೇಳೆಯಲ್ಲಿ ಪೂರ್ಣಗೊಳಿಸುವುದು.
2. ಸದರಿ ಕಾಮಗಾರಿಯನ್ನು ಕೈಗೊಳ್ಳುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ನಿಯಮ 2000ನ್ನು ಪಾಲಿಸುವುದು.
3. ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡಕೂಡದು.
4. Water rates as proposed by KUWSDB has to be implemented by the ULB to take care of O&M cost.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:FD 49 Exp–9/2007, ದಿನಾಂಕ:15–2–2007ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1641

**ಸಿ.ಟಿ. ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**ವಿಷಯ:** ಶಿಕಾರಿಪುರ ಪಟ್ಟಣಕ್ಕೆ ಒಳ ಚರಂಡಿ ವ್ಯವಸ್ಥೆ ಕಲ್ಪಿಸುವ ಯೋಜನೆ – ಪರಿಷ್ಕೃತ ಅಂದಾಜು ಮತ್ತು ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ:ನಅಇ 10 ಯುಡಿಎಸ್ 2006 ಬೆಂಗಳೂರು, ದಿನಾಂಕ:19–1–2007.
2) ಆಯುಕ್ತರು, ಕರ್ನಾಟಕ ಗೃಹ ಮಂಡಳಿ ರವರ ಪತ್ರ ದಿನಾಂಕ:26–5–2007.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರ ಆದೇಶದಲ್ಲಿ ಶಿಕಾರಿಪುರ ಪಟ್ಟಣಕ್ಕೆ ರೂ.1550.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಒಳಚರಂಡಿ ಯೋಜನೆ ಕಲ್ಪಿಸುವ ಯೋಜನೆಗೆ ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಿ, ಈ ಯೋಜನೆಯ ಕಾಮಗಾರಿಯ ಗುತ್ತಿಗೆಯನ್ನು ಕಾರ್ಯ ರೂಪಕ್ಕೆ ತರಲು ಕರ್ನಾಟಕ ಗೃಹ ಮಂಡಳಿಗೆ ವಹಿಸಿದೆ.

ಅದರಂತೆ ಆಯುಕ್ತರು, ಕರ್ನಾಟಕ ಗೃಹ ಮಂಡಳಿರವರು ಸದರಿ ಕಾಮಗಾರಿಗೆ ರೂ.12.44 ಕೋಟಿಗಳಿಗೆ ಟೆಂಡರ್ ಕರೆದಿರುತ್ತಾರೆ. ಸದರಿ ಟೆಂಡರ್ ನಲ್ಲಿ ಅತೀ ಕಡಿಮೆ ಟೆಂಡರ್ ದರವನ್ನು M/s.GVPR Limited, Hyderabad ಸಂಸ್ಥೆಯವರು ನಮೂದಿಸಿದ್ದು, ಸಂಧಾನ ನಡೆಸಿದ ನಂತರ ಟೆಂಡರ್ ಮೊತ್ತಕ್ಕಿಂತೆ ಶೇ.39ರಷ್ಟು ಹೆಚ್ಚಾಗಿ ಅಂದರೆ ರೂ.17.29 ಕೋಟಿಗಳಿಗೆ ಕಾರ್ಯ ನಿರ್ವಹಿಸಲು ಒಪ್ಪಿರುತ್ತಾರೆಂದು, ಹಾಗೂ ಯೋಜನೆಯ ಒಟ್ಟು ವೆಚ್ಚವನ್ನು ರೂ.15.50 ಕೋಟಿಗಳಿಂದ ರೂ.21.00 ಕೋಟಿಗಳಿಗೆ ಪರಿಷ್ಕರಿಸಲಾಗಿದೆಯೆಂದು, ಟೆಂಡರ್ ಗುತ್ತಿಗೆಯನ್ನು M/s.GVPR Limited, Hyderabad ಸಂಸ್ಥೆಯವರಿಗೆ ವಹಿಸಿಕೊಡಲು ಹಾಗೂ ಯೋಜನೆಯ ಪರಿಷ್ಕೃತ ಅಂದಾಜು ರೂ.21.00 ಕೋಟಿಗಳಿಗೆ ಅನುಮೋದನೆಯನ್ನು ನೀಡಲು ಕೋರಿ ಮೇಲೆ ಓದಲಾದ ಕ್ರಮಾಂಕ (2)ರ ಪತ್ರದಲ್ಲಿ ಆಯುಕ್ತರು, ಕರ್ನಾಟಕ ಗೃಹ ಮಂಡಳಿರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಈ ಯೋಜನೆಯನ್ನು ಭಾರತ ಸರ್ಕಾರದ ಶೇ.80ರಷ್ಟು ಅನುದಾನ ಒದಗಿಸುವ ಅವಕಾಶವಿರುವ UIDSSMT ಯೋಜನೆಯಡಿಯಲ್ಲಿ ಸೇರಿಸಲಾಗಿದ್ದು,

ಯೋಜನೆಗೆ ಭಾರತ ಸರ್ಕಾರವು ರೂ.13.17 ಕೋಟಿಗಳಿಗೆ ಅನುಮೋದನೆ ನೀಡಿರುತ್ತದೆ.

ಆಯುಕ್ತರು, ಕರ್ನಾಟಕ ಗೃಹ ಮಂಡಳಿರವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ ಶಿಕಾರಿಪುರ ಒಳಚರಂಡಿ ಯೋಜನೆಗೆ ಟೆಂಡರ್‌ಗಿಟ್ಟ ಮೊತ್ತ ರೂ.12.44 ಕೋಟಿಗಳನ್ನು 2007–08 ನೇ ಸಾಲಿನ ದರಪಟ್ಟಿಗನುಗುಣವಾಗಿ ರೂ.13.67 ಕೋಟಿಗಳಿಗೆ ಪರಿಷ್ಕರಿಸಿ ಈ ಮೊತ್ತಕ್ಕೆ ಶೇ.13 ರಷ್ಟು ಟೆಂಡರ್ ಪ್ರೀಮಿಯಂನ್ನು ನಿಗಧಿಪಡಿಸಿ ಒಟ್ಟು ಮೊತ್ತವಾದ ರೂ.15.44 ಕೋಟಿಗಳಿಗೆ ಸ್ಥೀಮಿತಗೊಳಿಸಿ ಟೆಂಡರ್ ಗುತ್ತಿಗೆ ಕಾಮಗಾರಿಯನ್ನು M/s.GVPR Limited, Hyderabad ರವರಿಗೆ ಕರ್ನಾಟಕ ಗೃಹ ಮಂಡಳಿಯು ವಹಿಸಿಕೊಡಲು ಅನುಮೋದನೆ ನೀಡಲು ಸರ್ಕಾರವು ತೀರ್ಮಾನಿಸಿದೆ ಅದರಂತೆ ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ನಅಇ 09 ಯುಡಿಎಸ್ 2007, ಬೆಂಗಳೂರು, ದಿನಾಂಕ: 31ನೇ ಅಕ್ಟೋಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶಿಕಾರಿಪುರ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆ ಕಲ್ಪಿಸಲು ಕರ್ನಾಟಕ ಗೃಹ ಮಂಡಳಿಯು ಕರೆದಿರುವ ಕಾಮಗಾರಿ ಗುತ್ತಿಗೆಯನ್ನು ಅತೀ ಕಡಿಮೆ ಟೆಂಡರ್‌ದಾರರಾದ ಮೆ:GVPR Engineers Ltd., Hyderabad ರವರು ರೂ.15.44 ಕೋಟಿಗಳಲ್ಲಿ ಅನುಷ್ಠಾನಗೊಳಿಸಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಸರ್ಕಾರವು ಅನುಮೋದನೆಯನ್ನು ನೀಡಿದೆ.

(1) ಸದರಿ ಯೋಜನೆಯನ್ನು ನಿಗಧಿತ ವೇಳೆಯಲ್ಲಿ ಪೂರ್ಣಗೊಳಿಸುವುದು.

(2) ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡತಕ್ಕದ್ದಲ್ಲ.

(3) Water rates as proposed by KUWS&DB has to be implemented by the ULBs to take care of O & M cost.

(4) No additionality will be provided by Government.

(5) Any escalation in the cost of the project shall not be entertained.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: FD 520 Exp–9/ 2007 ದಿನಾಂಕ:03–9–2007 ಮತ್ತು 21.9.2007 ಗಳಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2029

**ಸಿ.ಟಿ. ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**ವಿಷಯ:** ಕೊಪ್ಪಳ ಜಿಲ್ಲೆಯ ಯಲಬುರ್ಗ ಪಟ್ಟಣಕ್ಕೆ ಹಿರೇಹಳ್ಳ ಅಣೆಕಟ್ಟಿನಿಂದ ಕುಡಿಯುವ ನೀರು ಸರಬರಾಜು ಮಾಡುವ ರೂ.1265.00 ಲಕ್ಷಗಳ ಅಂದಾಜು ವೆಚ್ಚಕ್ಕೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1) ಅಧ್ಯಕ್ಷರು ಮತ್ತು ವ್ಯ.ನಿ. ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರು ರವರ ಪತ್ರ ಸಂಖ್ಯೆ: KWB/CE(N)/DCE-2/TA-4/AE-6/3547/ 2005-06/dt:17-1-2006.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರ ಪತ್ರದಲ್ಲಿ ಕೊಪ್ಪಳ ಜಿಲ್ಲೆಯ ಯಲಬುರ್ಗ ಪಟ್ಟಣಕ್ಕೆ ಹಿರೇಹಳ್ಳ ಅಣೆಕಟ್ಟಿನಿಂದ ಕುಡಿಯುವ ನೀರು ಸರಬರಾಜು ಮಾಡುವ ರೂ.1265.00 ಲಕ್ಷಗಳ ಅಂದಾಜು ವೆಚ್ಚದ ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡಲು ಕೋರಿ ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ಇವರು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಯಲಬುರ್ಗ ಪಟ್ಟಣವು ಕೊಪ್ಪಳ ಜಿಲ್ಲೆಯ ಒಂದು ತಾಲ್ಲೂಕು ಕೇಂದ್ರವಾಗಿದ್ದು, 2001ನೇ ಇಸವಿ ಜನಗಣತಿ ಪ್ರಕಾರ 11,437 ಇರುತ್ತದೆ. ಈ ಪಟ್ಟಣಕ್ಕೆ ಹಾಲಿ ವಿದ್ಯುತ್ ಯಂತ್ರ ಅಳವಡಿಸಿರುವ 8 ಕೊಳವೆ ಬಾವಿ ಹಾಗೂ ಹ್ಯಾಂಡ್ ಪಂಪು ಅಳವಡಿಸಿರುವ 22 ಕೊಳವೆ ಬಾವಿಗಳಿಂದ ನೀರನ್ನು ಒದಗಿಸಲಾಗುತ್ತಿದೆ. ನೀರು ಸರಬರಾಜು ಯೋಜನೆ ವ್ಯವಸ್ಥೆಯನ್ನು ಉತ್ತಮಪಡಿಸುವ ಸಲುವಾಗಿ ರೂ.188.92 ಲಕ್ಷಗಳ ಅಂದಾಜು ವೆಚ್ಚದಲ್ಲಿ 10 ಲಕ್ಷ ಲೀಟರ್ ಸಾಮರ್ಥ್ಯದ ಮೇಲ್ಮಟ್ಟದ ಜಲಸಂಗ್ರಹಾಗಾರ, ಸಂಪು ಹಾಗೂ ಪಂಪ್‌ಹೌಸ್ ಹಾಗೂ ವಿತರಣಾ ಪೈಪ್‌ಲೈನ್‌ಗಳನ್ನು ನಿರ್ಮಿಸುವ ಕಾಮಗಾರಿಗಳು ಪ್ರಗತಿಯಲ್ಲಿದೆ.

ಮಳೆಯ ವೈಫಲ್ಯದಿಂದಾಗಿ, ಯಲಬುರ್ಗ ಪಟ್ಟಣವು ಕಳೆದ 4 – 5 ವರ್ಷಗಳಿಂದ ಕುಡಿಯುವ ನೀರು ಸರಬರಾಜು ಸಮಸ್ಯೆಯನ್ನು ಎದುರಿಸುತ್ತಿದೆ ಮತ್ತು ಕೊಳವೆ ಬಾವಿಗಳಲ್ಲಿನ ನೀರಿನ ಮಟ್ಟ ಕುಸಿದಿದೆ. ಹೊಸದಾಗಿ ಕೊರೆದ ಕೊಳವೆ ಬಾವಿಗಳಲ್ಲೂ ನೀರಿನ ಲಭ್ಯತೆ ಕಡಿಮೆ ಆಗಿರುತ್ತದೆ. ಈ ಕುಡಿಯುವ ನೀರಿನ ಅಭಾವವನ್ನು ನೀಗಿಸುವ ಸಲುವಾಗಿ, ಯಾವಾಗಲೂ ನೀರು ಲಭ್ಯವಿರುವ ಮೂಲವನ್ನು ಪರಿಗಣಿಸಿ ಹಿರೇಹಳ್ಳ ಅಣೆಕಟ್ಟಿನ ಮೂಲದಿಂದ ಕುಡಿಯುವ ನೀರು ಸರಬರಾಜು ಯೋಜನೆ ಕೈಗೊಳ್ಳುವುದು ತಾಂತ್ರಿಕವಾಗಿ ಹಾಗೂ ಆರ್ಥಿಕವಾಗಿ ಸೂಕ್ತವೆಂದು ಪರಿಗಣಿಸಿ, ಹಿರೇಹಳ್ಳ ಅಣೆಕಟ್ಟನ್ನು ಮೂಲವಾಗಿಟ್ಟುಕೊಂಡು ನೀರು ಸರಬರಾಜು ಯೋಜನೆ ರೂಪಿಸಲಾಗಿದೆ. ಈ ಯೋಜನೆಯಲ್ಲಿ ಮಧ್ಯಂತರ 2020ನೇ ಇಸವಿ ಮತ್ತು ಅಂತಿಮ 2035ನೇ ಇಸವಿಗಳಲ್ಲಿ ಅಂದಾಜಿಸಲಾದ ಜನಸಂಖ್ಯೆ ಕ್ರಮವಾಗಿ 17,000 ಮತ್ತು 23,500 ಪರಿಗಣಿಸಿ ಪ್ರತಿದಿನ ಪ್ರತಿಯೊಬ್ಬರಿಗೆ 100 ಎಲ್‌ಪಿಸಿಡಿ ನೀರು ಸರಬರಾಜು ಮಾಡಲು ಯೋಜಿಸಲಾಗಿದೆ. ಈ ಯೋಜನೆಯನ್ನು 2.25 ಎಂಎಲ್‌ಡಿ ಸಾಮರ್ಥ್ಯಕ್ಕೆ ವಿನ್ಯಾಸಗೊಳಿಸಲಾಗಿರುತ್ತದೆ.

ಆದುದರಿಂದ ಮೇಲ್ಕಂಡ ಯೋಜನೆಗೆ ರೂ.1265.00 ಲಕ್ಷಗಳ ಅಂದಾಜನ್ನು 2005–06ನೇ ದರಪಟ್ಟಿಯಂತೆ ತಯಾರಿಸಲಾಗಿದ್ದು, ಕೊಳವೆ ನೀರು ಸರಬರಾಜು ಯೋಜನೆಯಡಿ ಕೈಗೆತ್ತಿಕೊಳ್ಳಲು ಉದ್ದೇಶಿಸಲಾಗಿದೆ.

ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ 2007–08ನೇ ಸಾಲಿನ ಅನುಮೋದಿತ ಕ್ರಿಯಾ ಯೋಜನೆಯಲ್ಲಿ ಈ ಯೋಜನೆಗೆ ರೂ. 422.00 ಲಕ್ಷಗಳನ್ನು ಅನುವು ಮಾಡಲಾಗಿದೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 06 ಯುಡಬ್ಲೂಎಸ್ 2006, ಬೆಂಗಳೂರು, ದಿನಾಂಕ: 5ನೇ ಸೆಪ್ಟೆಂಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಯಲಬುರ್ಗ ಪಟ್ಟಣಕ್ಕೆ ಹಿರೇಹಳ್ಳ ಅಣೆಕಟ್ಟಿನಿಂದ ಕುಡಿಯುವ ನೀರು ಸರಬರಾಜು ಮಾಡುವ ರೂ.1265.00 ಲಕ್ಷಗಳ (ರೂಪಾಯಿ ಒಂದು ಸಾವಿರದ ಎರಡು ನೂರು ಆರವತ್ತೈದು ಲಕ್ಷಗಳು ಮಾತ್ರ) ಅಂದಾಜು ವೆಚ್ಚದಲ್ಲಿ ಯೋಜನೆಯನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಕೊಳವೆ ನೀರು ಸರಬರಾಜು ಯೋಜನೆಯಡಿ ಕೈಗೆತ್ತಿಕೊಳ್ಳಲು, ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

(1) ಸದರಿ ಯೋಜನೆಯನ್ನು ನಿಗಧಿತ ವೇಳೆಯಲ್ಲಿ ಪೂರ್ಣಗೊಳಿಸುವುದು.

(2) ಸದರಿ ಕಾಮಗಾರಿಯನ್ನು ಕೈಗೊಳ್ಳುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ನಿಯಮ 2000ನ್ನು ಪಾಲಿಸುವುದು.

(3) ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡತಕ್ಕದ್ದಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:FD 508 Exp-9/ 2006 ದಿನಾಂಕ:19-9-2006ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1640

**ಸಿ.ಟಿ. ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**ವಿಷಯ:** ಶಿರಾಳಕೊಪ್ಪ ಪಟ್ಟಣಕ್ಕೆ ಹೆಚ್ಚುವರಿ ವಿತರಣಾ ವ್ಯವಸ್ಥೆ ಕಲ್ಪಿಸಲು ಹಾಗೂ ಮೇಲ್ಮಟ್ಟದ ಜಲಸಂಗ್ರಹಾಗಾರಗಳ ದುರಸ್ಥಿ ಕಾರ್ಯಕ್ಕೆ ರೂ.87.00 ಲಕ್ಷಗಳ ಅಂದಾಜು ಮೊತ್ತಕ್ಕೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1) ಅಧ್ಯಕ್ಷರು ಮತ್ತು ವ್ಯ.ನಿ. ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರು ರವರ ಪತ್ರ ಸಂಖ್ಯೆ: ಕಜಮಂ/ತಾಂತ್ರಿಕ/ತಾಂಸ-5/ಸಅ-8/2007-08/ 284 ದಿ:25-4-2007.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಶಿರಾಳಕೊಪ್ಪ ಪಟ್ಟಣಕ್ಕೆ ಹೆಚ್ಚುವರಿ ವಿತರಣಾ ವ್ಯವಸ್ಥೆ ಕಲ್ಪಿಸಲು ಹಾಗೂ ಮೇಲ್ಮಟ್ಟದ ಜಲಸಂಗ್ರಹಾಗಾರಗಳ ದುರಸ್ಥಿ ಕಾರ್ಯಕ್ಕೆ ರೂ.87.00 ಲಕ್ಷಗಳ ಅಂದಾಜು ಮೊತ್ತಕ್ಕೆ ಆಡಳಿತಾತ್ಮಕ ಅನುಮೋದನೆ ನೀಡುಲು ಅಧ್ಯಕ್ಷರು ಮತ್ತು ವ್ಯವಸ್ಥಾಪ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ,ಬೆಂಗಳೂರು ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಶಿರಾಳಕೊಪ್ಪ ಪಟ್ಟಣಕ್ಕೆ ನೀರು ಸರಬರಾಜು ಮಾಡಲು ರೂ.696.51 ಲಕ್ಷಗಳ ಯೋಜನೆಗೆ ಮಂಜೂರಾತಿ ದೊರೆತ್ತಿದ್ದು, ಯೋಜನೆಯ ವಿವಿದ ಕಾಮಗಾರಿಗಳು ಪ್ರಗತಿಯಲ್ಲಿರುತ್ತವೆ. ಯೋಜನೆಯಂತೆ ಪಟ್ಟಣದ ವಿವಿಧ ಭಾಗಗಳಿಗೆ ಹಾಲಿ ಇರುವ 3 ಹಾಗೂ ಹೊಸದಾಗಿ ನಿರ್ಮಾಣಗೊಂಡಿರುವ 1 ಒಟ್ಟು 4 ಮೇಲ್ಮಟ್ಟದ ಜಲಸಂಗ್ರಹಾಗಾರಗಳಿದ್ದು, ಸುಮಾರು 23.91 ಕಿ.ಮೀ. ವಿತರಣಾ ಕೊಳವೆ ಮಾರ್ಗವನ್ನು ಅಳವಡಿಸಲಾಗಿದೆ, ಹಾಗೂ ಹಾಲಿ ಇರುವ ವ್ಯವಸ್ಥೆಯು ಹಳೆಯದಾಗಿದ್ದು ಪಟ್ಟಣದ ಎಲ್ಲಾ ಭಾಗಗಳಿಗೆ ಸಾಕಾಗುತ್ತಿಲ್ಲ. ಇದಲ್ಲದೇ ಪಟ್ಟಣದ ಹೊರ ವಲಯದಲ್ಲಿ ವಿತರಣಾ ವ್ಯವಸ್ಥೆಯು ಸಹಾ ಇರುವುದಿಲ್ಲ. ಹಾಲಿ ಶಿರಾಳಾಕೊಪ್ಪ ಯೋಜನೆಯಡಿಯಲ್ಲಿ ಅಳವಡಿಸುತ್ತಿರುವ 200mm ವ್ಯಾಸದ DI ಕೊಳವೆ ಮಾರ್ಗವನ್ನು ಪಟ್ಟಣದಲ್ಲಿ ತುಂಬು ಹೊಂಡದವರೆಗೆ ವಿಸ್ತರಿಸಲು ಉದ್ದೇಶಿಸಲಾಗಿದೆ. ಈ ಎಲ್ಲಾ ಕಾಮಗಾರಿಗಳು ಪ್ರಸ್ತುತ ಕಾರ್ಯರೂಪದಲ್ಲಿರುವ ಶಿರಾಳಾಕೊಪ್ಪ ತ್ವರಿತ ನೀರು ಸರಬರಾಜು ಯೋಜನೆಯಡಿ ಸೇರದೆ ಇರುವುದರಿಂದ ಈ ಕೆಲಸಗಳನ್ನು ತುರ್ತಾಗಿ ಕೈಗೊಳ್ಳಲು ರೂ.87.00 ಲಕ್ಷಗಳ ಅಂದಾಜು ಪಟ್ಟಿಯನ್ನು ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ಬೆಂಗಳೂರು ರವರು ಸಲ್ಲಿಸಿರುತ್ತಾರೆ.

ಮಂಡಳಿಯ 2007-08 ನೇ ಸಾಲಿನ ಅನುಮೋದಿತ ಕ್ರಿಯಾ ಯೋಜನೆಯಡಿಯಲ್ಲಿ ಈ ಯೋಜನೆಗೆ ರೂ.29.00 ಲಕ್ಷಗಳ ಅನುವು ಮಾಡಲಾಗಿದೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 19 ಯುಡಬ್ಲ್ಯೂಎಸ್ 2007, ಬೆಂಗಳೂರು, ದಿನಾಂಕ:22ನೇ ಆಗಸ್ಟ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಶಿರಾಳಾಕೊಪ್ಪ ಪಟ್ಟಣಕ್ಕೆ ಹೆಚ್ಚುವರಿ ವಿತರಣಾ ವ್ಯವಸ್ಥೆ ಕಲ್ಪಿಸಲು ಹಾಗೂ ಮೇಲ್ಮಟ್ಟದ ಜಲಸಂಗ್ರಹಾಗಾರಗಳ ದುರಸ್ಥಿ ಕಾರ್ಯವನ್ನು ಅಂದಾಜು ರೂ.87.00 ಲಕ್ಷಗಳಲ್ಲಿ (ಎಂಭತ್ತೇಳು ಲಕ್ಷಗಳು ಮಾತ್ರ) ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಕೊಳವೆ ನೀರು ಸರಬರಾಜು

ಯೋಜನೆ ಅಡಿಯಲ್ಲಿ ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗೊಳಪಟ್ಟು ಆಡಳಿತಾತ್ಮಕ ಮಂಜೂರಾತಿಯನ್ನು ನೀಡಿದೆ.

(1) ಸದರಿ ಯೋಜನೆಯನ್ನು ನಿಗದಿತ ವೇಳೆಯಲ್ಲಿ ಪೂರ್ಣಗೊಳಿಸುವುದು.

(2) ಸದರಿ ಕಾಮಗಾರಿಯನ್ನು ಕೈಗೊಳ್ಳುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ನಿಯಮ 2000ನ್ನು ಪಾಲಿಸುವುದು.

(3) ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡಕೂಡದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಟಿಎಫ್‌ಪಿ 2002 ದಿನಾಂಕ: 20–1–2003ರಲ್ಲಿ ಸರ್ಕಾರದ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1684

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

**ವಿಷಯ:** ಬಳ್ಳಾರಿ ನಗರದ ವಿಸ್ತ್ರತ ಬಡಾವಣೆಗಳು ಹಾಗೂ ಗ್ರಾಮಗಳಿಗೆ ಒಳಚರಂಡಿ ವ್ಯವಸ್ಥೆ ಕಲ್ಪಿಸುವ ಕಾಮಗಾರಿ ಅಂದಾಜು ಮೊತ್ತ ರೂ. 499.00 ಲಕ್ಷಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1) ಅಧ್ಯಕ್ಷರು ಮತ್ತು ವ್ಯ.ನಿ. ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರುರವರ ಪತ್ರ ಸಂಖ್ಯೆ: ಕಜಮಂ/ಮುಅ(ಉ)/ಉಮುಅ–1/ತಾಸ–1/ಸಅ–6/ಬಳ್ಳಾರಿ/2007–08:88ರ ದಿ: 17–8–2007.

2) ದಿನಾಂಕ 27–7–2007ರ ಕ್ರಿಯಾ ಯೋಜನೆಯ ಸರ್ಕಾರಿ ಆದೇಶ ಸಂಖ್ಯೆ: ನಅಇ: 76: ಯು.ಎಂ.ಎಸ್. 2007ರ.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ಬೆಂಗಳೂರುರವರು, ಬಳ್ಳಾರಿ ನಗರದ ವಿಸ್ತ್ರತ ಬಡಾವಣೆಗಳು ಹಾಗೂ ಗ್ರಾಮಗಳಿಗೆ ಒಳಚರಂಡಿ ವ್ಯವಸ್ಥೆ ಕಲ್ಪಿಸುವ ಕಾಮಗಾರಿ ಅಂದಾಜು ಮೊತ್ತ ರೂ. 499.00 ಲಕ್ಷಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಬಳ್ಳಾರಿ ನಗರವು ಜಿಲ್ಲಾ ಕೇಂದ್ರವಾಗಿದ್ದು, ನಗರದ ಜನಸಂಖ್ಯೆ 2001ರ ಜನಗಣತಿ ಪ್ರಕಾರ 3,17,000 ಇದ್ದು, ಪ್ರಸ್ತುತ 3,80,000 ಆಗಿರುತ್ತದೆ. ಈ ನಗರಕ್ಕೆ ಮೊದಲನೇ ಹಂತದ ಒಳಚರಂಡಿ ಯೋಜನೆಯು 1978ರಲ್ಲಿ ಪೂರ್ಣಗೊಂಡಿದ್ದು, 2ನೇ ಹಂತದ ಒಳಚರಂಡಿ ಯೋಜನೆಗೆ ರೂ. 5755.55 ಲಕ್ಷಗಳ ಆಡಳಿತಾತ್ಮಕ ಅನುಮೋದನೆಯನ್ನು ಸರ್ಕಾರಿ ಆದೇಶ ಸಂಖ್ಯೆ UDD 01 UDS 2000, ದಿನಾಂಕ: 18–4–2000ದಲ್ಲಿ ನೀಡಲಾಗಿದೆ. ಈ ಯೋಜನೆಯ ಮೊದಲನೇ ಭಾಗವನ್ನು ಡಿಸೆಂಬರ್/2004ರಲ್ಲಿ ಪೂರ್ಣಗೊಳಿಸಿ ಚಾಲನೆಗೊಳಿಸಲಾಗಿದೆ. 2ನೇ ಭಾಗದ ಕಾಮಗಾರಿಯ ಟೆಂಡರ್ ಪ್ರಕ್ರಿಯೆಯು ಚಾಲನೆಯಲ್ಲಿದೆ.

ಔದ್ಯೋಗಿಕರಣ ಮತ್ತು ವ್ಯಾಪಕ ಗಣಿ ಚಟುವಟಿಕೆಗಳಿಂದಾಗಿ ಬಳ್ಳಾರಿ ನಗರದ ಜನಸಂಖ್ಯೆ ಶೀಘ್ರವಾಗಿ ಹೆಚ್ಚುತ್ತಿದ್ದು, ಈ ಸ್ಥಳೀಯ ಸಂಸ್ಥೆಯನ್ನು ಮೇಲ್ದರ್ಜೆಗೆ ಏರಿಸುವಾಗ ಈ ಕೆಳಕಂಡ ಗ್ರಾಮೀಣ ಪ್ರದೇಶಗಳು ಹಾಗೂ ಹೊಸ ಬಡಾವಣೆಗಳು ಬಳ್ಳಾರಿ ನಗರ ಸಭೆ ವ್ಯಾಪ್ತಿಗೆ ಒಳಪಟ್ಟಿದ್ದು, ಇವುಗಳಿಗೆ ಒಳಚರಂಡಿ ವ್ಯವಸ್ಥೆಯನ್ನು ಒದಗಿಸಬೇಕಾಗಿದೆ. (1) ಕಾರ್ಕಲ್‌ತೋಟ (2) ಗುಗ್ಗರಹಟ್ಟಿ (3) ಅಂದ್ರಾಳು (4) ಗೋನಾಲು (5) ಬಿಸಲಹಳ್ಳಿ (6) ರೇಣುಕಾನಗರ, ತಲೂರ ರೋಡ್ (7) ಹನುಮಯ್ಯ ಕಾಲೋನಿ (8) ಮುಂಡರಗಿ ಸದರಿ ಅಂದಾಜು ಪಟ್ಟಿಯನ್ನು 2007–08ನೇ ಸಾಲಿನ ಮಂಡಳಿಯ ಮತ್ತು ಲೋಕೋಪಯೋಗಿ ಇಲಾಖೆಯ ದರಪಟ್ಟಿಯ ಪ್ರಕಾರ ರೂ. 499.00 ಲಕ್ಷಗಳಿಗೆ ತಯಾರಿಸಿ, ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ತೆಗೆದುಕೊಳ್ಳಲು ಉದ್ದೇಶಿಸಿದೆ.

| | | |
|---|---|---|
| ಸರ್ಕಾರದ ಅನುದಾನ | (20%) | ರೂ. 99.80 ಲಕ್ಷಗಳು |
| ಆರ್ಥಿಕ ಸಂಸ್ಥೆಗಳಿಂದ ಸಾಲ | (50%) | ರೂ. 249.50 ಲಕ್ಷಗಳು |
| ಸ್ಥಳೀಯ ಸಂಸ್ಥೆಗಳ ಪಾಲು | (30%) | ರೂ. 149.70 ಲಕ್ಷಗಳು |
| **ಒಟ್ಟು** | | **ರೂ.499.00 ಲಕ್ಷಗಳು** |

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಈ ಯೋಜನೆಗೆ ಮಂಡಳಿಯ ಅನುಮೋದಿತ 2007–08ನೇ ಸಾಲಿನ ಕ್ರಿಯಾ ಯೋಜನೆಯಲ್ಲಿ ಯೋಜನೆಯಲ್ಲಿ ಯೋಜನೆಯ ಅಂದಾಜು ಮೊತ್ತ ರೂ.490.00 ಎಂದು ನಮೂದಿಸಿ, ಪ್ರಸ್ತುತ ಸಾಲಿನಲ್ಲಿ ರೂ. 163.00 ಲಕ್ಷಗಳನ್ನು ಒದಗಿಸಲಾಗಿದೆ.

ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ಬೆಂಗಳೂರುರವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 10 ಯುಡಿಎಸ್ 2007, ಬೆಂಗಳೂರು, ದಿನಾಂಕ: 23ನೇ ಆಗಸ್ಟ್ 2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಬಳ್ಳಾರಿ ನಗರದ ವಿಸ್ತ್ರತ ಬಡಾವಣೆಗಳು ಹಾಗೂ ಗ್ರಾಮಗಳಿಗೆ ಒಳಚರಂಡಿ ವ್ಯವಸ್ಥೆ ಕಲ್ಪಿಸುವ ಯೋಜನೆಯನ್ನು ಅಂದಾಜು ಮೊತ್ತ ರೂ. 499.00 ಲಕ್ಷಗಳಲ್ಲಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗೊಳಪಟ್ಟು ಆಡಳಿತಾತ್ಮಕ ಅನುಮೋದನೆ ನೀಡಿದೆ.

(1) ಸದರಿ ಯೋಜನೆಯನ್ನು ನಿಗದಿತ ವೇಳೆಯಲ್ಲಿ ಪೂರ್ಣಗೊಳಿಸುವುದು.
(2) ಸದರಿ ಕಾಮಗಾರಿಯನ್ನು ಕೈಗೊಳ್ಳುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ನಿಯಮ 2000ನ್ನು ಪಾಲಿಸುವುದು.
(3) ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡಕೂಡದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1688

**ಸಿ.ಟಿ. ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ವಿ. ದೇವರಾಜ್, ಪಿಸಿ ವೈರ್‌ಲೆಸ್ ಕೋಲಾರ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ವೈರ್‌ಲೆಸ್ ಬೆಂಗಳೂರು ಇವರ ಆದೇಶ ಸಂಖ್ಯೆ: ಇವಿ 2/ಸಿ/2004-05 ದಿನಾಂಕ:15-4-2006.
2) ಮೇಲ್ಮನವಿ ಪಾದಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ವೈರ್‌ಲೆಸ್, ಬೆಂಗಳೂರು ಇವರ ಆದೇಶ ಸಂಖ್ಯೆ:ಸಿಬ್ಬಂದಿ/1/ಅಪೀಲು/2006-07 ದಿನಾಂಕ:18-9-2006
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು/2/148/2006-07 ದಿನಾಂಕ:25-7-2007

**ಪ್ರಸ್ತಾವನೆ:**

ಶ್ರೀ ವಿ. ದೇವರಾಜ್, ಪಿಸಿ ವೈರ್‌ಲೆಸ್ ಕೋಲಾರ ಜಿಲ್ಲೆ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

1) ನಿಮ್ಮ ಪತ್ನಿಯಾದ ಶ್ರೀಮತಿ ವಿಶಾಲಾಕ್ಷಿ ರವರ ವರದಕ್ಷಿಣೆ ಸಾವಿನ ಹಿನ್ನೆಲೆಯಲ್ಲಿ ನೀವು ಕೋಲಾರ ಜಿಲ್ಲೆಯ ಗಲ್‌ಪೇಟೆ ಪೊಲೀಸ್ ಠಾಣೆಯ ಮೊ.ಸಂ. 50/04 ಕಲಂ 498(ಎ), 302-304ಬಿ ಜೊತೆಗೆ 34 ಐಪಿಸಿ ಮತ್ತು ಕಲಂ 3-4 ಡಿ.ಪಿ.ಆಕ್ಟ್‌ನಲ್ಲಿ ಭಾಗಿಯಾಗಿದ್ದು, ನಿಮ್ಮ ವಿರುದ್ಧ ಪ್ರಕರಣ ದಾಖಲಾಗಿದ್ದು, ನೀವು ಕರ್ತವ್ಯದಲ್ಲಿ ದುರ್ನಡತೆ ಎಸಗಿರುತ್ತೀರಿ.

2) ನಿಮ್ಮ ವಿರುದ್ಧ ಕೋಲಾರ ಜಿಲ್ಲೆಯ ಗಲ್‌ಪೇಟೆ ಪೊಲೀಸ್ ಠಾಣೆಯ ಮೊ.ಸಂ.50/04 ರಲ್ಲಿ ಪ್ರಕರಣ ದಾಖಲಾಗಿದ್ದು, ನೀವು ದಿ:24-05-2004 ರಿಂದ 29-6-2005ರ ವರೆಗೂ ಯಾವುದೇ ರಜೆಯನ್ನು ಮಂಜೂರು ಮಾಡಿಕೊಳ್ಳದೇ ಕರ್ತವ್ಯಕ್ಕೆ ಗೈರುಹಾಜರಾಗಿ ತಲೆ ಮರೆಸಿಕೊಂಡಿರುತ್ತೀರಿ.

3) ನಿಮಗೆ ದಿ:30-11-2004 ರಂದು ಕಾರಣ ಕೇಳುವ ನೋಟೀಸ್ (ಷೋಕಾಸ್ ನೋಟೀಸ್ ಜಾರಿ ಮಾಡಲು ಬಂದಾಗ ನೀವು ಇಲಾಖೆಗೆ ನೀಡಿದ ವಿಳಾಸದಲ್ಲಿ ಇಲ್ಲದೆ ಮನೆಗೆ ಬೀಗ ಹಾಕಿಕೊಂಡು ಹೋಗಿ ಷೋಕಾಸ್ ನೋಟೀಸ್ ನಿಮ್ಮ ಮನೆಯ ಬಾಗಿಲಿಗೆ ಅಂಟಿಸಿದ್ದರೂ ಸಹ ನೀವು ಅದಕ್ಕೆ ಸಮಜಾಯಿಷಿ ನೀಡದೇ ಮತ್ತು ಕರ್ತವ್ಯಕ್ಕೂ ಹಾಜರಾಗಿದೆ ಕರ್ತವ್ಯದಲ್ಲಿ ಉದ್ಧಟತನ ಮತ್ತು ಉದಾಸೀನತೆ ತೋರಿಸಿರುತ್ತೀರಿ.)

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ವೈರ್‌ಲೆಸ್ ಕೋಲಾರ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 15-4-2006ರ ಆದೇಶದಲ್ಲಿ ಅರ್ಜಿದಾರರ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗುವಂತೆ ತಡೆಹಿಡಿಯಲಾಗಿದೆ, ಗೈರುಹಾಜರಿ ಅವಧಿಯನ್ನು ವೇತನ ರಹಿತ ರಜೆಯೆಂದು, ಅಮಾನತ್ತಿನ ಅವಧಿಯನ್ನು ಅಮಾನತ್ತು ಎಂದು ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ವೈರ್‌ಲೆಸ್, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶ ಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ: 18–9–2006ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು 4 ತಿಂಗಳಿಗಿಂತ ಹೆಚ್ಚಿನ ಅವಧಿಗೆ ಗೈರುಹಾಜರಾಗಿದ್ದು, ಈ ತಪ್ಪಿಗೆ ನೌಕರರನ್ನು ಸೇವೆಯಿಂದಲೇ ವಜಾಮಾಡುವ ಶಿಕ್ಷೆ ವಿಧಿಸಬಹುದಾಗಿದೆ, ಆದರೆ ಈ ಪ್ರಕರಣದಲ್ಲಿ ಶಿಸ್ತು ಪ್ರಾಧಿಕಾರ ಕಡಿಮೆ ಪ್ರಮಾಣದ ಶಿಕ್ಷೆ ವಿಧಿಸಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 265 ಪೊಸಿಅ 2007 ಬೆಂಗಳೂರು, ದಿನಾಂಕ: 26ನೇ ಅಕ್ಟೋಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವಿ. ದೇವರಾಜ್, ಪಿಸಿ ವೈರ್‌ಲೆಸ್ ಕೋಲಾರ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2006

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ,

(ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ನಾಗರಾಜು, ಪಿಸಿ–5704, ಬ್ಯಾಟರಾಯನಪುರ ಪೊಲೀಸ್ ಠಾಣೆ, ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮಿಷನರ್/ ಪಶ್ಚಿಮ ವಲಯ ಬೆಂಗಳೂರು ಇವರ ಆದೇಶ ಸಂಖ್ಯೆ: ಡಿಇ/ ಡಿಸಿಪಿ/ಪ/10/97 ದಿನಾಂಕ: 15–1–1998.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮಿಷನರ್ ಸಿಎಆರ್, ಬೆಂಗಳೂರು ಇವರ ಆದೇಶ ಸಂಖ್ಯೆ: 45/ಅಪೀಲು/2000–01 ದಿನಾಂಕ: 18–1–2002.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 16–6–2002.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು/ 2/33/2002–03 ದಿನಾಂಕ: 30–7–2007.

**ಪ್ರಸ್ತಾವನೆ:**

ಶ್ರೀ ನಾಗರಾಜು, ಪಿಸಿ–5704, ಬ್ಯಾಟರಾಯನಪುರ ಪೊಲೀಸ್ ಠಾಣೆ, ಬೆಂಗಳೂರು ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

1. ದಿ: 2–4–97 ರಂದು 'ಬಿ' ಪಾಳಿಯ ಕರ್ತವ್ಯವಿದ್ದರಿಂದ ಮಧ್ಯಾಹ್ನ 1 ರಿಂದ ರಾತ್ರಿ 8–30 ಗಂಟೆಯವರೆಗೆ ಬಂತರಪಾಳ್ಯದಲ್ಲಿ ಪಾಯಿಂಟ್‌ನಲ್ಲಿರುವಂತೆ ಕರ್ತವ್ಯಕ್ಕೆ ನೇಮಿಸಿದ್ದರೂ ಸಹ ಸಂಜೆ 6–15ಗಂಟೆಗೆ ಬೀಟ್‌ನಲ್ಲಿ ಗೈರುಹಾಜರಾಗಿ ಪೊಲೀಸ್ ಠಾಣೆಯ ಎದುರಿಗಿರುವ ಶ್ರೀ ಕೃಷ್ಣ ರೆಸ್ಟೋರೆಂಟ್ ಹೋಟಲ್ ಎದುರು ಇರುತ್ತೀರಿ.
2. ನಂತರ ಪಿಎಸ್‌ಐ (ಕಾ ಮತ್ತು ಸು)ರವರ ಕೋಣೆಗೆ ನುಗ್ಗಿ ನೀವು 5 ದಿನ ಗೈರು ಹಾಜರಾಗಿರುವುದಕ್ಕೆ ಸಮಜಾಯಿಷಿಯಲ್ಲಿ ಸಿ.ಎಲ್. ಮಂಜೂರಾತಿಗೆ ಕೋರಿದ್ದರೂ ಸಹ ಎಲ್.ಡಬ್ಲ್ಯೂ.ಎ.ಗೆ ಬರೆದಿದ್ದೀಯ ಎಂದು ಕೇಳಿ ಉದ್ದಟತನದಿಂದ ವರ್ತಿಸಿ, ಹಿರಿ ಅಧಿಕಾರಿಗಳ ಬಳಿ ಅಗೌರವ ಹಾಗೂ ಅಶಿಸ್ತಿನಿಂದ ವರ್ತಿಸಿರುತ್ತೀರಿ.
3. ದಿ: 2–4–97ರ ಸಂಜೆ 7–4 ಗಂಟೆಯಲ್ಲಿ ಪೊಲೀಸ್ ಇನ್ಸ್‌ಪೆಕ್ಟರ್, ಬ್ಯಾಟರಾಯನಪುರ ಠಾಣೆ ರವರ ಕೊಠಡಿಗೆ ಬಂದು ಅನಧಿಕೃತ ಗೈರುಹಾಜರಾದ ದಿನಗಳನ್ನು ರಜೆ ಎಂದು ಮಂಜೂರು ಮಾಡದೇ ಇದ್ದರೆ ತಾನು ಹೊರ ಹೋಗುವುದಿಲ್ಲವೆಂದು ಹೇಳುತ್ತಾ ಒಳಗೆ ಕುಳಿತಿದ್ದು, ತೊಂದರೆ ಬಗ್ಗೆ ಮೇಲಾಧಿಕಾರಿಗಳಿಗೆ ಅಪೀಲು ಹೋಗಲು ತಿಳಿಸಿದ್ದಾಗ್ಯೂ ಮೇಲಾಧಿಕಾರಿಗಳ ಬಳಿ ಅಸಭ್ಯವಾಗಿ ನಡೆದುಕೊಂಡು ದುರ್ನಡತೆ ಪ್ರದರ್ಶಿಸಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮಿಷನರ್/ಪಶ್ಚಿಮ ವಲಯ ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ: 15-1-1998ರ ಆದೇಶದಲ್ಲಿ ಅರ್ಜಿದಾರ ಪಿಸಿ-5704 ಎಸ್.ನಾಗರಾಜ, ಬ್ಯಾಟರಾಯನಪುರ ಠಾಣೆ (ಹಾಲಿ ಕಲಾಸಿಪಾಳ್ಯ ಠಾಣೆ) ರವರಿಗೆ ವಾರ್ಷಿಕ ವೇತನದ ಬಡ್ತಿಯನ್ನು ಮುಂದಿನ ಬಡ್ತಿಗೆ ಧಕ್ಕೆಯಾ ಗುವಂತೆ 2 ವರ್ಷಗಳ ಕಾಲ ಮುಂದೂಡಿದೆ. ಇವರ ಅಮಾನತ್ತಿನ ಅವಧಿ ದಿ:21-4-97 ರಿಂದ 11-12-97 ರವರೆಗಿನ 235 ದಿನಗಳಲ್ಲಿ ದಿ:21-4-97 ರಿಂದ 25-5-97 ರವರೆಗಿನ 35 ದಿನ ಗಳನ್ನು ಪರಿವರ್ತಿತ ರಜೆಯನ್ನಾಗಿ, ದಿ:26-5-97 ರಿಂದ 20-7-97 ರವರೆಗಿನ 56 ದಿನಗಳನ್ನು ಗಳಿಕೆ ರಜೆಯನ್ನಾಗಿ ಹಾಗೂ ಉಳಿದ ದಿ:21-7-97 ರಿಂದ 11-12-97 ರವರೆಗಿನ 154 ದಿನ ಗಳನ್ನು ಸಂಬಳ ರಹಿತ ರಜೆಯನ್ನಾಗಿ ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮಿಷನರ್ ಸಿಎಆರ್, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ: 18-1-200ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ವಿಧಿಸಿರುವ ವಾಗ್ದಂಡನೆಯು ಅಲ್ಪ ಪ್ರಮಾಣದ ಶಿಕ್ಷೆಯ ವ್ಯಾಪ್ತಿಯಲ್ಲಿ ಬರುವುದರಿಂದ ಇವರ ಅಮಾನತ್ತಿನ ಅವಧಿಯನ್ನು ಕರ್ತವ್ಯದ ಅವಧಿಯೆಂದು ಪರಿಗಣಿಸಲು ಅವಕಾಶವಿರುವುದಿಲ್ಲ ಹಾಗೂ ಪುನರ್ ಪರಿಸೀಲಿಸಲು ಯಾವುದೇ ಹೊಸ ಅಂಶಗಳು ಕಂಡುಬರುತ್ತಿಲ್ಲ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 285 ಪೊಸಿಅ 2007 ಬೆಂಗಳೂರು, ದಿನಾಂಕ: 23ನೇ ಅಕ್ಟೋಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ನಾಗರಾಜು, ಪಿಸಿ-5704, ಬ್ಯಾಟರಾಯನಪುರ ಪೊಲೀಸ್ ಠಾಣೆ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2004

**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ,
(ಪೊಲೀಸ್ ಸೇವೆಗಳು)

**ವಿಷಯ:**ಶ್ರೀ ಲಕ್ಷ್ಮೀನಾರಾಯಣ, ಪಿ.ಎಸ್.ಐ. ಈ ಹಿಂದೆ ಲಿಂಗಸೂರ ಠಾಣೆ ರಾಯಚೂರು ಜಿಲ್ಲೆ ಹಾಲಿ ಬಬಲೇಶ್ವರ ಪೊಲೀಸ್ ಠಾಣೆ, ಬಿಜಾಪುರ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು ಈಶಾನ್ಯ ವಲಯ, ಗುಲ್ಬರ್ಗಾ ಇವರ ಆದೇಶ ಸಂಖ್ಯೆ: ಇವಿ/02/ಈವ/2006 ದಿನಾಂಕ: 08-06-2006
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು (6)/47/2006-07 ದಿನಾಂಕ: 27-02-2007
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 13-04-2007
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2)10/2007-08 ದಿನಾಂಕ:19-06-2007

**ಪ್ರಸ್ತಾವನೆ:**

ಶ್ರೀ ಲಕ್ಷ್ಮೀನಾರಾಯಣ, ಪಿ.ಎಸ್.ಐ. ಈ ಹಿಂದೆ ಲಿಂಗಸೂರ ಠಾಣೆ ರಾಯಚೂರು ಜಿಲ್ಲೆ ಹಾಲಿ ಬಬಲೇಶ್ವರ ಪೊಲೀಸ್ ಠಾಣೆ, ಬಿಜಾಪುರ ಜಿಲ್ಲೆ ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

1) ದಿ: 04-12-2004ರಂದು ಲಿಂಗಸೂಗುರು ಠಾಣೆ ಗುನ್ನೆ ನಂ.255/04, ಕಲಂ 341, 323, 504, 354, 448, ಸಂ.34 ಐಪಿಸಿ ಪ್ರಕರಣದಲ್ಲಿನ ಆರೋಪಿಗಳಾದ ಶ್ರೀಮತಿ.ಬಸಲಿಂಗಮ್ಮ ಸಾಯ:ರಡೋಣಿ ಈಕೆಯನ್ನು ಠಾಣೆಗೆ ಕರೆದುಕೊಂಡು ಬಂದು, ಅದೇ ದಿವಸ ಪುನ: ಅವರ ಸ್ವಗ್ರಾಮಕ್ಕೆ ಸರ್ಕಾರಿ ಜೀಪಿನಲ್ಲಿ ಕರೆದುಕೊಂಡು ಹೋಗಿ ಬಿಟ್ಟು ಬಂದಿದ್ದು, ಇದರಿಂದಾಗಿ ಆರೋಪಿತರಿಗೆ ಪೊಲೀಸರು ಬೆಂಬಲ ಕೊಡುತ್ತಿದ್ದಾರೆಂದು ಸಾರ್ವಜನಿಕರಲ್ಲಿ ಪೊಲೀಸರ ಬಗ್ಗೆ ಅವಿಶ್ವಾಸ ಉಂಟಾಗುವಂತೆ ಮಾಡಿದ ಬಗ್ಗೆ.

2) ಸದರಿ ಪ್ರಕರಣದಲ್ಲಿ ಪ್ರಥಮ ವರ್ತಮಾನ ವರದಿಯಲ್ಲಿ ಕಲಂ 342, ಐಪಿಸಿ ಯನ್ನು ಅಳವಡಿಸದೇ ಇರುವ ಬಗ್ಗೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು ಈಶಾನ್ಯ ವಲಯ, ಗುಲ್ಬರ್ಗಾ ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 08-06-2006ರ ಆದೇಶದಲ್ಲಿ ಅರ್ಜಿದಾರರ ಮುಂಬರುವ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಯ ಮೇಲೆ ಪರಿಣಾಮ ಬೀರದಂತೆ ಮಾಡಿ, 2 ವರ್ಷಗಳ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು ಇವರು ಶಿಸ್ತುಪ್ರಾಧಿಕಾರಿ ವಿಧಿಸಿರುವ ಶಿಕ್ಷೆಯು ಹೆಚ್ಚಿನದಾಗಿರುವುದರಿಂದ ಆದೇಶವನ್ನು ಮಾರ್ಪಡಿಸಿ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಯ ಮೇಲೆ ಪರಿಣಾಮ ಬೀರದಂತೆ ಒಂದು ವರ್ಷ ಕಾಲ ಮುಂದೂಡಲಾಗಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರ ಮೇಲಿನ ಆರೋಪಗಳು ಸಾಬೀತಾಗಿರುತ್ತದೆ. ಶಿಸ್ತು ಪ್ರಾಧಿಕಾರಿ ವಿಧಿಸಿದ ಶಿಕ್ಷೆಯು ಹೆಚ್ಚಿನದ್ದಾಗಿರುವುದರಿಂದ ಮೇಲ್ಮನವಿ ಪ್ರಾಧಿಕಾರವು ಶಿಕ್ಷೆಯನ್ನು ಮಾರ್ಪಡಿಸಿರುತ್ತದೆ. ಆದ್ದರಿಂದ, ಮೇಲ್ಮನವಿ ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 195 ಪೊಸಿಅ 2007 ಬೆಂಗಳೂರು, ದಿನಾಂಕ: 24ನೇ ಸೆಪ್ಟೆಂಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಲಕ್ಷ್ಮೀನಾರಾಯಣ, ಪಿ.ಎಸ್.ಐ. ಈ ಹಿಂದೆ ಲಿಂಗಸೂರ ಠಾಣೆ ರಾಯಚೂರು ಜಿಲ್ಲೆ ಹಾಲಿ ಬಬಲೇಶ್ವರ ಪೊಲೀಸ್ ಠಾಣೆ, ಬಿಜಾಪುರ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1775

**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ,
(ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಡಿ. ವೆಂಕೋಬ, ಪಿಎಸ್ಐ., ಡಿಸಿಐಬಿ ಘಟಕ ಕೊಪ್ಪಳ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ ಗುಲ್ಬರ್ಗಾ ಇವರ ಆದೇಶ ಸಂಖ್ಯೆ: ಇವಿ/21/2005 /268/ಈವ/2006 ದಿನಾಂಕ: 27-04-2006.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿಜಿ ಮತ್ತು ಐಜಿಪಿ ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು (6) 19/2006-07 ದಿನಾಂಕ: 30-09-2006

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 5-12-2006

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2)139/2006-07ದಿನಾಂಕ: 24-03-2007

**ಪ್ರಸ್ತಾವನೆ:**

ಶ್ರೀ ಡಿ. ವೆಂಕೋಬ, ಪಿಎಸ್ಐ., ಡಿಸಿಐಬಿ ಘಟಕ ಕೊಪ್ಪಳ ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ಶ್ರೀ ಡಿ. ವೆಂಕೋಬ, ಪಿಎಸ್‌ಐ.(ಅವಿ) ಗಂಗಾವತಿ ನಗರ ಠಾಣೆ ರವರೇ, ಗಂಗಾವತಿ ನಗರ ಠಾಣೆಯ ಪ್ರಕರಣ ಸಿಸಿನಂ:219/2005 ರಲ್ಲಿ ಆರೋಪಿ ವಿನೋದ್ ಕುಮಾರ್ ಮತ್ತು ಇತರರು ಕಲಂ: 379, 201 ಐಪಿಸಿ ಅಡಿಯಲ್ಲಿ ಅಪರಾಧ ಎಸಗಿರುವ ಬಗ್ಗೆ ದಾಖಲಾದ ಪ್ರಕರಣಕ್ಕೆ ಸಂಭಂದಿಸಿದಂತೆ ವಾಹನದ ಮಹಜರ್ ಪಂಚನಾಮೆಯಲ್ಲಿ ಶ್ರೀ ಪ್ರಸನ್ನಕುಮಾರ್ ಮತ್ತು ಭೀಮಾಶಂಕರ್ ಸಾಕ್ಷಿದಾರರ ಸಮಕ್ಷಮದಲ್ಲಿ ಸದರಿ ವಾಹನವನ್ನು ಜಪ್ತಿ ಮಾಡಿಕೊಂಡಿರುವುದಾಗಿ ತನಿಖಾ ದಾಖಲಾತಿಗಳಲ್ಲಿ ನಮೂದಿಸಿದ್ದು ಇರುತ್ತದೆ. ಆದರೆ ಸಾಕ್ಷಿದಾರರು ನ್ಯಾಯಾಲಯದ ವಿಚಾರಣೆ ಕಾಲಕ್ಕೆ ತಾವು ಸಹಿ ಮಾಡಿರುವುದಿಲ್ಲವೆಂದು ಹೇಳಿರುವರು. ನೀವು ಸಿಸಿ ನಂ: 180/05 ಕ್ಕೆ ಸಂಬಂದಿಸಿದ ಮಹಜರ್ ಪಂಚನಾಮ ಕಾಲಕ್ಕೆ ಸಹಿ ಮಾಡಿರುವುದಾಗಿ ಹೇಳಿಕೆ ನೀಡಿದ್ದು, ನೀವು ಸಾಕ್ಷಿದಾರರ ಖೊಟ್ಟಿ ಸಹಿಗಳನ್ನು ಸೃಷ್ಟಿಸಿ ನ್ಯಾಯಾಲಯಕ್ಕೆ ದೋಷಾರೋಪಣೆ ಪತ್ರ ಸಲ್ಲಿಸಿ ಘೋರ ಅಪರಾಧ ಎಸಗಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ ಗುಲ್ಬರ್ಗಾ ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ: 27-04-2006 ರ ಆದೇಶದಲ್ಲಿ ಅರ್ಜಿದಾರರ ವೇತನವನ್ನು ಪಿ.ಎಸ್.ಐ. ಹುದ್ದೆಯ ಕನಿಷ್ಟ ವೇತನ ಮಟ್ಟಕ್ಕೆ ಕೂಡಲೇ ಜಾರಿಗೆ ಬರುವಂತೆ ಇಳಿಸಿ ಹಾಗೂ ಮುಂಬರುವ ವಾರ್ಷಿಕ ವೇತನ ಬಡ್ತಿಗಳನ್ನು ಹೊಸದಾಗಿ ಗಳಿಸುವ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿಜಿ ಮತ್ತು ಐಜಿಪಿ ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ: 30-09-2006ರ ಆದೇಶದಲ್ಲಿ ಆಪಾದಿತ ಪೊಲೀಸ್ ಅಧಿಕಾರಿ ಯವರ ವೇತನವನ್ನು ಪಿ.ಎಸ್.ಐ. ಹುದ್ದೆಯ ಕನಿಷ್ಟ ಮಟ್ಟಕ್ಕೆ ಮೂರು ವರ್ಷಗಳ ಅವಧಿಗೆ ಇಳಿಸಲಾಗಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇಲಾಖಾ ವಿಚಾರಣೆಯಲ್ಲಿ ಎಸಗಿರುವ ಆರೋಪವು ನಿಸ್ಸಂಶಯವಾಗಿ ದೃಢಪಟ್ಟಿರುವುದರಿಂದ ಇವರ ಪರಿಷ್ಕರಣ ಮೇಲ್ಮನವಿಯನ್ನು ಪರಿಗಣಿಸಲು ಯಾವುದೇ ಹೊಸ ಅಂಶಗಳು ಕಾಣುತ್ತಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಮೇಲ್ಮನವಿ ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 222 ಪೊಸಿಅ 2007 ಬೆಂಗಳೂರು, ದಿನಾಂಕ: 04ನೇ ಅಕ್ಟೋಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಡಿ. ವೆಂಕೋಬ, ಪಿಎಸ್‌ಐ., ಡಿಸಿಐಬಿ ಘಟಕ ಕೊಪ್ಪಳ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1791

**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ,
(ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಸಿ.ಎಸ್. ಬೆನ್ನೂರ, ನಿವೃತ್ತ ಪಿ.ಐ.ರವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿಯ ಬಗ್ಗೆ

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ ಗುಲ್ಬರ್ಗಾ ಇವರ ಆದೇಶ ಸಂಖ್ಯೆ:ಇವಿ:11:ಈವ:1993/647:ಈವ:2002 ದಿನಾಂಕ: 26-12-2002
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿಜಿ ಮತ್ತು ಐಜಿಪಿ ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು (8)9/2004-05 ದಿನಾಂಕ: 26-10-2004
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 24-08-2006
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ (8)9/2004-05, ದಿನಾಂಕ: 01-06-2007

**ಪ್ರಸ್ತಾವನೆ:**

ಶ್ರೀ ಸಿ.ಎಸ್. ಬೆನ್ನೂರ, ನಿವೃತ್ತ ಪಿ.ಐ. ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

1) ದಿ: 06-06-1993ರಂದು ರಾತ್ರಿ 20.30ಕ್ಕೆ ಶ್ರೀ ಸಿ.ಎಸ್. ಬೆನ್ನೂರ, ಸಿಪಿಐ ಬಸವಕಲ್ಯಾಣ, ರವರು ತಮ್ಮ ಕಾರ್ಯಾಲಯದ ಬರಹಗಾರರಾದ ಸಿಪಿಸಿ-429 ಅಶೋಕ ಹಾಗೂ ಜಮಾದಾರ ಸುಭಾಷ್ ಇವರನ್ನು ಮನೆಗೆ ಕರೆಸಿ ಕುಡಿದ ಅಮಲಿನಲ್ಲಿ ಸಿಪಿಸಿ-429 ಅಶೋಕನಿಗೆ ಮುಷ್ಠಿಯಿಂದ ಹೊಡೆದಿದ್ದಕ್ಕೆ ಸದರಿಯವರು ನೀಡಿದ ಫಿರ್ಯಾದಿಯ ಮೇರೆಗೆ ನಿಮ್ಮ ವಿರುದ್ಧ ಬಸವಕಲ್ಯಾಣ ಠಾಣೆ ಗುನ್ನೆ ನಂ. 153:92 ಕಲಂ 341, 323, 504, 506, ಐ.ಪಿ.ಸಿ.ಯ ಅಡಿಯಲ್ಲಿ ಪ್ರಕರಣವು ದಾಖಲಾಗಿರುತ್ತದೆ.
2) ದಿ: 07-06-1993 ರಂದು ಸುಮಾರು 1.45ಗಂಟೆಗೆ ನೀವು ಕುಡಿದ ಅಮಲಿನಲ್ಲಿ ಮಫ್ತಿನಲ್ಲಿ ಕೈಯಲ್ಲಿ ಲಾಟಿಯನ್ನು ಹಿಡಿದುಕೊಂಡು ಡಾ:ಅಂಬೇಡ್ಕರ್ ವೃತ್ತ, ಬಸವಕಲ್ಯಾಣದಲ್ಲಿ ಊರಿಗೆ ಹೋಗಲು ನಿಂತಿದ್ದ ಸಿಪಿಸಿ-494 ಇವರನ್ನು ಹೊಡೆದು ಅತೀವ ಅಸಭ್ಯತನ ಹಾಗೂ ದುರ್ನಡತೆಯನ್ನು ಪ್ರದರ್ಶಿಸಿರುವಿರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ ಗುಲ್ಬರ್ಗಾ ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ: 26-12-2002ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಮಾಡಿ ಒಂದು ವರ್ಷ ಕಾಲ ಮುಂದೂಡಿ ಹಾಗೂ ಅಮಾನತ್ತಿನಲ್ಲಿರುವ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿಜಿ ಮತ್ತು ಐಜಿಪಿ ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸ ಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 26-10-2004ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಎಸಗಿರುವ ಆರೋಪವು ನಿಸ್ಸಂಶಯವಾಗಿ ಸಾಬೀತಾಗಿರುವುದರಿಂದ ಇವರ ಪರಿಷ್ಕರಣ ಮೇಲ್ಮನವಿಯಲ್ಲಿ ಹೊಸದಾಗಿ ಪರಿಶೀಲಿಸಬಹುದಾದ ಯಾವುದೇ ಅಂಶಗಳು ಕಂಡು ಬರುತ್ತಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 254 ಪೊಸಿಅ 2007 ಬೆಂಗಳೂರು, ದಿನಾಂಕ: 24ನೇ ಸೆಪ್ಟೆಂಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸಿ.ಎಸ್. ಬೆನ್ನೂರ, ನಿವೃತ್ತ ಪಿ.ಐ. ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1776

**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ,
(ಪೊಲೀಸ್ ಸೇವೆಗಳು)

**ವಿಷಯ:** ಎಂ.ಎಲ್. ಬಸವರಾಜು, ಸಿಪಿಸಿ-649 ತಾವರೆಕೆರೆ ಪೊಲೀಸ್ ಠಾಣೆ ಶ್ರೀ ಕೆ.ಸಿ. ನಂಜೇಗೌಡ -645, ಗುಬ್ಬಿ ಪೊಲೀಸ್ ಠಾಣೆ ಹಾಗೂ ಸೈಯದ್ ಮುಕ್ತಿಯಾರ್ ಪಿಸಿ-715, ತುಮಕೂರು ಜಿಲ್ಲೆ ರವರುಗಳು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು ತುಮಕೂರು ಇವರ ಆದೇಶ ಸಂಖ್ಯೆ: ಪನ್ಸಿ/ಡಿಇ/14/2003 ದಿನಾಂಕ:6-3-2004

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಐ.ಜಿ.ಪಿ.ಕೇಂದ್ರ ವಲಯ ಇವರ ಆದೇಶ ಸಂಖ್ಯೆ: ಅಪೀಲು/ 04/ 2004–05 ದಿನಾಂಕ:23–12–2004
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2)71/2005, ದಿನಾಂಕ:24–10–2005
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 70 ಸಿಎನ್ಎಸ್ 2007 ದಿನಾಂಕ: 20–7–2007

**ಪ್ರಸ್ತಾವನೆ:**

ಶ್ರೀ ಎಂ.ಎಲ್. ಬಸವರಾಜು, ಸಿಪಿಸಿ–649 ತಾವರೆಕೆರೆ ಪೊಲೀಸ್ ಠಾಣೆ ಶ್ರೀ ಕೆ.ಸಿ. ನಂಜೇಗೌಡ–645, ಗುಬ್ಬಿ ಪೊಲೀಸ್ ಠಾಣೆ ಹಾಗೂ ಸೈಯದ್ ಮುಕ್ತಿಯಾರ್ ಪಿಸಿ–715, ತುಮಕೂರು ಜಿಲ್ಲೆ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 6&8ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ದಿ: 19–4–2004ರ ಈ ಕಛೇರಿಯ ರೇಡಿಯೋ ಸಂದೇಶದಲ್ಲಿ ನಿಮ್ಮಗಳನ್ನು ದಿ: 28–4–2003 ರಿಂದ ನಾಲ್ಕು ತಿಂಗಳ ಕಾಲ ಪಿಡಿಎಂಎಸ್ ಯಲಹಂಕದಲ್ಲಿ ನಡೆಯುವ 49ನೇ ವಾಹನ ಚಾಲಕರ ಮೂಲ ತರಬೇತಿಗೆ ನಿಯೋಜಿಸಿದ್ದು, ಇವುಗಳು ದಿ: 28–4–2003ರಂದು ತರಬೇತಿ ಶಾಲೆಯಲ್ಲಿ ವರದಿ ಮಾಡಿಕೊಂಡು ದಿ: 29–4–2003ರಂದು ತರಬೇತಿಯಲ್ಲಿ ಆಸಕ್ತಿ ಇಲ್ಲವೆಂದು ತಿಳಿಸಿ ತರಬೇತಿ ಮಾಡದೆ ವಾಪಸ್ಸು ಬಂದು ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿಯನ್ನು ತೋರಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು ತುಮಕೂರು ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 6–3–2004ರ ಆದೇಶದಲ್ಲಿ ಅರ್ಜಿದಾರರುಗಳ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರುವಂತೆ ಒಂದು ವರ್ಷದ ಅವಧಿಗೆ ಮುಂದೂಡಿದ ಹಾಗೂ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಐ.ಜಿ.ಪಿ.ಕೇಂದ್ರ ವಲಯ ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸ ಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 23–12–2004ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರುಗಳಾದ ಎಂ.ಎಲ್.ಬಸವರಾಜು, ಶ್ರೀ ಕೆ.ಸಿ. ನಂಜೇಗೌಡ ಹಾಗೂ ಸೈಯದ್ ಮುಕ್ತಿಯಾರ್ ಇವರುಗಳು ಬುನಾದಿ ತರಬೇತಿ ಪೂರೈಸಿರುವುದಕ್ಕೆ ದೃಢೀಕರಣ ಪತ್ರವನ್ನು ನೀಡಿರುತ್ತಾರೆ. ಈ ಕಾರಣದಿಂದ ಮತ್ತೆ ಅದೇ ತರಬೇತಿಗೆ ಹಾಜರಾಗಿದ್ದು ಅದು ತಿಳಿದ ನಂತರ ಸಮಕ್ಷಮ ಅಧಿಕಾರದಿಂದ ಕರ್ತವ್ಯದಿಂದ ಬಿಡು ಗಡೆಗೊಂಡು ತಾವು ಕೆಲಸ ನಿರ್ವಹಿಸುತ್ತಿದ್ದ ಸ್ಥಳಗಳಿಗೆ ಹಿಂದಿರುಗಿ, ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಹಾಗೂ ಇಲಾಖಾ ವಿಚಾರಣೆಯಲ್ಲಿಯೂ ಸಹ ಮೇಲಿನ ಆರೋಪ ಸಾಬೀತಾಗಿರುವುದಿಲ್ಲ. ಆದ್ದರಿಂದ ಶಿಸ್ತು ಪ್ರಾಧಿಕಾರಿಯ ಆದೇಶವನ್ನು ರದ್ದುಪಡಿಸಿ ಅವರುಗಳ ವಾರ್ಷಿಕ ವೇತನ ಬಡ್ತಿಯನ್ನು ಸಕ್ರಮಗೊಳಿಸಿ ಹಾಗೂ ಅಮಾನತ್ತಿನ ಅವಧಿಯನ್ನು ಕರ್ತವ್ಯವೆಂದು ಪರಿಗಣಿಸಲು ಸರ್ಕಾರವು ಉದ್ದೇಶಿಸಿ ಕರ್ನಾಟಕ ಲೋಕ ಸೇವ ಆಯೋಗದ ಸಹಮತಿ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿ: 20–7–2007ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ತನ್ನ ಸಹಮತಿ ನೀಡಿದೆ. ಅದರಂತೆ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 81 ಪೊಸಿಅ 2006 ಬೆಂಗಳೂರು, ದಿನಾಂಕ: 5ನೇ ಅಕ್ಟೋಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಎಂ.ಎಲ್.ಬಸವರಾಜು, ಸಿಪಿಸಿ–649 ತಾವರೆಕೆರೆ ಪೊಲೀಸ್ ಠಾಣೆ ಶ್ರೀ ಕೆ.ಸಿ. ನಂಜೇಗೌಡ–645, ಗುಬ್ಬಿ ಪೊಲೀಸ್ ಠಾಣೆ ಹಾಗೂ ಸೈಯದ್ ಮುಕ್ತಿಯಾರ್ ಪಿಸಿ–715, ತುಮಕೂರು ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ ಈ ಕೆಳಕಂಡಂತೆ ಆದೇಶಿಸಿದೆ.

1. ಶಿಸ್ತುಪ್ರಾಧಿಕಾರಿಯು ದಂಡನಾದೇಶವನ್ನು ರದ್ದುಪಡಿಸಿ ವಾರ್ಷಿಕ ವೇತನ ಬಡ್ತಿಯನ್ನು ಸಕ್ರಮಗೊಳಿಸಿ ಬಿಡುಗಡೆ ಮಾಡಲು ಆದೇಶಿಸಿದೆ.
2. ಅಮಾನತ್ತಿನ ಅವಧಿಯನ್ನು ಕರ್ತವ್ಯವೆಂದು ಪರಿಗಣಿಸಲು ಆದೇಶಿಸಿದೆ.
3. ಈ ಆದೇಶವು ಶಿಸ್ತು ಪ್ರಾಧಿಕಾರವು ಹೊರಡಿಸಿದ ಆದೇಶದ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 70 ಸಿಎನ್‌ಎಸ್ 2007 ದಿನಾಂಕ: 20–7–2007

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1792

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ,

(ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ವೆಂಕಟೇಶ್ ಎಪಿಸಿ–76, (61)ಡಿಎಆರ್ ಭದ್ರಾವತಿ ಇವರು ಸರ್ಕಾರಕ್ಕೆ ಸಲ್ಲಿಸಿದ ಪರಿಷ್ಕರಣ ಮೇಲ್ಮನವಿ ಅರ್ಜಿ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಎಸ್.ಪಿ.ಶಿವಮೊಗ್ಗ ಇವರ ಆದೇಶ ಸಂಖ್ಯೆ: ಡಿಇ/13/97, ದಿನಾಂಕ: 05–01–98
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಐಜಿಪಿ ಪೂರ್ವ ವಲಯ ದಾವಣಗೆರೆ, ಇವರ ಆದೇಶ ಸಂಖ್ಯೆ: ಅಪೀಲು/ 60/97–98, ದಿನಾಂಕ: 10–07–1998
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು/ 2/23/2006, ದಿನಾಂಕ: 31–08–2006
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: PSC 41, CNS 2007 ದಿನಾಂಕ: 12–06–2007

**ಪ್ರಸ್ತಾವನೆ:**

ಶ್ರೀ ವೆಂಕಟೇಶ್ ಎಪಿಸಿ–76, (61)ಡಿಎಆರ್ ಭದ್ರಾವತಿ ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ದಿ: 13–06–1997 ರಂದು ನಿಯೋಜಿತವಾದ ಕರ್ತವ್ಯಕ್ಕೆ ಹಾಜರಾಗದೆ ಗೈರುಹಾಜರಾಗಿ ಪಾನಮತ್ತರಾಗಿ ಅಂದು ಮದ್ಯಾಹ್ನ ನಾಲ್ಕು ಗಂಟೆ ಸಮಯದಲ್ಲಿ ಡಿಎಆರ್, ಗಾರ್ಡಿಗೆ ಬಂದು ಮೇಲಾಧಿಕಾರಿಗಳನ್ನು ಉದ್ದೇಶಿಸಿ ಹಗುರವಾಗಿ ಮಾತನಾಡಿ, ಶ್ರೀ ಯಂಕಪ್ಪ ಆರ್.ಎಸ್.ಐ. ರವರಿಗೆ ಅವಾಚ್ಯ ಶಬ್ಧಗಳಿಂದ ಮಾತಮಾಡಿ ಎಸಗಿದ ಅತೀವ ದುರ್ನಡತೆ ಮತ್ತು ದುರ್ನಡತೆಯ ಆಪಾದನೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ, ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಎಸ್.ಪಿ.ಶಿವಮೊಗ್ಗ ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 05–01–98ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಐ.ಜಿ.ಪಿ. ಪೂರ್ವ ವಲಯ ದಾವಣಗೆರೆ, ಇವರು ಶಿಸ್ತು ಪ್ರಾಧಿಕಾರಿಯ ಆದೇಶವನ್ನು ಮಾರ್ಪಡಿಸಿ ಸೇವೆಗೆ ಪುನರ್ ನೇಮಕ ಮಾಡಿ, ವೇತನವನ್ನು ಪೇದೆ ವೇತನದ ಕನಿಷ್ಠ ಮಟ್ಟಕ್ಕಿಳಿಸಿ ನಂತರ ಹೊಸದಾಗಿ ವಾರ್ಷಿಕ ವೇತನಬಡ್ತಿ ಗಳಸಲು ಹಾಗೂ ಅಮಾನತ್ತನ್ನು ಅಮಾನತ್ತೆಂದೇ, ಹೊರಗುಳಿದ ಅವಧಿಯನ್ನು ಸಂಬಳರಹಿತ ರಜೆಯೆಂದು ಪರಿಗಣಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ನಿಯೋಜಿಸಿದ ಕರ್ತವ್ಯಕ್ಕೆ ಹಾಜರಾಗಿ ಅದೇ ದಿನ ಸಂಜೆ 4.00ಗಂಟೆಗೆ ಪಾನಮತ್ತರಾಗಿ ಮೇಲಾಧಿಕಾರಿಗಳಿಗೆ ಅವಾಚ್ಯ ಶಬ್ಧಗಳಿಂದ ನಿಂದಿಸಿದ್ದು, ಇದು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ ಶಿಸ್ತು ಪ್ರಾಧಿಕಾರವು ದಿ: 05–01–98ರಲ್ಲಿ ವಿಧಿಸಿದ್ದ ಸೇವೆಯಿಂದ ವಜಾಗೊಳಿಸುವ ದಂಡನಾದೇಶವನ್ನು ಮಾರ್ಪಡಿಸಿ ಮೇಲ್ಮನವಿ ಪ್ರಾಧಿಕಾರವು

ದಿ: 10-07-1998ರಲ್ಲಿ ಸೇವೆಗೆ ಪುನರ್ ಸ್ಥಾಪಿಸಿ ಇವರ ವೇತನವನ್ನು ಪೊಲೀಸ್ ಪೇದೆ ವೇತನವನ್ನು ಕನಿಷ್ಠಮಟ್ಟಕ್ಕೆ ಇಳಿಸಲಾಗಿದ್ದು, ಯಾವ ಅವಧಿಗೆ ಎಂದು ಹೇಳಿರುವುದಿಲ್ಲ. ಕೆ.ಎಸ್.ಆರ್.ನ ನಿಯಮ 59(1)(ಎ) ಮತ್ತು (ಬಿ)ರನ್ವಯ ಅವಕಾಶವಿಲ್ಲ. ಆದ್ದರಿಂದ ಮೇಲ್ಮನವಿ ಪ್ರಾಧಿಕಾರದ ದಿ: 10-07-1998ರ ದಂಡನಾದೇಶವನ್ನು ಭಾಗಶ: ಮಾರ್ಪಡಿಸಿ ಅರ್ಜಿದಾರರ ವೇತನವನ್ನು ಅವರ ಹುದ್ದೆಯ ಕನಿಷ್ಠ ಮಟ್ಟಕ್ಕೆ ಐದು ವರ್ಷಗಳ ಅವಧಿಗೆ ಇಳಿಸಿ ಈ ಅವಧಿಯಲ್ಲಿ ಯಾವುದೇ ವಾರ್ಷಿಕ ವೇತನ ಬಡ್ತಿ ಗಳಿಸದೆ ದಂಡನಾವಧಿ ಮುಗಿದ ನಂತರ ಹಿಂದಿನ ದಿನದಂದು ಪಡೆಯುತ್ತಿದ್ದ ವೇತನಕ್ಕೆ ವೇತನ ನಿಗದಿಪಡಿಸಿ ಅಲ್ಲಿಂದ ವಾರ್ಷಿಕ ವೇತನ ಬಡ್ತಿ ಗಳಿಸುವ ದಂಡನೆ ವಿಧಿಸಬಹುದು. ಉಳಿದಂತೆ ಮೇಲ್ಮನವಿ ಪ್ರಾಧಿಕಾರ ಆದೇಶದಲ್ಲಿರುವಂತೆ, ಮುಂದುವರೆಸುವಂತೆ ಸರ್ಕಾರವು ಉದ್ದೇಶಿಸಿ ಕರ್ನಾಟಕ ಲೋಕ ಸೇವಾ ಆಯೊಗದ ಸಹಮತಿ ಕೋರಲಾಗಿತ್ತು. ಕರ್ನಾಟಕ ಲೋಕ ಸೇವ ಆಯೋಗವು ದಿ: 12-06-2007ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ತನ್ನ ಸಹಮತಿ ನೀಡಿದೆ. ಅದರಂತೆ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 47 ಪೊಸಿಅ 2007 ಬೆಂಗಳೂರು, ದಿನಾಂಕ: 27ನೇ ಸೆಪ್ಟೆಂಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವೆಂಕಟೇಶ್ ಎಪಿಸಿ-76, (61)ಡಿಎಆರ್ ಭದ್ರಾವತಿ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ ಈ ಕೆಳಕಂಡಂತೆ ಆದೇಶಿಸಿದೆ.

1. ಮೇಲ್ಮನವಿ ಪ್ರಾಧಿಕಾರದ ದಂಡನಾದೇಶವನ್ನು ಬಾಗಶ: ಮಾರ್ಪಡಿಸಿ ಇವರ ವೇತನವನ್ನು ಇವರ ಹುದ್ದೆಯ ಕನಿಷ್ಠ ಮಟ್ಟಕ್ಕೆ ಐದು ವರ್ಷಗಳ ಅವಧಿ ಇಳಿಸಿ ಈ ಅವಧಿಯಲ್ಲಿ ಯಾವುದೇ ವಾರ್ಷಿಕ ವೇತನ ಬಡ್ತಿ ಗಳಿಸದೇ ದಂಡನಾ ಅವಧಿ ಮುಗಿದ ನಂತರ ಹಿಂದಿನ ದಿನದಂದು ಪಡೆಯುತ್ತಿದ್ದ ವೇತನಕ್ಕೆ, ವೇತನ ನಿಗದಿ ಪಡಿಸಿ ಅಲ್ಲಿಂದ ವಾರ್ಷಿಕ ವೇತನ ಗಳಿಸುವ ಹಾಗೂ ಉಳಿದಂತೆ ಮೇಲ್ಮನವಿ ಪ್ರಾಧಿಕಾರದ ಆದೇಶದಲ್ಲಿರುವಂತೆ ಮುಂದುವರೆಸುವ ದಂಡನೆ ಆದೇಶಿಸಿದೆ.
2. ಈ ಆದೇಶವು ಮೇಲ್ಮನವಿ ಪ್ರಾಧಿಕಾರವು ಹೊರಡಿಸಿದ ಆದೇಶ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: PSC 41, CNS 2007 ದಿನಾಂಕ: 12-06-2007 ರಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1795

**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ,
(ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಬಿ. ನಾಗರಾಜು, ಮಾಜಿ ಪಿಸಿ-6320, ಬೆಂಗಳೂರು ಗ್ರಾಮಾಂತರ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಪೊಲೀಸ್ ಕಮಿಷನರ್ (ಕಾನೂನು & ಸುವ್ಯವಸ್ಥೆ) ಪೂರ್ವ ಬೆಂಗಳೂರು. ಇವರ ಆದೇಶ ಸಂಖ್ಯೆ: ಇವಿ/ನಿ/6/352/95 ದಿನಾಂಕ: 2-2-1996
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮಿಷನರ್, ಆಡಳಿತ ಬೆಂಗಳೂರು ಇವರ ಆದೇಶ ಸಂಖ್ಯೆ: 46 ಅಪೀಲು 02-03, ದಿನಾಂಕ: 10-3-2003
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 26-7-2006
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು/ 2/85/2006-07, ದಿನಾಂಕ: 17-5-2007

**ಪ್ರಸ್ತಾವನೆ:**

ಶ್ರೀ ಬಿ. ನಾಗರಾಜು, ಮಾಜಿ ಪಿಸಿ-6320, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ನೀವು ದಿನಾಂಕ: 20-2-91ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿದ್ದು, ಗೈರು ಹಾಜರಾಗುವುದಕ್ಕೆ ರಜೆಯನ್ನು ಪಡೆಯದೇ ಎಂ.ಹೆಚ್.ಎಸ್. ಪುಸ್ತಕವನ್ನು ಪಡೆಯದೇ ಮೇಲಾಧಿಕಾರಿಗಳಿಗೆ ತಿಳಿಸದೇ ಗೈರು ಹಾಜರಾಗಿ, ಗೈರು ಹಾಜರಿಯ ಸೂಚನಾ ಪತ್ರವನ್ನು ದಿ: 3-4-91 ರಂದು ಸ್ವೀಕರಿಸಿದ್ದರೂ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೆ ನಿರ್ಲಕ್ಷತೆ ಬೇಜವಾಬ್ದಾರಿಯುತ ಪೊಲೀಸ್ ಅಧಿಕಾರಿಯಾಗಿದ್ದು, ದುರ್ನಡತೆ ಪ್ರದರ್ಶಿಸಿರುವುದು.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಪೊಲೀಸ್ ಕಮಿಷನರ್ ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 2–2–1996ರ ಆದೇಶದಲ್ಲಿ ಅರ್ಜಿದಾರರನ್ನು ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮಿಷನರ್ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 10–3–2003ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ದೀರ್ಘಕಾಲದ ಅನಧಿಕೃತ ಗೈರುಹಾಜರಿ ಹೊಂದಿದ್ದು, ಗೈರು ಹಾಜರಿಯ ಸೂಚನಾಪತ್ರ ಪಡೆದಿದ್ದರೂ ಕರ್ತವ್ಯಕ್ಕೆ ಹಾಜರಾಗದೆ ಬೇಜವಾಬ್ದಾರಿತನ ನಿರ್ಲಕ್ಷ್ಯತನ ತೋರಿರುವುದು ಕಂಡುಬಂದಿರುವುದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 256 ಪೊಸಿಅ 2007 ಬೆಂಗಳೂರು, ದಿನಾಂಕ: 4ನೇ ಅಕ್ಟೋಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ. ನಾಗರಾಜು, ಮಾಜಿ ಪಿಸಿ–6320, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1807

**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ,
(ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಬಿ.ಐ. ನಾಯಕ, ಹೆಚ್.ಸಿ.–1954, ಬೆಂಡಿಗೇರಿ ಪೊಲೀಸ್ ಠಾಣೆ, ಹುಬ್ಬಳ್ಳಿ ಇವರ ಪರಿಷ್ಕರಣ ಮೇಲ್ಮನವಿ ಅರ್ಜಿ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಕಮಿಷನರ್ ಹುಬ್ಬಳ್ಳಿ–ದಾರವಾಡ ಇವರ ಆದೇಶ ಸಂಖ್ಯೆ: ಸಿಬ್ಬಂದಿ–3/194/2004, ದಿನಾಂಕ: 2–1–2006
2) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 27–1–2006
3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು/2/27/2006 ದಿನಾಂಕ: 28–6–2006

**ಪ್ರಸ್ತಾವನೆ:**

ಶ್ರೀ ಬಿ.ಐ. ನಾಯಕ, ಹೆಚ್.ಸಿ.–1954, ಬೆಂಡಿಗೇರಿ ಪೊಲೀಸ್ ಠಾಣೆ, ಹುಬ್ಬಳ್ಳಿ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ನೀವು ಹುಬ್ಬಳ್ಳಿ ಬೆಂಡಿಗೇರಿ ಪೊಲೀಸ್ ಠಾಣೆಯಲ್ಲಿ ಸಿ.ಹೆಚ್.ಸಿ.–1954, ಎಂದು ಕರ್ತವ್ಯ ನಿರ್ವಹಿಸುತ್ತಿದ್ದು, ನೀವು ದಿ: 9–6–2004 ರಿಂದ 10–6–2004 ರಂದು ಎರಡು ದಿವಸ ಕಿರುಕುಳ ರಜ ಮತ್ತು ದಿ: 11–6–2004ರಂದು ಒಂದು ದಿವಸ ವಾರದ ರಜೆಯನ್ನು ಪಡೆದು ನಿಮ್ಮ ಸ್ವಂತ ಊರಿನಲ್ಲಿ ಕೆಲಸವಿದ್ದ ಬಗ್ಗೆ ಹೋಗಿ ದಿ: 12–6–2004ರಂದು ಮರಳಿ ಕರ್ತವ್ಯಕ್ಕೆ ಹಾಜರಾಗದೆ ಅನಧಿಕೃತವಾಗಿ ಕರ್ತವ್ಯಕ್ಕೆ ಗೈರುಹಾಜರಾಗಿ ಉಳಿದು ಈ ಅವಧಿಯಲ್ಲಿ ಮುಂಡರಗಿ ಪೊಲೀಸ್ ಠಾಣೆಯ ಗುನ್ನ ನಂ.77/2004 ಕಲಂ 143, 147, 148, 323, 324, 363, 504, 506, ಜೊತೆ 149 ಐಪಿಸಿ ಮತ್ತು ಗುನ್ನ ನಂ.–83/2004ಕಲಂ 143, 147, 323, 324, 363, 504, 506 ಜೊತೆ 149 ಐಪಿಸಿ ನೇ ಪ್ರಕರಣಗಳಲ್ಲಿ ಭಾಗಿಯಾಗಿದ್ದು, ನಿಮ್ಮನ್ನು ದಿ: 24–6–2004ರಂದು ಕಾಗ್ನಜೇಬಲ್ ಪ್ರಕರಣದಲ್ಲಿ ದಸ್ತಗಿರಿ ಮಾಡಿ ನ್ಯಾಯಾಲಯಕ್ಕೆ ಹಾಜರುಪಡಿಸಿದ್ದು, ಅಲ್ಲದೆ ದಿ:28–6–2004ರ ವರೆಗೆ ಎಂ.ಸಿ. ಕಸ್ಟಡಿಯಲ್ಲಿಟ್ಟ ಬಗ್ಗೆ ಪೊಲೀಸ್ ಇನ್ಸ್‌ಪೆಕ್ಟರ್ ಮುಂಡರಗಿ ಪೊಲೀಸ್ ಠಾಣೆ ರವರು ವರಧಿ ಸಲ್ಲಿಸಿದ್ದು ಇರುತ್ತದೆ. ನೀವು ಶಿಸ್ತಿನ ಇಲಾಖೆಯ ನೌಕರರಾಗಿದ್ದು, ಅಪರಾಧ ಪ್ರಕರಣದಲ್ಲಿ ಭಾಗಿಯಾಗಿದ್ದು, ಇಲಾಖೆಗೆ ಕಳಂಕ ಬರುವ ರೀತಿಯಲ್ಲಿ ವರ್ತಿಸಿದ ಅಪರಾಧ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಕಮಿಷನರ್ ಹುಬ್ಬಳ್ಳಿ-ದಾರವಾಡ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 2-1-2006ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಮಾಡಿ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಕ್ರಿಮಿನಲ್ ಮೊಕದ್ದಮೆಗೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆ ಪ್ರಕ್ರಿಯೆ ಬೇರೆಯಗಿದ್ದು, ನ್ಯಾಯಾಲಯದ ಪ್ರಕ್ರಿಯೆಯೇ ವಿಭಿನ್ನವಾಗಿರುತ್ತದೆ. ಇಲಾಖಾ ವಿಚಾರಣೆಯಲ್ಲಿ ಆರೋಪಿಗಳು ನಿಸ್ಸಂಶಯವಾಗಿ ಸಾಬೀತಾಗಿರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 140 ಪೊಸಿಅ 2007 ಬೆಂಗಳೂರು, ದಿನಾಂಕ: 4ನೇ ಅಕ್ಟೋಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ.ಐ. ನಾಯಕ, ಹೆಚ್.ಸಿ.-1954, ಬೆಂಡಿಗೇರಿ ಪೊಲೀಸ್ ಠಾಣೆ, ಹುಬ್ಬಳ್ಳಿ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1808

**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ,
(ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಆರ್. ರವಿ, ಎಪಿಸಿ-6 (ಚಾಲಕ), ಹಲಹಂಕ, ಬೆಂಗಳೂರು ನಗರ ರವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪ್ರಾಂಶುಪಾಲರು/ಸಶಸ್ತ್ರ ಪೊಲೀಸ್ ತರಬೇತಿ ಶಾಲೆ ಯಲಹಂಕ ಬೆಂಗಳೂರು ಇವರ ಆದೇಶ ಸಂಖ್ಯೆ: ಸಪೂತರಾ/ಇತ/1/04-05 ದಿನಾಂಕ: 6-7-2006
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಉಪ ಮಹಾ ನಿರೀಕ್ಷಕರು (ತರಬೇತಿ), ಬೆಂಗಳೂರು ಇವರ ಆದೇಶ ಸಂಖ್ಯೆ: ತ/1/ಸಿಬ್ಬಂದಿ/56/2005-06 ದಿನಾಂಕ: 20-7-2006
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 5-10-2006
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು/2/119/2006-07, ದಿನಾಂಕ: 24-5-2007

**ಪ್ರಸ್ತಾವನೆ:**

ಶ್ರೀ ಆರ್. ರವಿ, ಎಪಿಸಿ-6 (ಚಾಲಕ), ಹಲಹಂಕ, ಬೆಂಗಳೂರು ನಗರ ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

1. ದಿ: 18-1-2005ರಂದು ಬೆಂಗಳೂರು ನಗರದಲ್ಲಿ ತಮಗೆ ನೀಡಿದ ನಿಗದಿತ ಕರ್ತವ್ಯ ಮುಗಿಸಿ ಸಿ.ಎ.ಆರ್. ಕೇಂದ್ರಕ್ಕೆ ರಾತ್ರಿ 19.30 ಗಂಟೆಗೆ ಇಂಧನ ಪಡೆದು ಪುನ: ಸಶಸ್ತ್ರ ಪೊಲೀಸ್ ತರಬೇತಿ ಶಾಲೆಗೆ ತಿರುಗಿ ಬಾರದೆ ತಾವು ವಾಹನವನ್ನು ಮೈಸೂರು ರಸ್ತೆಯ ಮಾರ್ಗದಲ್ಲಿ ಚಲಿಸಿ ನಿಗಧಿತ ಮಾರ್ಗದಲ್ಲಿ ತಿರುಗಿ ಬರದೆ (ವಾಹನವನ್ನು ಬನಶಂಕರಿ ಮತ್ತು ಕೆಂಗೇರಿ ಕಡೆ ಓಡಿಸಿ ಸರ್ಕಾರಿ ವಾಹನ ದುರುಪಯೋಗ ಪಡಿಸಿಕೊಂಡಿರುವುದು;
2. 18-1-2005ರಂದು ಇವರು ಕರ್ತವ್ಯದ ಮೇಲೆ ಮದ್ಯಪಾನ ಮಾಡಿದ್ದು ಪೊಲೀಸ್ ಮ್ಯಾನುಯಲ್ ಕಾಯ್ದೆ ಮತ್ತು ಕರ್ನಾಟಕ ನಡತೆ ಕಾಯ್ದೆ 29ರನ್ನು ಉಲ್ಲಂಘಿಸಿರುವುದು;

3. ದಿ: 18–1–2005ರಂದು ರಾತ್ರಿ 8.30ಗಂಟೆ ಸಮಯದಲ್ಲಿ ಜ್ಞಾನಭಾರತಿ ಸಮೀಪದ ಮೈಸೂರು ರಸ್ತೆಯಲ್ಲಿ ಎದುರಿನಿಂದ ಬರುವ ವಾಹನಕ್ಕೆ ತಾವು ನಿರ್ಲಕ್ಷ್ಯತನದಿಂದ ಚಾಲನೆ ಮಾಡಿ ಡಿಕ್ಕಿ ಹೊಡೆದು ಹತ್ತಿರದ ಬ್ಯಾಟರಾಯನಪುರ ಟ್ರಾಫಿಕ್ ಪೊಲೀಸ್ ಠಾಣೆಯಲ್ಲಿ ವರಧಿ ನೀಡದೆ ಪೊಲೀಸ್ ಮ್ಯಾನುಯಲ್ ಕಾಯ್ದೆ 2002 ಸೆಕ್ಷನ್ 12ರನ್ನು ಉಲ್ಲಂಘಿಸಿರುವುದಲ್ಲದೇ ಅಪಘಾತದ ತಕ್ಷಣ ಮೇಲಾಧಿಕಾರಿಗೆ ತಿಳಿಸದೆ ತಮ್ಮ ಕರ್ತವ್ಯದಲ್ಲಿ ಬೇಜವಾಬ್ದಾರಿ ಅಶಿಸ್ತನ್ನು ಪ್ರದರ್ಶಿಸಿರುತ್ತೀರಿ. ಅಲ್ಲದೆ ಅಪಘಾತ ಸ್ಥಳದಿಂದ ಮೇಲಾಧಿಕಾರಿಗಳ ಗಮನಕ್ಕೆ ತರದೆ ವಾಹನದ ಸ್ಥಳ ಬದಲಾವಣೆ ಮಾಡಿರುವುದು. ಈ ಬಗ್ಗೆ ಲಿಖಿತ ದೂರನ್ನು ಪೊಲೀಸ್ ಠಾಣೆಗೆ ನೀಡದೇ ಇದ್ದ ಪ್ರಯುಕ್ತ ಸಿಡಿಐ, ಸಪೊತ ಶಾಲೆ ರವರು ಅಪಘಾತವಾದ ಬಗ್ಗೆ ದೂರನ್ನು ಬ್ಯಾಟರಾಯನಪುರ ಟ್ರಾಫಿಕ್ ಠಾಣೆಯಲ್ಲಿ ದಿ: 24–1–2005ರಂದು ದಾಖಲಿಸಿರುವುದು.

4. ದಿ: 19–1–2005ರಂದು ಬೆಳಿಗ್ಗೆ ಸುಮಾರು 10.00 ಗಂಟೆಗೆ ತಮಗೆ ಚಾಲನೆಗೆ ನೀಡದ ಕೆಎ–04 ಜಿ 23 ವಾಹನದ ಡೀಸೆಲ್ ಅನ್ನು ಪೈಪ್ ಸಹಾಯದಿಂದ ಪ್ಲಾಸ್ಟಿಕ್ ಕ್ಯಾನಿಗೆ ಯಲಹಂಕ ಪೊಲೀಸ್ ಠಾಣೆಯ ಹತ್ತಿರ ತೆಗೆದು ಸರ್ಕಾರಿ ಸಾಮಗ್ರಿಗಳ ದುರುಪಯೋಗ ಮತ್ತು ತಮ್ಮ ಅಧಿಕಾರದ ವ್ಯಾಪ್ತಿಯನ್ನು ಮೀರಿ ಕರ್ನಾಟಕ ಸರ್ವಿಸ್ ಕಾಯ್ದೆ (ನಡತೆ) 3ರ (i)(iii) ನ್ನು ಸಹ ಮೀರಿ ಕರ್ತವ್ಯದಲ್ಲಿ ಘೋರ ಅಪರಾಧ ಎಸಗಿರುವುದು ಎಂಬ ಬಗ್ಗೆ ತಮ್ಮ ಮೇಲೆ ದೋಷಾರೋಪಣೆ ಮಾಡಲಾಗಿರುತ್ತದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪ್ರಾಂಶುಪಾಲರು/ಸಶಸ್ತ್ರ ಪೊಲೀಸ್ ತರಬೇತಿ ಶಾಲೆ ಯಲಹಂಕ ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 6–7–2005 ರ ಆದೇಶದಲ್ಲಿ ಅರ್ಜಿದಾರರರನ್ನು ಶ್ರೀ ಆರ್. ರವಿ ಎಪಿಸಿ–6 ಸಪೊತ ಶಾಲೆ ಯಲಹಂಕ ಬೆಂಗಳೂರು ಇವರ ವೇತನ ಬಡ್ತಿಯನ್ನು 5 ವರ್ಷ ಸ್ಥಗಿತಗೊಳಿಸಿ ಅದು ಅವರ ಮುಂದಿನ ವೇತನಕ್ಕೆ ಸಂಚಿತ ಪರಿಣಾಮ ಬೀರುವಂತೆ ತಡೆ ಹಿಡಿಯಲಾಗಿದೆ. ಅಲ್ಲದೆ ವಾಹನದ ದುರಸ್ಥಿ ಅಂದಾಜು ವೆಚ್ಚ ರೂ. 32,422–00 ಗಳನ್ನು ಪ್ರತಿ ತಿಂಗಳು ರೂ. 500–00 ರಂತೆ ಒಟ್ಟು 64 ಕಂತುಗಳಲ್ಲಿ ಇವರ ವೇತನದಿಂದ ಕಟಾವು ಮಾಡಿ ಸರ್ಕಾರಕ್ಕೆ ಜಮಾ ಮಾಡಲು ಆದೇಶಿಸಲಾಗಿದೆ. ಹಾಗೂ ಅವರ ಅಮಾನತ್ತಿನ ಅವಧಿಯನ್ನು ಅಮಾನತ್ತು ಎಂದು ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಉಪ ಮಹಾ ನಿರೀಕ್ಷಕರು (ತರಬೇತಿ), ಬೆಂಗಳೂರು ಇವರು ಮೇಲ್ಮನವಿಯನ್ನು ಪರಿಗಣಿಸಿ ಶಿಸ್ತುಪ್ರಾಧಿಕಾರಿಯ ಆದೇಶವನ್ನು ಮಾರ್ಪಾಡಿಸಿ ಈ ಕೆಳಕಂಡಂತೆ ಆದೇಶಿಸಿರುತ್ತಾರೆ, ಅರ್ಜಿದಾರರ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ, ಮೂರು ವರ್ಷ ಗಳ ಕಾಲ ಮುಂದೂಡಿರುತ್ತಾರೆ. ಹಾಗೂ ಅಮಾನತ್ತಿನ ಅವದಿ ಅಮಾನತ್ತು ಎಂದು ಪರಿಗಣಿಸಿ ಹಾಗೂ ವಾಹನ ದುರಸ್ಥಿ ವೆಚ್ಚ ರೂ. 32,422 ಗಳನ್ನು ಪ್ರತಿ ತಿಂಗಳು ರೂ.500ರಂತೆ 64 ಕಂತು ಗಳಲ್ಲಿ ವೇತನದಿಂದ ಕಟಾವು ಮಾಡಿ ಸರ್ಕಾರಕ್ಕೆ ಜಮಾ ಮಾಡುವುದು.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಅಕ್ರಮವಾಗಿ ಇಂಧನ ತೆಗೆದಿರುವುದು ಗಣನೀಯ ಸ್ವರೂಪದ ಆರೋಪವು ಇಲಾಖಾ ವಿಚಾರಣೆಯಿಂದ ಸಾಬೀತಾಗಿದ್ದು ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 280 ಪೊಸಿಅ 2007 ಬೆಂಗಳೂರು, ದಿನಾಂಕ: 5ನೇ ಅಕ್ಟೋಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಆರ್. ರವಿ, ಎಪಿಸಿ–6 (ಚಾಲಕ), ಹಲಹಂಕ, ಬೆಂಗಳೂರು ನಗರ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1831

**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ,
(ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಡಿ. ರಾಜಾಸಾಬ್ ಹವಾಲ್ದಾರ್ ಸಂಖ್ಯೆ 40 ಕೆ.ಎಸ್.ಆರ್.ಪಿ ಗುಲ್ಬರ್ಗ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರಿ ಹಾಗೂ ಐ.ಜಿ.ಪಿ ಕೆ.ಎಸ್.ಆರ್.ಪಿ. ಬೆಂಗಳೂರು ಇವರ ಆದೇಶ ಸಂಖ್ಯೆ: ಡಿಇ/12/2004-05, ದಿನಾಂಕ: 02-12-2004.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಬೆಂಗಳೂರು. ಇವರ ಆದೇಶ ಸಂಖ್ಯೆ: ಅಪೀಲು(6)/36/2005-06 ದಿನಾಂಕ: 20-10-2005
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 14-08-2006
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)/44/2006, ದಿನಾಂಕ: 04-07-2006.
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: ಪಿ.ಎಸ್.ಸಿ.72.ಸಿ.ಎನ್.ಎಸ್.07 ದಿನಾಂಕ: 02-08-2007.

**ಪ್ರಸ್ತಾವನೆ:**

ಶ್ರೀ ಡಿ. ರಾಜಾಸಾಬ್ ಹವಾಲ್ದಾರ್ ಸಂಖ್ಯೆ 40 ಕೆ.ಎಸ್.ಆರ್.ಪಿ ಗುಲ್ಬರ್ಗ ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

(1) ಶ್ರೀ ಡಿ. ರಾಜಾಸಾಬ್, ಮುಖ್ಯ ಪೇದೆ-40, ಕೇಂದ್ರ ದಳ, 6ನೇ ಪಡೆ, ಕೆ.ಎಸ್.ಆರ್.ಪಿ. ಗುಲ್ಬರ್ಗ ಆದ ನೀವು ದಿನಾಂಕ: 31-07-2003 ರಂದು ಸಾಯಂಕಾಲ 6.30 ಘಂಟೆಯ ಸಮಯದಲ್ಲಿ ಗುಲ್ಬರ್ಗ ಫಿಲ್ಟರ್ ಬೆಡ್ ಸಮೀಪದಲ್ಲಿ ಆಶ್ರಯ ಯೋಜನೆ ಕಾಲೋನಿ ನಿವಾಸಿಯಾಗಿರುವ ಶ್ರೀಮಚೇಂದ್ರ ತಂದೆ ದಶರಥ ಇವರನ್ನು ಮನಬಂದಂತೆ ಕಲ್ಲಿನಿಂದ ಹೊಡೆದು ಎಲ್ಲಾ ಸಾರ್ವಜನಿಕರ ಮಧ್ಯ ಅವಾಚ್ಯ ಶಬ್ದಗಳಿಂದ ಬೈದು ದುಷ್ಕೃತ್ಯ ಎಸಗಿರುತ್ತೀರಿ.

1. ಶಿಸ್ತಿನ ಇಲಾಖೆಯಲ್ಲಿದ್ದು ನೀವು ಒಬ್ಬ ಜವಾಬ್ದಾರಿಯುತ ಮುಖ್ಯ ಪೇದೆಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದು ಸಾರ್ವಜನಿಕ ವ್ಯಕ್ತಿಯನ್ನು ಮನಬಂದಂತೆ ಕಲ್ಲಿನಿಂದ ಹೊಡೆದು ಸಾರ್ವಜನಿಕರ ಮಧ್ಯ ಅಸಭ್ಯವಾಗಿ ವರ್ತಿಸಿ ಪೊಲೀಸ್ ಇಲಾಖೆಗೆ ಕೆಟ್ಟ ಹೆಸರು ತಂದು ಕರ್ತವ್ಯಲೋಪ ಎಸಗಿರುವಿರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಐ.ಜಿ.ಪಿ ಕೆ.ಎಸ್.ಆರ್.ಪಿ ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 02-12-2004ರ ಆದೇಶದಲ್ಲಿ ಅರ್ಜಿದಾರರ ವೇತನವನ್ನು ಹವಾಲ್ದಾರ್ ಹುದ್ದೆಯ ಕಾಲಬದ್ದ ವೇತನ ಶ್ರೇಣಿಯಲ್ಲಿ ಎರಡು ಹಂತಕ್ಕೆ ಎರಡು ವರ್ಷಗಳ ಕಾಲ ಇಳಿಸಿ ನಂತರ ಕೆಳಗಿಳಿಸಿದ ಹಂತದಿಂದ ಹೊಸದಾಗಿ ವಾರ್ಷಿಕ ವೇತನ ಬಡ್ತಿಯನ್ನು ಗಳಿಸುವಂತೆ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಬೆಂಗಳೂರು. ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ: 20-10-2005 ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಆರೋಪಿತರ ವಿರುದ್ಧ ಹೊರಿಸಲಾದ ಆರೋಪಗಳ ಸಂಭಂಧ ವಿಚಾರಣೆಯನ್ನು ನಡೆಸಿ ಇಲಾಖಾ ವಿಚಾರಣೆಯಲ್ಲಿ ಹೊರಿಸಲಾದ ಎರಡು ಆರೋಪಗಳು ಸಾಬೀತಾಗಿರುವುದರಿಂದ, ಆದರೆ ಪ್ರಸ್ತುತ ಘಟನೆಯಲ್ಲಿ ಭಾಗವಹಿಸಿದರು ಎಂಬ ಒಂದೇ ಕಾರಣದಿಂದ ಇವರ ಮೇಲೆ ಇಂತಹ ಹೆಚ್ಚಿನ ತರದ ದಂಡನೆ ವಿದಿಸಿರುವುದು ನ್ಯಾಯಬದ್ಧವಾಗಿರುವುದಿಲ್ಲ. ಈ ರೀತಿ ಇಲಾಖಾ ವಿಚಾರಣ ವರದಿಯನ್ನು ತಳ್ಳಿಹಾಕಿ ದಂಡನೆ ವಿಧಿಸಿರುತ್ತಾರೆ. ಇಲಾಖಾ ವಿಚಾರಣೆಯನ್ನು ನಡೆಸುವ ಅಗತ್ಯತೆ ಬಗ್ಗೆ ಸಂಶಯ ಹಾಗೂ ಪ್ರಶ್ನೆ ಉದ್ಭವಿಸುತ್ತದೆ. ಅಲ್ಲದೆ ಇಲಾಖಾ ವಿಚಾರಣೆ ಮೌಲ್ಯ ಕಳೆದುಕೊಂಡಂತಾಗುತ್ತದೆ.ಆದ್ದರಿಂದ ಸದರಿಯವರ ಮೇಲೆ ಹೊರಿಸಲಾದ ಆರೋಪವನ್ನು ರದ್ದುಪಡಿಸಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಸಕ್ರಮಗೊಳಿಸಿ ಅಮಾನತ್ತಿನ ಅವಧಿ ದಿ:**13-08-2003**ರಿಂದ **10-11-2003**ರ ವರಗಿನ ಕರ್ತವ್ಯದ ಮೇಲೆ ಎಂದು ಪರಿಗಣಿಸಿ ಅರ್ಜಿದಾರರ ವಿರುದ್ಧ ಹೊರಡಿಸಲಾದ ದಂಡನಾದೇಶ ರದ್ದುಪಡಿಸಲು ಸರ್ಕಾರವು ಉದ್ದೇಶಿಸಿ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿ: 02-08-2007ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ತನ್ನ ಸಹಮತಿ ನೀಡಿದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 471 ಪೊಸಿಅ 2006 ಬೆಂಗಳೂರು, ದಿನಾಂಕ: 01ನೇ ಅಕ್ಟೋಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಡಿ. ರಾಜಾಸಾಬ್ ಹವಾಲ್ದಾರ್ ಸಂಖ್ಯೆ 40 ಕೆ.ಎಸ್.ಆರ್.ಪಿ ಗುಲ್ಬರ್ಗ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ ಈ ಕೆಳಕಂಡಂತೆ ಆದೇಶಿಸಿದೆ.

1. ಶಿಸ್ತು ಪ್ರಾಧಿಕಾರದ ಆದೇಶವನ್ನು ರದ್ದು ಪಡಿಸಿ ಇವರ ವಾರ್ಷಿಕ ವೇತನ ಬಡ್ತಿಯನ್ನು ಸಕ್ರಮಗೊಳಿಸಿ ಬಿಡುಗಡೆಗೊಳಿಸಲು ಆದೇಶಿಸಿದೆ.
2. ಅಮಾನತ್ತಿನ ಅವಧಿಯನ್ನು ದಿ: 13–08–2003ರಿಂದ 10–11–2003ರವರಗಿನ ಅವಧಿಯನ್ನು ಅವರ ಕರ್ತವ್ಯದ ಮೇಲಿನ ಅವಧಿ ಎಂದು ಪರಿಗಣಿಸಿದೆ.

ಈ ಆದೇಶವು ಶಿಸ್ತು ಪ್ರಾಧಿಕಾರ ಹೊರಡಿಸಿದ ಆದೇಶದ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ72ಸಿಎನ್‌ಎಸ್2007 ದಿ: 02–08–2007ರಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1846

**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ,
(ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಸ್.ಎಸ್. ವಾಸುದೇವ, ಮಾಜಿ ಪಿಸಿ–25, ಕೊಡಗು ಜಿಲ್ಲೆರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು ಕೊಡಗು ಜಿಲ್ಲೆ, ಮಡಿಕೇರಿ ಇವರ ಆದೇಶ ಸಂಖ್ಯೆ: ಡಿಇ/14–32 ದಿನಾಂಕ: 25–3–1994.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೈರೆಕ್ಟರ್ ಜನರಲ್ ಆಫ್ ಪೊಲೀಸ್ (ದಕ್ಷಿಣ ವಲಯ) ಮೈಸೂರು ಇವರ ಆದೇಶ ಸಂಖ್ಯೆ: 13/ಅಪೀಲು/94–95 ದಿನಾಂಕ: 10–4–95.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 21–12–2006.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು 2/140/2006–07, ದಿನಾಂಕ: 2–4–2007.

**ಪ್ರಸ್ತಾವನೆ:**

ಶ್ರೀ ಎಸ್.ಎಸ್. ವಾಸುದೇವ, ಮಾಜಿ ಪಿಸಿ–25, ಕೊಡಗು ಜಿಲ್ಲೆ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

(ಸಂಕ್ಷಿಪ್ತವಾಗಿ)'ನಿರುದ್ಯೋಗಿ ಯುವಕರಿಗೆ ಕೊಡಗು ಜಿಲ್ಲೆಯ ಸಿವಿಲ್ ಡಿಎಆರ್ ನಲ್ಲಿ ಪೊಲೀಸ್ ಹುದ್ದೆಗೆ ನೇರ ನೇಮಕಾತಿ ಮಾಡಿಸಿಕೊಡುವುದಾಗಿ ನಂಬಿಸಿ ಅವರುಗಳಿಂದ ಅರ್ಜಿ ಇತರ ದಾಖಲೆ ಪಡೆದು ಸಾವಿರಗಟ್ಲೆ ಹಣವನ್ನು ಪಡೆದು ಮೋಸ, ವಂಚನೆ ಮಾಡಿರುವ ಬಗ್ಗೆ ದಿ: 21–5–92ರಂದು ಪುಕಾರಾಗಿ ಮಡಿಕೇರಿ ನಗರ ಠಾಣೆ ಮೊ.ಸಂ. 76–92 ವಿಧಿ 420, 473 ಐಪಿಸಿ.ಯಲ್ಲಿ ಭಾಗಿಯಾಗಿರುವ ಬಗ್ಗೆ.'

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು ಕೊಡಗು ಜಿಲ್ಲೆ, ಮಡಿಕೇರಿ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 25–3–1994 ರ ಆದೇಶದಲ್ಲಿ ಅರ್ಜಿದಾರರನ್ನು ಪೊಲೀಸ್ ಸೇವೆಯಿಂದ ವಜಾಗೊಳಿಸಲಾಗಿದೆ ಹಾಗೂ ದಿ: 25–5–1992 ರಿಂದ ಈ ಆದೇಶ ಜಾರಿಯಾಗುವ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತು ಎಂದು ಪರಿಗಣಿಸಲಾದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೈರೆಕ್ಟರ್ ಜನರಲ್ ಆಫ್ ಪೊಲೀಸ್ (ದಕ್ಷಿಣ ವಲಯ) ಮೈಸೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ: 10–4–95ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ನಿರುದ್ಯೋಗಿ ಯುವಕರಿಗೆ ಕೆಲಸ ಮಾಡಿಸಿ ಕೊಡುತ್ತೇನೆಂದು ಹಣ ಪಡೆದು ಮೋಸ ಮಾಡಿದ್ದು, ಇಲಾಖಾ ವಿಚಾರಣೆಯಿಂದ ನಿಸ್ಸಂದೇಹವಾಗಿ ಸಾಬೀತಾಗಿದೆ, ನ್ಯಾಯಾಲಯದ ಪ್ರಕ್ರಿಯೆ ಬೇರೆ ಹಾಗೂ ಇಲಾಖಾ ವಿಚಾರಣೆಯೆ ಬೇರೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 124 ಪೊಸಿಅ 2007 ಬೆಂಗಳೂರು, ದಿನಾಂಕ: 22ನೇ ಅಕ್ಟೋಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಎಸ್.ಎಸ್.ವಾಸುದೇವ, ಮಾಜಿ ಪಿಸಿ-25, ಕೊಡಗು ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1890

**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ,
(ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಪಿ. ಶಿವಣ್ಣ, ಪಿಸಿ-1658, ಸಿಎಆರ್, (ಕೇಂದ್ರ), ಬೆಂಗಳೂರು ರವರು ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ Deputy Commissioner Police, CAR Head Quatress, Mysore Road Bangalore ಇವರ ಆದೇಶ ಸಂಖ್ಯೆ:ಡಿ.ಇ/9/92-93 ದಿನಾಂಕ: 26-11-2001.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮನಿ ಮತ್ತು ಆಮನಿ ಬೆಂಗಳೂರು, ಇವರ ಆದೇಶ ಸಂಖ್ಯೆ: 67/2001-2002, ದಿನಾಂಕ: 2-5-2002.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 1-7-2002.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು/2/52/2002-03, ದಿನಾಂಕ: 16-8-2006.

**ಪ್ರಸ್ತಾವನೆ:**

ಶ್ರೀ ಪಿ. ಶಿವಣ್ಣ, ಪಿಸಿ-1658, ಸಿಎಆರ್, (ಕೇಂದ್ರ), ಬೆಂಗಳೂರು ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

Gross misconduct and misdemeanouring act in that you P.C. 1658 C.Shivanna of B-Coy, C.A.R. Head Quarters opened fire on security Guard, Sri Balaram of R.B.I. on the night of $12^{th}$ June 1992 causing bleeding injury on his person.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ Deputy Commisioner Police, CAR Head Quatress, Mysore Road Bangalore ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ: 26-11-2001ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಮಾಡಿರುವ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮನಿ ಮತ್ತು ಆಮನಿ ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸ ಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ: 2-5-2002 ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಮೇಲ್ಮನವಿಯನ್ನು ಪುರಸ್ಕರಿಸಲು ದೃಡವಾದ ಕಾರಣಗಳು ಕಂಡು ಬರುತ್ತಿಲ್ಲವಾದ್ದರಿಂದ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ

ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 218 ಪೊಸಿಅ 2007 ಬೆಂಗಳೂರು, ದಿನಾಂಕ: 17ನೇ ಅಕ್ಟೋಬರ್ 2007**

ಪ್ರಸ್ತಾವನೆಯಲ್ಲಿ ವಿವರಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಪಿ. ಶಿವಣ್ಣ, ಪಿಸಿ–1658, ಸಿಎಆರ್, (ಕೇಂದ್ರ), ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1891

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ,

(ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಸ್.ವಿ. ಕೃಷ್ಣಪ್ಪ, ಮಾಜಿ ಪಿಸಿ–151, ಕೆ.ಜಿ.ಎಫ್. ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು ಕೋಲಾರ ಇವರ ಆದೇಶ ಸಂಖ್ಯೆ: ಇವಿ/16/ 2001–02, ದಿನಾಂಕ: 28–2–2004.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು/ 11/04–05, ದಿನಾಂಕ: 3–12–2004.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು/2/64/2005, ದಿನಾಂಕ: 22–9–2006.

**ಪ್ರಸ್ತಾವನೆ:**

ಶ್ರೀ ಎಸ್.ವಿ. ಕೃಷ್ಣಪ್ಪ, ಮಾಜಿ ಪಿಸಿ–151, ಕೆ.ಜಿ.ಎಫ್ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ಮೇಲ್ಮನವಿದಾರರಾದ ಶ್ರೀ ಎಸ್.ವಿ. ಕೃಷ್ಣಪ್ಪ, ಪಿಸಿ–151, ಇವರು ವೆಂಕಟಾಚಲಪತಿ, ಹನುಮಂತ, ಚಂದ್ರಶೇರ್, ರಾಜಪ್ಪ, ಕುಪ್ಪಸ್ವಾಮಿ, ಬೊಮ್ಮಿ @ ಕುಮಾರ್ ಮತ್ತು ಎಂ.ಜಿ.ಬಾಬು ರವರೊಂದಿಗೆ ಸೇರಿ ಬೆಂಗಳೂರು ಹೊಸ ರಸ್ತೆ ಚನ್ನಕೇಶವ ನಗರದ ಶ್ರೀ ಎಸ್.ಎನ್. ಬಾಬುರೆಡ್ಡಿಗೆ ಚಿನ್ನದ ನಾಣ್ಯಗಳು ನಿಧಿಯಿಂದ ಸಿಕ್ಕಿದೆ, ಅವುಗಳನ್ನು ಕಡಿಮೆ ಬೆಲೆಗೆ ಕೊಡುವುದಾಗಿ ಚಂದ್ರಶೇಖರ್‌ಗೆ ನಂಬಿಸಿ ಅವರನ್ನು ಕೆ.ಜಿ.ಎಫ್.ಗೆ ಕರೆಯಿಸಿ ಅವರಿಗೆ ನಕಲಿ ಚಿನ್ನದ ನಾಣ್ಯಗಳನ್ನು ಕೊಟ್ಟು ರೂ.2,35,000/–ಗಳನ್ನು ಪಡೆದುಕೊಳ್ಳುತ್ತಿದ್ದು, ಆ ಸಮಯಕ್ಕೆ ಮೇಲ್ಮನವಿದಾರರು ಹಾಜರಾಗಿ ಪೊಲೀಸಿನವರಂತೆ ವರ್ತಿಸಿ ದಾಳಿ ಮಾಡಿ ಅವರಲ್ಲಿದ್ದ ಚಿನ್ನದ ನಾಣ್ಯಗಳನ್ನು ಕಿತ್ತುಕೊಂಡು, ಅನಂತರದಲ್ಲಿ ಇನ್ನುಳಿದ ಆರೋಪಿಗಳು ಶ್ರೀ.ಎಸ್.ಎನ್.ಬಾಬು ರೆಡ್ಡಿಯವರನ್ನು ಕುಪ್ಪಂ, ಕೆ.ಜಿ.ಎಫ್. ರಸ್ತೆಯ ನಿರ್ಜನ ಪ್ರದೇಶಕ್ಕೆ ಕರೆದುಕೊಂಡು ಹೋಗಿ ಅವರನ್ನು ಮಾರಕಾಸ್ತ್ರಗಳಿಂದ ಹೊಡೆದುಕೊಲೆ ಮಾಡಿ ಹೆಣ ಗುರುತು ಸಿಗದ ಹಾಗೆ ಸಾಕ್ಷ್ಯಾಧಾರಗಳನ್ನು ಹಾಳು ಮಾಡುವ ಉದ್ದೇಶದಿಂದ ಮೃತ ದೇಹವನ್ನು ಬೆಂಗಳೂರು ರೈಲ್ವೇ ನಿಲ್ದಾಣ 184–500–600 ಕಿ.ಮೀ. ಮಧ್ಯೆ ಹಾದು ಹೋಗುವ ರೈಲ್ವೇ ಹಳಿಯ ಮೇಲೆ ಬಿಸಾಡಿದ್ದು, ಈ ಬಗ್ಗೆ ಹೆಬ್ಬಗೋಡಿ ಪೊಲೀಸ್ ಠಾಣೆಯಲ್ಲಿ ಮೊ.ಸಂ.351/2001 ಕಲಂ 364, 302, 201 ಭಾ.ದಂ.ಸಂ. ಪ್ರಕಾರ ದಾಖಲಾಗಿರುತ್ತದೆ.

ಮತ್ತೆ ಮೇಲ್ಮನವಿದಾರರು ದಿ: 16–1–2001ರಂದು ಸಾಯಂಕಾಲ ಸುಮಾರು 4.00 ಗಂಟೆ ಯಲ್ಲಿ ಬಾಬು ಪ್ರಿಸಿಷನ್ ಸರ್ವೆ ಸೆಂಟರ್, ವಿಜಯನಗರ, ಬೆಂಗಳೂರು ನಾರಾಯಣಸ್ವಾಮಿ ಅರೆಕೆರ ಸೀನಾ ರಾಜಪ್ಪಣ್ಣ ಮತ್ತು ಬೊಮ್ಮಿ @ ಕುಮಾರ್ ರವರೊಂದಿಗೆ ಸೇರಿ ಬೆಂಗಳೂರು ವಾಸಿ ಜಿ.ವಿ.ಪ್ರಣೇಶ್ವರ್ ರಾವ್ ಮತ್ತು ಅವರ ತಂದೆಗೆ ಕಡಿಮೆ ಬೆಲೆಗೆ ಚಿನ್ನದ ನಾಣ್ಯಗಳನ್ನು ಕೊಡುವುದಾಗಿ ನಂಬಿಸಿ ಅವರನ್ನು ಮುಳಬಾಗಿಲು ಕಾಂತರಾಜ ಸರ್ಕಲ್ ಮುದುವಾಡಿ ಗೇಟಿನಿಂದ ಸ್ವಲ್ಪ ದೂರು ಇರುವ ನಿರ್ಜನ ಪ್ರದೇಶಕ್ಕೆ ಕರೆದುಕೊಂಡು ಹೋಗಿ ರೂ.1,20,000/–ಗಳನ್ನು ಪಡೆದು ಅವರಿಗೆ ನಕಲಿ ಚಿನ್ನದ ನಾಣ್ಯಗಳನ್ನು ಕೊಟ್ಟು ಮೋಸ ಮಾಡಿದ್ದು, ಈ ಬಗ್ಗೆ ಮುಳಬಾಗಿಲು ಠಾಣೆ ಮೊ.ಸಂ.18/2002, ಕಲಂ 420 ಭಾ.ದಂ.ಸಂ. ಕ್ರಿಮಿನಲ್ ಪ್ರಕರಣದಲ್ಲಿ ಆರೋಪಿಯಾಗಿರುತ್ತಾರೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು ಕೋಲಾರ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 28-2-2004ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಮಾಡಿದ ಹಾಗೂ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿ ಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ: 3-12-2004ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಮೋಸ ಪ್ರಕರಣದಲ್ಲಿ ಬಾಗಿಯಾಗಿರುವುದರಿಂದ ಹಾಗೂ ಯಾವುದೇ ಹೊಸ ಅಂಶಗಳನ್ನು ಮೇಲ್ಮನವಿಯಲ್ಲಿ ತಿಳಿಸದೇ ಇರುವುದರಿಂದ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ  ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 273 ಪೊಸಿಅ 2007 ಬೆಂಗಳೂರು, ದಿನಾಂಕ: 22ನೇ ಅಕ್ಟೋಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ವಿ. ಕೃಷ್ಣಪ್ಪ, ಮಾಜಿ ಪಿಸಿ-151, ಕೆ.ಜಿ.ಎಫ್. ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1892

**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ,
(ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಂ. ರಮೇಶ್ ಮಾಜಿ ಎಪಿಸಿ-956 ಸಿ.ಎ.ಆರ್. (ದಕ್ಷಿಣ) ಬೆಂಗಳೂರು ನಗರ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಆರಕ್ಷಕ ಆಯುಕ್ತರು ನಗರ ಸಶಸ್ತ್ರ ಮೀಸಲು ಪಡೆ (ದಕ್ಷಿಣ) ಬೆಂಗಳೂರು ಇವರ ಆದೇಶ ಸಂಖ್ಯೆ: ಡಿಇ 15/ಆರ್-6/2005-06, ದಿನಾಂಕ: 25-09-2006.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಕಮಿಷನರ್ ಸಿ.ಎ.ಆರ್. ಬೆಂಗಳೂರು ನಗರ ಇವರ ಆದೇಶ ಸಂಖ್ಯೆ: 28/ಅಪೀಲು/2006 ದಿನಾಂಕ: 03-07-2006.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 28-07-2006
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2)88/2006-07, ದಿನಾಂಕ: 21-10-2006.
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: ಪಿ.ಎಸ್.ಸಿ.69 ಸಿ.ಎನ್.ಎಸ್ 07-ಪಿಎಸ್‌ಸಿ ದಿನಾಂಕ: 02-08-2007

**ಪ್ರಸ್ತಾವನೆ:**

ಶ್ರೀ ಎಂ. ರಮೇಶ್ ಮಾಜಿ ಎಪಿಸಿ-956 ಸಿ.ಎ.ಆರ್.(ದಕ್ಷಿಣ) ಬೆಂಗಳೂರು ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ಶ್ರೀ ಎಂ. ರಮೇಶ್ ಎಪಿಸಿ-956 ಐ-ಪಂಗಡ, ಸಿ.ಎ.ಆರ್. (ದಕ್ಷಿಣ) ಬೆಂಗಳೂರು ಆದ ನೀವು ದಿನಾಂಕ: 08-05-2005 ರಿಂದ ಯಾವುದೇ ಪೂರ್ವಾನುಮತಿ ಪಡೆಯದೇ ಮತ್ತು ಯಾವುದೇ ಮುನ್ಸೂಚನೆಯನ್ನು ನೀಡದೇ,

ಯಾವುದೇ ವಿಧದಲ್ಲಿಯೂ ನಿಮ್ಮ ಗೈರುಹಾಜರಿ ಕಾರಣವನ್ನು ಮುಂಗಡವಾಗಿ ಕಛೇರಿಗೆ ತಿಳಿಸದೇ ಇಲಾಖಾ ನಿಯಮ ಉಲ್ಲಂಘಿಸಿ, ಏಕಾ ಏಕಿ ಬೆಳಗಿನ ಹಾಜರಾತಿ ಪರಿತ್ಯಾಗ ನೋಟೀಸನ್ನು ದಿ:06–06–2005 ರಂದು ಜಾರಿ ಮಾಡಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವಂತೆ ಸೂಚಿಸಿದ್ದರೂ ಸಹ ನೀವು ದಿ:30–06–2005 ರಂದು ಸ್ವೀಕರಿಸಿ ಇದುವರೆವಿಗೂ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೇ ಗೈರುಹಾಜರಿಯಲ್ಲಿ ಮುಂದುವರಿಯುತ್ತಿರುವುದು ನಿಮ್ಮ ಸರ್ಕಾರಿ ಕರ್ತವ್ಯದಲ್ಲಿ ತೋರಿರುವ ಅಶಿಸ್ತು ಬೇಜವಾಬ್ದಾರಿ ದುರ್ನಡತೆ ಮತ್ತು ಅತೀವ ನಿಲಕ್ಷತೆಯನ್ನು ತೋರಿಸುತ್ತದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಆರಕ್ಷಕ ಆಯುಕ್ತರು ನಗರ ಸಶಸ್ತ್ರ ಮೀಸಲು ಪಡೆ ದಕ್ಷಿಣ ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:25–02–2006ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿ ಇವರು ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾದ ಅವಧಿ ದಿನಾಂಕ: 08–05–2005 ರಿಂದ 22–11–2005ರ ವರೆಗೆ ವೇತನ ರಹಿತ ರಜೆಯನ್ನಾಗಿ ಪರಿಗಣಿಸಿ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಕಮಿಷನರ್ ಸಿ.ಎ.ಆರ್. ಬೆಂಗಳೂರು ನಗರ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ: 03–07–2006 ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ತಾವು ಕೆಲಸಕ್ಕೆ ಅನಧಿಕೃತವಾಗಿ ಗೈರುಹಾಜರಾಗಿರುವುದ್ಕೆ ತಮ್ಮ ತಂದೆಯವರಿಂದ ಬಂದ ಒಂದು ಸೈಟನ್ನು ಬೇರೆಯವರು ಲಪಟಾಯಿಸಲು ಪ್ರಯತ್ನಿಸಿದ್ದರಿಂದ ಆ ಸೈಟನ್ನು ಉಳಿಸಿಕೊಳ್ಳಲು ಹಾಗೂ ಸಂಸಾರದ ಸಮಸ್ಯೆ ಗಳಿಂದ ಕಛೇರಿ ಕೆಲಸಗಳಿಗೆ ಹಾಜರಾಗಲು ಸಾಧ್ಯವಾಗಲಿಲ್ಲವೆಂದು ಹೇಳಿದ್ದಾರೆ. ದಿನಾಂಕ: 14–09–2001ರ ಡಿ.ಪಿ.ಎ.ಆರ್. ಸುತ್ತೋಲೆಯಂತೆ ನಾಲ್ಕು ತಿಂಗಳಿಗೂ ಮೇಲ್ಪಟ್ಟು ಅನಧಿಕೃತವಾದ ಗೈರುಹಾಜರಾದವರಿಗೆ ಸೇವೆಯಿಂದ ವಜಾಗೊಳಿಸುವ ದಂಡನೆ ವಿಧಿಸಬಹುದಾಗಿದೆ. ಆದರೆ, ಅರ್ಜಿದಾರರು 1996ನೇ ಸಾಲಿನಲ್ಲಿ ಕೆಲಸಕ್ಕೆ ಸೇರಿದ್ದು, ವಯಸ್ಸಾದ ತಂದೆ ಇದ್ದಾರೆಂದು ಕಂಡು ಬರುತ್ತಿರುವುದರಿಂದ ಮಾನವೀಯತೆ ದೃಷ್ಟಿಯಿಂದ ಶಿಸ್ತು ಪ್ರಾಧಿಕಾರಿಯ ದಿನಾಂಕ: 25–02–2006ರ ಆದೇಶವನ್ನು ಈ ಕೆಳಗಿನಂತೆ ಮಾರ್ಪಡಿಸಿ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 499 ಪೊಸಿಅ 2007 ಬೆಂಗಳೂರು, ದಿನಾಂಕ: 12ನೇ ಸೆಪ್ಟೆಂಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ. ರಮೇಶ್ ಮಾಜಿ ಎಪಿಸಿ–956 ಸಿ.ಎ.ಆರ್. (ದಕ್ಷಿಣ) ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ ಶಿಸ್ತು ಪ್ರಾಧಿಕಾರ ವಿಧಿಸಿದ್ದ ದಿನಾಂಕ:25–02–2006ರ ದಂಡನಾದೇಶವನ್ನು ಮಾರ್ಪಡಿಸಿ ಈ ಕೆಳಕಂಡಂತೆ ಆದೇಶಿಸಿದೆ.

1. ಅರ್ಜಿದಾರರನ್ನು ಸೇವೆಗೆ ಪುನರ್ ನೇಮಕ ಮಾಡುವುದು.
2. ಅನಧಿಕೃತ ಗೈರುಹಾಜರಿಯನ್ನು ವೇತನ ರಹಿತ ರಜೆಯೆಂದು ಪರಿಗಣಿಸುವುದು.
3. 6 1/2 ತಿಂಗಳ ಅನಧಿಕೃತ ಗೈರುಹಾಜರಿಗೆ ದಂಡನೆಯಾಗಿ ಆಪಾದಿತರ ಹತ್ತು ವಾರ್ಷಿಕ ವೇತನ ಬಡ್ತಿಗಳನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗುವಂತೆ ಮುಂದೂಡುವುದು.
4. ಸೇವೆಯಿಂದ ವಜಾಗೊಂಡು ಸೇವೆಗೆ ಪುನರ್ ನೇಮಕವಾಗುವವರೆಗೂ ವೇತನ ರಹಿತ ರಜೆಯೆಂದು ಪರಿಗಣಿಸುವುದು.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರಸಂಖ್ಯೆ psc/69 CNS 07 ದಿ:2/08/2007 ರಲ್ಲಿ ನೀಡಿದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1705

**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ,
(ಪೊಲೀಸ್ ಸೇವೆಗಳು)

**ವಿಷಯ :** ಶ್ರೀ ಕೆ.ಎಂ. ಸುಬ್ರಹ್ಮಣ್ಯ ಪಿಐ (ಹಿಂದೆ ಸದಾಶಿವನಗರ ಪೊಲೀಸ್ ಠಾಣೆ ಬೆಂಗಳೂರು) ರವರು ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರಿ ಹಾಗೂ ಡಿಜಿ & ಐಜಿಪಿ ಬೆಂಗಳೂರು ಬೆಂಗಳೂರು ನಗರ. ಆದೇಶ ಸಂಖ್ಯೆ: ಸಿಬಿ 8 14/2005–06 210/ಡಿಇ/ಆರ್6/ 97–98 ದಿನಾಂಕ: 28–05–2005
2) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 22–08–2005.
3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ8/14/2004–06 ದಿನಾಂಕ: 21–11–2006.
5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: PSC/ CNS 2007 ದಿನಾಂಕ: 28–06–2007

**ಪ್ರಸ್ತಾವನೆ:**

ಶ್ರೀ ಕೆ.ಎಂ. ಸುಬ್ರಹ್ಮಣ್ಯ ಪಿಐ (ಹಿಂದೆ ಸದಾಶಿವನಗರ ಪೊಲೀಸ್ ಠಾಣೆ ಬೆಂಗಳೂರು) ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 7 ರಡಿ ದೋಷಾರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷರೋಪಣೆ:**

ಚೀನಾದ ಘನವೆತ್ತ ಪ್ರಧಾನ ಮಂತ್ರಿಯವರಾದ ವೆನ್ ಜಿಯಾಬೊರವರು ನಿಮ್ಮ ವ್ಯಾಪ್ತಿಗೆ ಬರುವ ಬೆಂಗಳೂರಿನ ಭಾರತೀಯ ವಿಜ್ಞಾನ ಸಂಸ್ಥೆಗೆ ದಿ:10–04–2005ರಂದು ಮಧ್ಯಾಹ್ನ 2–30 ಗಂಟೆಗೆ ಭೇಟಿ ನೀಡಿದ ಸಂದರ್ಭದಲ್ಲಿ ನಿಮ್ಮ ಅಧೀನದಲ್ಲಿ ಸೇವೆ ಸಲ್ಲಿಸುತ್ತಿದ್ದ ಶ್ರೀ ಕೆ.ಎಂ. ಸುಬ್ರಹ್ಮಣ್ಯ, ಪಿ.ಐ. ಸದಾಶಿವನಗರ ಪೊಲೀಸ್ ಠಾಣೆ ಬೆಂಗಳೂರು ರವರು ಸೂಕ್ತ ಬಂದೋಬಸ್ತ್ ವ್ಯವಸ್ಥೆಯನ್ನು ನಿಯಮಾನುಸಾರ ಸಮಾರಂಭಕ್ಕೆ ಮುಂಚೆ ಮಾಡಬೇಕಾಗಿದ್ದರೂ ಭದ್ರತಾ ವ್ಯವಸ್ಥೆಯನ್ನು ಸರಿಯಾಗಿ ಮಾಡದೇ ಇದ್ದುದರಿಂದ ಮತ್ತು ಸೂಕ್ತ ತಪಾಸಣೆಯನ್ನು ನಡೆಸದ ಕಾರಣ ತೆನಜಿನ್ ಸನ್‌ಡ್ಯೂ ಎಂಬ ವ್ಯಕ್ತಿಯು ಟಿಬೇಟ್‌ನ ಧ್ವಜವನ್ನು ಎತ್ತಿಹಿಡಿದು ಮುಖ್ಯ ಕಟ್ಟಡದ ಮೇಲೆ ಬೀಸುತ್ತಾ ಘೋಷಣೆಯನ್ನು ಕೂಗಿ ದುರ್ನಡತೆ ತೋರಿಸಲು ಕಾರಣರಾಗಿರುತ್ತಾರೆ. ಮೇಲ್ವಿಚಾರಕರಾದ ನೀವು ಅಗತ್ಯ ಬಂದೋಬಸ್ತ್ ವ್ಯವಸ್ಥೆಯನ್ನು ಮಾಡುವಂತೆ ಸದರಿ ಪಿ.ಐ. ರವರಿಗೆ ಸೂಚನೆ ಹಾಗೂ ಮಾರ್ಗದರ್ಶನ ನೀಡದೇ ಮತ್ತು ಮಾಡಲ್ಪಟ್ಟ ಭದ್ರತೆಯನ್ನು ಪರಿಶೀಲಿಸದೆ ಹಾಗೂ ಮುನ್ನೆಚ್ಚರಿಕೆ ಕ್ರಮ ವಹಿಸದೇ ನಿಷ್ಕಾಳಜಿತನ ತೋರಿ ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನ ತೋರಿಸಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆದೋಷಾರೋಪಣಾ ಪತ್ರ ಹೊರಡಿಸಿ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಡಿಜಿ & ಐಜಿಪಿ ಬೆಂಗಳೂರು, ಇವರು ಮೇಲೆ ಕ್ರಮಸಂಖ್ಯೆ:1 ರಲ್ಲಿ ಓದಲಾದ ದಿನಾಂಕ:28–05–2005ರ ಆದೇಶದಲ್ಲಿ ಅರ್ಜಿದಾರರ ಮುಂದಿನ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಮುಂದೂಡಿದ ದಂಡನೆ ವಿಧಿಸಿ ಹಗೂ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಅರ್ಜಿದಾರರ ಮೇಲ್ಮನವಿ ಅರ್ಜಿಯನ್ನು ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ದಿ:10–04–2005 ರಂದು ಬಂದೋಬಸ್ತ್ ಕರ್ತವ್ಯದ ಜೊತೆಗೆ ವಿಂಡರ್ಸ್ ಮ್ಯಾನರ್ ಹೋಟೆಲ್ ಬಂದೋಬಸ್ತ್ ಕರ್ತವ್ಯಕ್ಕೆ ನೇಮಿಸಿದ್ದು, ಭಾರತೀಯ ವಿಜ್ಞಾನ ಮಂದಿರದಲ್ಲಿನ ಚೈನಾ ಪ್ರಧಾನ ಮಂತ್ರಿಗಳ ಸ್ಥಳದ ಬಂದೋಬಸ್ತ್ ಪೂರ್ಣ ಜವಾಬ್ದಾರಿಯನ್ನು ಎ.ಪಿ.ಸಿ. ಮತ್ತು ಸಿ.ಸಿ.ಬಿ. ಮೇಲಾಧಿಕಾರಿಗಳಿಗೆ ವಹಿಸಲಾಗಿದೆ. ಪ್ರಸ್ತುತ ಸ್ಥಳದಲ್ಲಿಯೇ ಅರ್ಜಿದಾರರು ಇರುವುದಿಲ್ಲ, ಬೇರೆ ಸ್ಥಳದಲ್ಲಿ ಕರ್ತವ್ಯ ವಹಿಸಿರುವ ಇವರನ್ನು ನಿರ್ಲಕ್ಷತನ ಎಂದು ಗುರುತಿಸಿ ದಂಡನೆ ವಿಧಿಸಿರುವುದು ನ್ಯಾಯ ಸಮ್ಮತವಲ್ಲ. ಆದ್ದರಿಂದ, ಶಿಸ್ತು ಪ್ರಾಧಿಕಾರಿ ವಿಧಿಸಿದ್ದ ದಂಡನಾದೇಶವನ್ನು ರದ್ದುಪಡಿಸಿ, ಅರ್ಜಿದಾರರ ಮೇಲ್ಮನವಿಯನ್ನು ಪುರಸ್ಕರಿಸಿ, ಇವರ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆಗೊಳಿಸಿ, ಸಕ್ರಮಗೊಳಿಸಲು ಹಾಗೂ ಅಮಾನತ್ತಿನ ಅವಧಿಯನ್ನು ಕರ್ತವ್ಯದ ಅವಧಿ ಎಂದು ಪರಿಗಣಿಸಲು ಸರ್ಕಾರ ಉದ್ದೇಶಿಸಿ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿ:28–06–2007ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ತನ್ನ ಸಹಮತಿ ನೀಡಿದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 179 ಪೊಸಿಅ 2006 ಬೆಂಗಳೂರು, ದಿನಾಂಕ: 27ನೇ ಆಗಸ್ಟ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕೆ.ಎಂ. ಸುಬ್ರಹ್ಮಣ್ಯ ಪಿ.ಐ. ಸದಾಶಿವನಗರ ಪೊಲೀಸ್ ಠಾಣೆ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪರಿಷ್ಕರಿಸಿ ಈ ಕೆಳಕಂಡಂತೆ ಆದೇಶಿಸಿದೆ.

1. ಶಿಸ್ತು ಪ್ರಾಧಿಕಾರಿಯ ದಂಡನಾದೇಶವನ್ನು ರದ್ದುಪಡಿಸಿ ಇವರ ವಾರ್ಷಿಕವೇತನ ಬಡ್ತಿಯನ್ನು ಸಕ್ರಮಗೊಳಿಸಿ ಬಿಡುಗಡೆಮಾಡಲು ಆದೇಶಿಸಿದೆ.
2. ಅಮಾನತ್ತಿನ ಅವಧಿಯನ್ನು ಅವರ ಕರ್ತವ್ಯದ ಅವಧಿ ಎಂದು ಆದೇಶಿಸಿದೆ.
3. ಈ ಆದೇಶವು ಶಿಸ್ತು ಪ್ರಾಧಿಕಾರವು ಹೊರಡಿಸಿದ ಆದೇಶದ ದಿನಾಂಕದಿಂದ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: PSC 58 CNS 2007ರ ದಿನಾಂಕ: 28–6–2007ರಲ್ಲಿ ನೀಡಿರುವ ಅಭಿಪ್ರಾಯದಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1609

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ,

(ಪೊಲೀಸ್ ಸೇವೆಗಳು)

**ವಿಷಯ :** ಶ್ರೀ ಪಿ.ಕೆ. ಜಯರಾಂ ಪಿ.ಐ. ನಾಹಜಾನಿ, ಕೋಲಾರರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ ಬೆಂಗಳೂರು. ಇವರ ಆದೇಶ ಸಂಖ್ಯೆ: 2 ಇವಿ/4/2003–04 ಸಂಖ್ಯೆ: ಪನ್ಸಿ ಡಿಇ 90 2003–04 ಒ.ಬಿ. ಸಂಖ್ಯೆ: 39/2004–05 ದಿನಾಂಕ: 8–10–2004.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೈರೆಕ್ಟರ್ ಜನರಲ್ ಮತ್ತು ಇನ್ಸ್ಪೆಕ್ಟರ್ ಜನರಲ್ ಆಫ್ ಪೊಲೀಸ್ ಬೆಂಗಳೂರು, ಆದೇಶ ಸಂಖ್ಯೆ: ಸಿಬಿ(8)10/2005–06 ದಿ:22–07–2005
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:
4) ಕಾರ್ಯದರ್ಶಿ ಕರ್ನಾಟಕ ಲೋಕ ಸೇವಾ ಆಯೋಗ ಪತ್ರ ಸಂಖ್ಯೆ: PSC 53/CNS 2007 ದಿ:06–07–2007

**ಪ್ರಸ್ತಾವನೆ:**

ಶ್ರೀ ಪಿ.ಕೆ. ಜಯರಾಂ ಪಿ.ಐ. ನಾಹಜಾನಿ, ಕೋಲಾರ ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

1. ನಿಮಗೆ ಸಿಓಡಿ ಯಿಂದ ಚಿಂತಾಮಣಿ ಪೊಲೀಸ್ ಠಾಣೆಗೆ ವರ್ಗಾವಣೆ ಆದೇಶ ಬಂದಾಗ ನಿಮ್ಮ ಬಳಿ ಇನ್ನೂ ತನಿಖಾ ಹಂತದಲ್ಲಿದ್ದ ಖೋಟಾ ನೋಟು ಮತ್ತು ಆಯುಧ ಸ್ಫೋಟಕ ಕಾಯ್ದೆ ಕಡತಗಳು ಹಾಗೂ ಜಪ್ತು ಮಾಡಲಾದ ಮಾಲುಗಳಿದ್ದು, ಅವುಗಳನ್ನು ಶ್ರೀ.ಎಸ್.ಡಿ.ಮೊಕಾಶಿ, ಪಿಐ., ಶ್ರೀ ಎಂ.ಎ.ನಾಗನೂರು, ಪಿಐ ಮತ್ತು ಶ್ರೀ ಚನ್ನಯ್ಯ, ಪಿಎಸ್ಐ ರವರುಗಳಿಗೆ ಕಡತಗಳನ್ನು ವಹಿಸಿಕೊಡುವಂತೆ, ಸಿಓಡಿಯ ಪೊಲೀಸ್ ಆಯುಕ್ತರು, ಆದೇಶ ನೀಡಿದ್ದರೂ ನೀವು ಸಂಬಂಧಪಟ್ಟವರಿಗೆ ಕಡತಗಳನ್ನು ವಹಿಸಿಕೊಡದೆ ತಮ್ಮ ಬಳಿಯೇ ಇಟ್ಟುಕೊಂಡು ಕರ್ತವ್ಯದಲ್ಲಿ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನ ತೋರಿಸಿರುತ್ತೀರಿ.
2. ನೀವು, ದೊಡ್ಡಪೇಟೆ ಪೊಲೀಸ್ ಠಾಣೆ ಮೊ.ಸಂ.100/96 ಕಲಂ 489(ಬಿ) ಮತ್ತು (ಸಿ) ಐಪಿಸಿ ಪ್ರಕರಣದಲ್ಲಿ ತನಿಖೆ ಮಾಡಿ, ನ್ಯಾಯಾಲಯಕ್ಕೆ ದೋಷಾರೋಪಣೆ ಪಟ್ಟಿ ಸಲ್ಲಿಸಿ, ನ್ಯಾಯಾಲಯವು ಪಿ.ಎಫ್.ನಂ.75/96 ರಲ್ಲಿ 28 ನೂರು ರೂಪಾಯಿ ಮುಖ ಬೆಲೆಯ ಖೋಟಾ ನೋಟುಗಳನ್ನು ಹಾಗೂ ಪಿ.ಎಫ್.ನಂ.75/96 ರಲ್ಲಿ ಜಪ್ತಾದ ನೋಟು ಗಳನ್ನು ಹಾಜರುಪಡಿಸದೆ ನ್ಯಾಯಲಯದ ಅನುಮತಿ ಇಲ್ಲದೆ ರೂ.21,100/– ಗಳನ್ನು ಸಾಕ್ಷಿದಾರರಿಗೆ ಕೊಟ್ಟು, ಕರ್ತವ್ಯದಲ್ಲಿ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನ ತೋರಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು ಕೇಂದ್ರ ವಲಯ ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 8–10–2004ರ ಆದೇಶದಲ್ಲಿ ಅರ್ಜಿದಾರರ ವೇತನವನ್ನು ಹುದ್ದೆಯ ಮೂಲ ವೇತನಕ್ಕೆ ಮುಂದಿನ ವೇತನ ಬಡ್ತಿಗೆ ಧಕ್ಕೆಯಾಗುವಂತೆ ಒಂದು ವರ್ಷ ಕಾಲ ಇಳಿಸಲಾದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ: 22-07-2005 ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಎಸಗಿರುವ ಆರೋಪ ಅವರ ಹುದ್ದೆಗೆ ಘನತೆ ತರುವಂತದ್ದಾಗಿರುವುದಿಲ್ಲ. ಆದರೂ ಆರೋಪಿತರಿಗೆ ಅವರು ಎಸಗಿರುವ ಆರೋಪಕ್ಕೆ ಶಿಸ್ತು ಪ್ರಾಧಿಕಾರ ತೀವ್ರತರಹದ ದಂಡ ವಿಧಿಸಿರುತ್ತದೆ ಎಂದು ಭಾವಿಸಬಹುದಾಗಿದೆ. ವರ್ಗಾವಣೆಗೊಂಡ ನಂತರವಾದರೂ ಎಲ್ಲಾ ದಾಖಲೆ ಪ್ರಭಾರವನ್ನು ನಂತರದಲ್ಲಿ ವಹಿಸಿಕೊಡುವ ಸಂದರ್ಭದಲ್ಲಿ ಈ ಘಟನೆಗಳು ಸಂಭವಿಸಲು ಕಾರಣವಾಗಿವೆ. ಆದ್ದರಿಂದ ಶಿಸ್ತು ಪ್ರಾಧಿಕಾರಿ ವಿಧಿಸಿದ ದಿ: 08-10-2004 ರ ದಂಡನಾದೇಶವನ್ನು ಮಾರ್ಪಡಿಸಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆ ಆಗದಂತೆ ಮಾರ್ಪಡಿಸಲು ಸರ್ಕಾರ ಉದ್ದೇಶಿಸಿದೆ.

ಈ ಸಂಬಂದ ಕರ್ನಾಟಕ ಲೋಕ ಸೇವಾ ಆಯೋಗದ ಅಭಿಪ್ರಾಯ ಕೋರಲಾಗಿತ್ತು. ಆಯೋಗವು ದಿ: 6-07-2007ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ತನ್ನ ಸಹಮತಿ ನೀಡಿದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 181 ಪೊಸಿಅ 2006 ಬೆಂಗಳೂರು, ದಿನಾಂಕ: 10ನೇ ಆಗಸ್ಟ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಪಿ.ಕೆ. ಜಯರಾಂ ಪಿ.ಐ. ನಾಹಜಾನಿ, ಕೋಲಾರ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ ಈ ಕೆಳಕಂಡಂತೆ ಆದೇಶಿಸಿದೆ. ಶಿಸ್ತು ಪ್ರಾಧಿಕಾರಿ ದಂಡನಾದೇಶವನ್ನು ಮಾರ್ಪಡಿಸಿ ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗದಂತೆ ಮಾರ್ಪಡಿಸಲು ಆದೇಶಿಸಿದೆ.

ಈ ಆದೇಶವು ಶಿಸ್ತು ಪ್ರಾಧಿಕಾರವು ಹೊರಡಿಸಿದ ಆದೇಶದ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: PSC 53 CNS 2007 ದಿನಾಂಕ: 06-07-2007ರಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1607

**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ,
(ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಆರ್.ಬಿ. ಮಾಳೇದವರ, ಪಿ.ಎಸ್.ಐ. ರವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿ ಕುರಿತು.

**ಓದಲಾಗಿದೆ:**
1) ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ಇವರ ಆದೇಶ ಸಂಖ್ಯೆ: ಡಿ.ಇ.31/ ಉ.ವ./2005, ದಿನಾಂಕ:3/12/2005.
2) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 31/12/2005
3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು/(2)78/2006-07, ದಿನಾಂಕ: 15/9/2006.

**ಪ್ರಸ್ತಾವನೆ:**

ಶ್ರೀ ಆರ್.ಬಿ. ಮಾಳೇದವರ, ಪಿ.ಎಸ್.ಐ. ಬೆಳಗಾಂ ಜಿಲ್ಲೆ ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ಶ್ರೀ ಆರ್.ಬಿ. ಮಾಳೇದವರ, ಪಿ.ಎಸ್.ಐ. ರವರಾದ ನೀವು ಕಾಕತಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ: 13/12/2004 ರಂದು ಬೆಳಗಾವಿಯಲ್ಲಿ ಆರಕ್ಷಕಾಧೀಕ್ಷಕರು, ಬೆಳಗಾವಿ ರವರ ಕಾರ್ಯಾಲಯದಲ್ಲಿ, ಜಿಲ್ಲೆಯಲ್ಲಿ ನಡೆದ ದರೋಡೆ, ಜಬರಿ ಕಳುವು ಗುನ್ನೆಗಳು ಆಗದಂತೆ ಕಟ್ಟುನಿಟ್ಟಿನ ಕ್ರಮ ಕೈಗೊಳ್ಳಲು ಮತ್ತು ಪೆಟ್ರೋಲ್ ಬಂಕಗಳಿಗೆ ಆಯುಧ ಸಮೇತ ಸಿಬ್ಬಂದಿಗಳನ್ನು ನೇಮಿಸಲು ಸಲಹೆ ಸೂಚನೆಗಳನ್ನು ನೀಡಲಾಗಿದ್ದು ಅಲ್ಲದೆ ನಿಮ್ಮ

ಮೇಲಾಧಿಕಾರಿ ಗಳಾದ ಡಿ.ಎಸ್.ಪಿ. ಬೆಳಗಾವಿ ಗ್ರಾಮೀಣ ರವರು ಸಹಿತ ಅದೇ ದಿನ ಸಾಯಂಕಾಲ 18–30 ಗಂಟೆಯಿಂದ 20–00 ಗಂಟೆಯವರೆಗೆ ಉಪ ವಿಭಾಗದ ಎಲ್ಲ ಪಿ.ಎಸ್.ಐ./ಸಿಪಿಐ ರವರ ಸಭೆ ತೆಗೆದುಕೊಂಡು ಪೆಟ್ರೋಲ್ ಬಂಕ್‌ಗಳಿಗೆ ಕಳುವು, ಕಳ್ಳತನದ ಪ್ರಕರಣಗಳು ಆಗದಂತೆ ನೋಡಿಕೊಳ್ಳಲು ಹಾಗೂ ಠಾಣಾ ಹದ್ದಿಯಲ್ಲಿರುವ ಪೆಟ್ರೋಲ್ ಬಂಕಗಳಿಗೆ ಆಯುಧ ಸಮೇತ ಸಿಬ್ಬಂದಿಗಳನ್ನು ನೇಮಿಸಲು ಹಾಗೂ ಈ ಹಿಂದೆ ಜರುಗಿದ ಗುನ್ನೆಗಳನ್ನು ಪತ್ತೆ ಹಚ್ಚಲು ಮತ್ತು ಸೂಕ್ತ ನಾಕಾಬಂದಿ ಡ್ಯೂಟಿ ಪ್ರಾರಂಭಿಸುವ ಬಗ್ಗೆ ಸೂಕ್ತ ಸಲಹೆ ಸೂಚನೆಗಳನ್ನು ನೀಡಿರುತ್ತಾರೆ. ನಿಮ್ಮ ಮೇಲಾಧಿಕಾರಿಗಳು ನೀಡಿದ ಸಲಹೆ ಸೂಚನೆಗಳನ್ನು ಕಟ್ಟುನಿಟ್ಟಾಗಿ ಪಾಲಿಸದೆ ಮತ್ತು ಠಾಣಾ ಹದ್ದಿಯಲ್ಲಿರುವ ಪೆಟ್ರೋಲ್ ಬಂಕಗಳಿಗೆ ಸಿಬ್ಬಂದಿ ಜನರನ್ನು ಆಯುಧ ಸಮೇತ ನೇಮಿಸದೆ ಇದ್ದುದರಿಂದ ದಿನಾಂಕ: 16/12/2004 ರಂದು ರಾತ್ರಿ ಸುಳಗಾ ಗ್ರಾಮ ಹದ್ದಿಯಲ್ಲಿರುವ ಗಜಾನನ ಟ್ರೇಡರ್ಸ ಪೆಟ್ರೋಲ್ ಬಂಕನಲ್ಲಿ ರಾತ್ರಿ ವೇಳೆಯಲ್ಲಿ ಜಬರಿ ಕಳುವು ಆಗಿ ಈ ಬಗ್ಗೆ ಕಾಕತಿ ಠಾಣೆಯಲ್ಲಿ ಅಪರಾಧ ಸಂಖ್ಯೆ: 190/2004 ಕಲಂ 394, 341, 342, 323, 506 ಸಹ ಕಲಂ 34 ಐ.ಪಿ.ಸಿ. ನೇದ್ದರಡಿ ಪ್ರಕರಣ ದಾಖಲಾಗಲು ಕಾರಣೀಭೂತರಾಗಿ ನಿಮ್ಮ ಕರ್ತವ್ಯದಲ್ಲಿ ಘೋರ ಬೇಜವಾಬ್ದಾರಿತನ ಮತ್ತು ನಿಷ್ಕಾಳಜಿತನ ಪ್ರದರ್ಶಿಸಿರುವಿರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರು ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ: 03–12–2005 ರ ಆದೇಶದಲ್ಲಿ ಅರ್ಜಿದಾರರ ಮುಂಬರುವ ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗೆ ಪರಿಣಾಮ ಬೀರುವಂತೆ ಮುಂದೂಡಲಾಗಿದೆ. ಹಾಗೂ ಅಮಾನತ್ತಿನಲ್ಲಿದ್ದ ಅವಧಿಯನ್ನು ಅಮಾನತ್ತಿನಲ್ಲಿದ್ದಂತೆಯೇ ಎಂದು ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರೊಬ್ಬ ಜವಾಬ್ದಾರಿಯುತ ಪೊಲೀಸ್ ಅಧಿಕಾರಿಯಾಗಿದ್ದು ತಮ್ಮ ಕರ್ತವ್ಯದಲ್ಲಿ ನಿರ್ಲಕ್ಷತನ ಎಸಗಿದ ಆರೋಪವು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುತ್ತದೆ. ದೋಷಾರೋಪಕ್ಕೆ ತಕ್ಕಂತೆ ಶಿಕ್ಷೆ ವಿಧಿಸಲಾಗಿದೆ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 130 ಪೊಸಿಅ 2007 ಬೆಂಗಳೂರು, ದಿನಾಂಕ: 4ನೇ ಆಗಸ್ಟ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಆರ್.ಬಿ. ಮಾಳೇದವರ, ಪಿ.ಎಸ್.ಐ. ಬೆಳಗಾಂ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1606

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ,

(ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ರಾಮಕೃಷ್ಣ, ಪಿ.ಸಿ. 913, ಸಿ.ಎ.ಆರ್. (ಕೇಂದ್ರ), ಬೆಂಗಳೂರು ನಗರ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮಿಷನರ್, CAR (ಕೇಂದ್ರ) ಬೆಂಗಳೂರು ದಿನಾಂಕ: 31–01–1989.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಕಮಿಷನರ್, ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು(87) 88–89, ದಿನಾಂಕ: 9–8–1989.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 24–10–2004
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)73/2004, ದಿನಾಂಕ: 30–12–2006 .

**ಪ್ರಸ್ತಾವನೆ:**

ಶ್ರೀ ರಾಮಕೃಷ್ಣ, ಪಿ.ಸಿ. 913, ಸಿ.ಎ.ಆರ್. (ಕೇಂದ್ರ), ಬೆಂಗಳೂರು ನಗರ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

That, on 21st May 1979, the appellant had contracted marriage with Smt. Sunanda in accordance with the rituals of Hindu Customs. That, the appellant's wife Smt. Sunanda has uttarly failed in her matrimonial duties. That, after the wed-lock, the appellant was taking, adequate care and she was treated with utmost dignity, etc., In other words, the appellant had discharged his matrimonial obligations.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮಿಷನರ್ ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 31-1-1989 ರ ಆದೇಶದಲ್ಲಿ ಅರ್ಜಿದಾರರವರು ತಮ್ಮ ವೇತನವನ್ನು ಹುದ್ದೆಯ ಕನಿಷ್ಠ ಮಟ್ಟಕ್ಕಿಳಿಸಿ ಮುಂದಿನ ವಾರ್ಷಿಕ ವೇತನವನ್ನು ಐದು ವರ್ಷಗಳ ಕಾಲ ಮುಂದಕ್ಕೆ ಕುಂದು ತರುವಂತೆ ಮುಂದೂಡಿ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಕಮಿಷನರ್ ಬೆಂಗಳೂರು ಇವರು ಮೇಲ್ಮನವಿಯನ್ನು ಪರಿಗಣಿಸಿ ಸದರಿ ಶಿಕ್ಷೆಯನ್ನು ಮಾರ್ಪಡಿಸಿ ಅವರ ಮುಂದಿನ ವಾರ್ಷಿಕ ವೇತನವನ್ನು ಎರಡು ವರ್ಷಗಳ ಕಾಲ ಎರಡು ಹಂತ ತಗ್ಗಿಸಿ ಅವರು ಮುಂದೆ ಗಳಿಸುವ ವಾರ್ಷಿಕ ವೇತನ ಹೆಚ್ಚಳದ ಮೇಲೆ ಪರಿಣಾಮ ಬೀರುವಂತೆ ಆದೇಶಿಸಿದೆ. ಪೊಲೀಸ್ ಕಮಿಷನರ್ ಬೆಂಗಳೂರು ರವರ ಆದೇಶ ದಿ: 09-08-1989.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇಲಾಖಾ ವಿಚಾರಣೆಯಲ್ಲಿ ಇವರು ಎರಡನೆ ಮದುವೆಯಾಗಿರುವುದು ಸಾಬೀತಾಗಿದ್ದು, ಈ ಆರೋಪಕ್ಕೆ ನೌಕರರನ್ನು ಕಡ್ಡಾಯವಾಗಿ ಸೇವೆಯಿಂದ ನಿವೃತ್ತಿ ಮಾಡಬಹುದಾಗಿದೆ. ಮೇಲ್ಮನವಿ ಪ್ರಾಧಿಕಾರವು ಈಗಾಗಲೆ ಶಿಕ್ಷೆಯನ್ನು ಕಡಿಮೆ ಮಾಡಿರುವುದರಿಂದ ಈ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 142 ಪೊಸಿಅ 2007 ಬೆಂಗಳೂರು, ದಿನಾಂಕ: 04ನೇ ಆಗಸ್ಟ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ರಾಮಕೃಷ್ಣ, ಪಿ.ಸಿ. 913, ಸಿ.ಎ.ಆರ್. (ಕೇಂದ್ರ), ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1605

**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ,
(ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಸ್.ಜಿ. ಪೂಜಾರ್, ಪೂರ್ಣಕಾಲಿಕ ಜಾಡಮಾಲಿ, ಶಿಗ್ಗಾಂವ್, ಪೊಲೀಸ್ ಠಾಣೆ, ಹಾವೇರಿ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಎಸ್.ಪಿ. ಹಾವೇರಿ ಇವರ ಆದೇಶ ಸಂಖ್ಯೆ: ಸಿಬ್ಬಂದಿ/2/ಇವಿ/02/2003, ದಿನಾಂಕ: 28-06-2003.
2) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 16-06-2006.
3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)75/2006-07, ದಿನಾಂಕ:17-02-2007.

**ಪ್ರಸ್ತಾವನೆ:**

ಶ್ರೀ ಎಸ್.ಜಿ. ಪೂಜಾರ್, ಪೂರ್ಣಕಾಲಿಕ ಜಾಡಮಾಲಿ, ಶಿಗ್ಗಾಂವ್, ಪೊಲೀಸ್ ಠಾಣೆ, ಹಾವೇರಿ ಜಿಲ್ಲೆ ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 11ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

1. ಶ್ರೀ ಎಸ್.ಜಿ. ಪೂಜಾರ್, ಪೂರ್ಣಕಾಲಿಕ ಜಾಡಮಾಲಿ, ಶಿಗ್ಗಾಂವ್, ಪೊಲೀಸ್ ಠಾಣೆ, ನೀವು ಜಾಡಮಾಲಿ ಕರ್ತವ್ಯವನ್ನು ಸ್ವತ: ನಿರ್ವಹಿಸದೇ ಸರಕಾರದ ಸಂಪೂರ್ಣ ವೇತನ ಸ್ವತ: ಪಡೆದು

ಜಾಡಮಾಲಿ ಕರ್ತವ್ಯಕ್ಕೆ ಚೆನ್ನಬಸಪ್ಪ ಹನಮಂತಪ್ಪ ಧಾರವಾಡ ಎಂಬುವವರನ್ನು ಕೆಲಸಕ್ಕೆ ನೇಮಿಸಿಕೊಂಡು ಸದರಿಯವರಿಗೆ ಮಾಸಿಕ ರೂ.1200–00 ನೀಡಿ ಆಧ್ಯ ಕರ್ತವ್ಯದಲ್ಲಿ ತೀವ್ರ ಕರ್ತವ್ಯ ನಿರ್ಲಕ್ಷತನ ಪ್ರದಶಿಸಿರುವರಲ್ಲದೇ ತೀವ್ರ ಕರ್ತವ್ಯಲೋಪ, ಚ್ಯೂತಿ ಪ್ರದರ್ಶಿಸಿ ಸರಕಾರಕ್ಕೆ ವಂಚನೆ ಮಾಡಿ ದುರ್ನಡತೆ ಪ್ರದರ್ಶಿಸುತ್ತಿರುವಿರಿ.

2. ಪೊಲೀಸ್ ಠಾಣೆ, ವೃತ್ತ ಕಚೇರಿ ಮತ್ತು ಉಪ–ವಿಭಾಗದ ಕಚೇರಿಯಲ್ಲಿಯ ಗುಪ್ತ ವಿಷಯಗಳನ್ನು ಮತ್ತು ದಾಖಲಾದ ಪ್ರಕರಣಗಳ ವಿಷಯಗಳನ್ನು ಸೂಕ್ಷ್ಮವಾಗಿ ತಿಳಿದುಕೊಂಡು ಸಂಬಂಧ ಪಟ್ಟವರಿಗೆ ತಿಳಿಸಿ, ಇಲಾಖೆ ಗೌಪ್ಯತೆ ಕಾಪಾಡದೇ, ಬಹಿರಂಗ ಪಡಿಸುತ್ತಿದ್ದು, ತೀವ್ರ ದುರ್ನಡತೆ–ಪ್ರದರ್ಶಿಸುತ್ತಿರುವಿರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಎಸ್.ಪಿ. ಹಾವೇರಿ ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 28–06–2003ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ಪದಚ್ಯುತಿಗೊಳಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಎಸಗಿರುವ ಕೃತ್ಯ ಘೋರ, ತಮಗೆ ನೀಡಿದ ಹುದ್ದೆಯನ್ನು ಬೇರೊಬ್ಬರಿಗೆ ಮಾರಿಕೊಂಡು, ತಮ್ಮ ಸಂಬಳದಲ್ಲಿ ಅವರಿಗೆ ಕಡಿಮೆ ಸಂಬಳ ನೀಡಿ ದುಡಿಸಿಕೊಂಡಿರುವುದಲ್ಲದೆ, ಗೌಪ್ಯತೆಯನ್ನು ಕಾಪಾಡದೆ ಬಹಿರಂಗ ಪಡಿಸಿರುವುದು ಸಾಬೀತಾಗಿರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 149 ಪೊಸಿಅ 2007 ಬೆಂಗಳೂರು, ದಿನಾಂಕ: 09ನೇ ಆಗಸ್ಟ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಜಿ. ಪೂಜಾರ್, ಪೂರ್ಣಕಾಲಿಕ ಜಾಡಮಾಲಿ, ಶಿಗ್ಗಾಂವ್, ಪೊಲೀಸ್ ಠಾಣೆ, ಹಾವೇರಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1584

**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ,
(ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎ.ಎನ್. ಗಾಳಿ ಪಿ.ಐ. ಘಂಟಕೇರಿ ಪೊಲೀಸ್ ಠಾಣೆ, ಹುಬ್ಬಳ್ಳಿ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಕಮಿಷನರ್, ಹುಬ್ಬಳ್ಳಿ ಧಾರವಾಡ ಇವರ ಆದೇಶ ಸಂಖ್ಯೆ: ಸಿಪಿ/ಸಿಬ್ಬಂದಿ–3/ನಿಯಮ–7/15/05–06 ದಿನಾಂಕ: 09–08–2005.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿಜಿ & ಐಜಿಪಿ ಬೆಂಗಳೂರು ಇವರ ಆದೇಶ ಸಂಖ್ಯೆ: ಸಿಬಿ/8/41/2005–06, ದಿನಾಂಕ: 02–06–2006.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:-----
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ/8/41/05–06, ದಿನಾಂಕ: 05–05–2007.

**ಪ್ರಸ್ತಾವನೆ:**

ಶ್ರೀ ಎ.ಎನ್. ಗಾಳಿ, ಪಿ.ಐ. ಘಂಟಕೇರಿ ಪೊಲೀಸ್ ಠಾಣೆ, ಹುಬ್ಬಳ್ಳಿ ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ನೀವು ಹುಬ್ಬಳ್ಳಿ ಗ್ರಾಮೀಣ ಪೊಲೀಸ್ ಠಾಣೆ, ಧಾರವಾಡ ಜಿಲ್ಲೆಯ ಗುನ್ನಾ ನಂ.227/03 ರಲ್ಲಿ ತನಿಕಾಧಿಕಾರಿಯಾಗಿದ್ದು ಸದರಿ ಪ್ರಕರಣದಲ್ಲಿ ಅನೇಕ ಸಲ ಸಮನ್ಸ್ ಮತ್ತು ವಾರೆಂಟ್ ಹೊರಡಿಸಿದರೂ ಸಹ ಸದರಿ

ಗುನ್ಹೆಯಲ್ಲಿ ನ್ಯಾಯಾಲಯಕ್ಕೆ ಹಾಜರಾಗಿ ಸಾಕ್ಷಿ ನುಡಿಯಲು ವಿಫಲರಾಗಿದ್ದು ಇರುತ್ತದೆ. ನೀವು ಒಬ್ಬ ಜವಾಬ್ದಾರಿಯುತ ಅಧಿಕಾರಿಯಾಗಿದ್ದು, ನ್ಯಾಯಾಲಯಕ್ಕೆ ಹಾಜರಾಗಿ ಸಾಕ್ಷಿ ನುಡಿಯದೇ ನಿಮ್ಮ ಕರ್ತವ್ಯದಲ್ಲಿ ನಿರ್ಲಕ್ಷತನ, ನಿಷ್ಕಾಳಜಿತನ ಮತ್ತು ತೀವ್ರ ಉದಾಸೀನತೆ ತೋರ್ಪಡಿಸಿದ ಅಪರಾಧ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಕಮಿಷನರ್ ಹುಬ್ಬಳ್ಳಿ ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ: 09-08-2005ರ ಆದೇಶದಲ್ಲಿ ಅರ್ಜಿದಾರರ ಮುಂಬರುವ ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗೆ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿಜಿ & ಐಜಿಪಿ ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 02-06-2006ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿದ್ದು ಶಿಸ್ತಿನಿಂದ ಜವಾಬ್ದಾರಿತನದಿಂದ ಕರ್ತವ್ಯ ನಿರ್ವಹಿಸಬೇಕಾಗಿರುವುದು ಆದ್ಯ ಕರ್ತವ್ಯ, ಆದರೆ ಇವರು ತಮ್ಮ ವೃತ್ತಿಯಲ್ಲಿ ಬೇಜವಾಬ್ದಾರಿತನ ನಿರ್ಲಕ್ಷತೆ ಎಸಗಿರುವುದು ದಾಖಲೆಗಳಿಂದ ಕಂಡು ಬರುತ್ತಿರುವುದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಲಘು ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 156 ಪೊಸಿಅ 2007 ಬೆಂಗಳೂರು, ದಿನಾಂಕ: 13ನೇ ಆಗಸ್ಟ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎ.ಎನ್. ಗಾಳಿ, ಪಿ.ಐ. ಘಂಟಕೇರಿ ಪೊಲೀಸ್ ಠಾಣೆ, ಹುಬ್ಬಳ್ಳಿ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1583

**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ,
(ಪೊಲೀಸ್ ಸೇವೆಗಳು)

**ವಿಷಯ :** ಶ್ರೀ ಡಿ. ರಾಮಕೃಷ್ಣ, ಆರ್.ಪಿ.ಸಿ. 343 ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರಿ ಹಾಗೂ ಎಸ್.ಪಿ. ರೈಲ್ವೇಸ್ ಬೆಂಗಳೂರು, ಇವರ ಜ್ಞಾಪನ ಸಂಖ್ಯೆ: ಶಿಕ್ಷೆ/ಸಾಮನ್ಯ/20/2005-06, ದಿನಾಂಕ:31/12/2005.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿಐಜಿಪಿ ರೈಲ್ವೇಸ್ ಬೆಂಗಳೂರು ಇವರ ಆದೇಶ ಸಂಖ್ಯೆ: ಸಿಬ್ಬಂದಿ/27/2006, ದಿನಾಂಕ:06-04-2006.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:04-06-2006.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು/2/81/2006-07, ದಿನಾಂಕ:05-05-2007.

**ಪ್ರಸ್ತಾವನೆ :**

ಶ್ರೀ ಡಿ. ರಾಮಕೃಷ್ಣ, ಆರ್.ಪಿ.ಸಿ.343 ಬೆಂಗಳೂರು, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ರೀತ್ಯಾ ಜ್ಞಾಪನ ಪತ್ರ ಹೊರಡಿಸಲಾಗಿದೆ.

**ದೋಷರೋಪಣೆ:**

ಶ್ರೀ ಡಿ. ರಾಮಕೃಷ್ಣ, ಆರ್.ಪಿ.ಸಿ.343 ಬೆಂಗಳೂರು ಗ್ರಾಮಾಂತರ ರೈಲ್ವೆ ಪೊಲೀಸ್ ಠಾಣೆ ರವರು ದಿನಾಂಕ: 20-01-2005ರಿಂದ 27-01-2005ರ ವರೆಗೆ 8 ದಿವಸಗಳ ಕಾಲ ಅನಧಿಕೃತ ಗೈರುಹಾಜರಾದ ಕುರಿತು.

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಎಸ್.ಪಿ. ರೈಲ್ವೇಸ್ ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 31–12–2006 ರ ಆದೇಶದಲ್ಲಿ ಅರ್ಜಿದಾರರನ್ನು ದಿನಾಂಕ: 20–1–2005 ರಿಂದ 27–1–2005ರ ವರೆಗೆ ಸಂಬಳ ರಹಿತ ರಜೆ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿಐಜಿಪಿ ರೈಲ್ವೇಸ್ ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ: 06–04–2006ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಪರಿಷ್ಕರಣ ಮೇಲ್ಮನವಿಯನ್ನು ಪುರಸ್ಕರಿಸಲು ಯಾವುದೇ ಕಾರಣಗಳು ಇರುವುದಿಲ್ಲ ಹಾಗೂ ಸಂಬಳ ರಹಿತ ರಜೆಯು ಶಿಕ್ಷೆ ಎನಿಸುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ಬೇಜವಾಬ್ದಾರಿತನ ಪ್ರದರ್ಶಿಸಿದ್ದು ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿ ಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 160 ಪೊಸಿಅ 2007 ಬೆಂಗಳೂರು, ದಿನಾಂಕ: 10ನೇ ಆಗಸ್ಟ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಡಿ. ರಾಮಕೃಷ್ಣ, ಆರ್.ಪಿ.ಸಿ. 343 ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1582

**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ,
(ಪೊಲೀಸ್ ಸೇವೆಗಳು)

**ವಿಷಯ :** ಶ್ರೀ ಎಂ.ಬಿ. ಗೊಳಸಂಗಿ, ಪಿಎಸ್ಐ ದಾವಣಗೆರೆ ರವರು ವಾರೆಂಟ್ ಜಾರಿಗೊಳಿಸದ ಕಾರಣ ಇವರ ವಾರ್ಷಿಕ ವೇತನವನ್ನು 6 ತಿಂಗಳ ಅವಧಿಗೆ ಮುಂದೂಡಿದ ಬಗ್ಗೆ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರಿ ಹಾಗೂ ಎಸ್.ಪಿ. ದಾವಣಗೆರೆ ಇವರ ಆದೇಶ ಸಂಖ್ಯೆ: ಸಿಬ್ಬಂದಿ/5/ಇವಿ–2/90/2005, ದಿನಾಂಕ: 23–06–2005.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಮನಿ/ಪೂರ್ವ ವಲಯ, ದಾವಣಗೆರೆ ಇವರ ಆದೇಶ ಸಂಖ್ಯೆ: 30/ಅಪೀಲು/ಸಿಬ್ಬಂದಿ/2/05–06, ದಿನಾಂಕ: 8/18–11–2005.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 26–01–2006
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು/2/21/2006, ದಿನಾಂಕ: 05–08–2006.

**ಪ್ರಸ್ತಾವನೆ :**

ಶ್ರೀ ಎಂ.ಬಿ. ಗೊಳಸಂಗಿ, ಪಿಎಸ್ಐ ದಾವಣಗೆರೆ ಜಿಲ್ಲೆ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 7ರಡಿ ದೋಷಾರೋಪಣಾ ಹೊರಡಿಸಲಾಗಿದೆ.

**ದೋಷರೋಪಣೆ:**

ಗ್ರಾಮ ಪಂಚಾಯತಿ ಚುನಾವಣಾ ಸಂಬಂಧದಲ್ಲಿ ನಿಮ್ಮ ಠಾಣಾ ವ್ಯಾಪ್ತಿಯ ಗುಂಪು ಗಲಭೆಗಳುಳ್ಳ ಗ್ರಾಮವಾದ ಗುಮ್ಮನೂರು ಗ್ರಾಮದಲ್ಲಿ ಸೂಕ್ತ ಮುಂಜಾಗೃತಾ ಕ್ರಮ ಜರುಗಿಸಿ ಕಲಂ, 107, 151 ಸಿ.ಆರ್.ಪಿ.ಸಿ. ರೀತ್ಯ ಪ್ರಕರಣಗಳನ್ನು ದಾಖಲಿಸಲು ನಿಮ್ಮ ಮೇಲಾಧಿಕಾರಿಗಳು ಸೂಚನೆ ನೀಡಿದ್ದರೂ ಸಹಾ ನೀವು ಗುಮ್ಮನೂರು ಗ್ರಾಮದಲ್ಲಿ ಮುಂಜಾಗೃತಾ ಕ್ರಮ ಜರುಗಿಸಿರುವುದಿಲ್ಲ. ಇದರಿಂದಾಗಿ ಗುಮ್ಮನೂರು ಗ್ರಾಮದಲ್ಲಿ ಗ್ರಾಮ ಪಂಚಾಯ್ತಿ ಚುನಾವಣೆಯ ಮತದಾನ ಸಮಯದಲ್ಲಿ ಎರಡು ಗುಂಪುಗಳ ನಡುವೆ ಘರ್ಷಣೆ, ಗಲಾಟೆ ಉಂಟಾಗಿ ಗುನ್ನೆ ನಂ.74/05, 75/05 ಮತ್ತು 76/05 ರೀತ್ಯ ಒಟ್ಟು 3 ದೊಂಬಿ ಪ್ರಕರಣಗಳು ದಾಖಲಾಗಿರುತ್ತವೆ. ಆದ್ದರಿಂದ ನೀವು ನಿಮ್ಮ ಠಾಣಾ ವ್ಯಾಪ್ತಿಯ ಗುಮ್ಮನೂರು ಗ್ರಾಮದಲ್ಲಿ

ಮುಂಜಾಗ್ರತಾ ಕ್ರಮವನ್ನು ಜರುಗಿಸಲು ನಿಮ್ಮ ಮೇಲಾಧಿಕಾರಿಗಳು ನೀಡಿದ ಸೂಚನೆಗಳನ್ನು ಪಾಲನೆ ಮಾಡದೇ ನಿಮ್ಮ ಕರ್ತವ್ಯ ನಿರ್ಲಕ್ಷತನವನ್ನು ಪ್ರದಶಿಸಿದ್ದೀರಿ.

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಎಸ್.ಪಿ. ದಾವಣಗೆರೆ ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 23-06-2005ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಆರು ತಿಂಗಳ ಕಾಲ ಮುಂದೂಡಲಾದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಮನಿ/ಪೂವ/ದಾವಣಗೆರೆ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ: 8/18-11-2005ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾದರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ತಮ್ಮ ಕರ್ತವ್ಯದಲ್ಲಿ ನಿಷ್ಠೆ ತೋರಿಲ್ಲ ಹಾಗೂ ಬೇಜವಾಬ್ದಾರಿ, ಅಸಡ್ಡೆ ಮೇಲಾಧಿಕಾರಿಗಳ ಆದೇಶ ಪಾಲನೆ ಮಾಡುವಲ್ಲಿ ವಿಫಲರಾಗಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಲಘು ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 236 ಪೊಸೆಅ 2007 ಬೆಂಗಳೂರು, ದಿನಾಂಕ: 13ನೇ ಆಗಸ್ಟ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಬಿ. ಗೊಳಸಂಗಿ, ಪಿಎಸ್‌ಐ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1576

**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ,
(ಪೊಲೀಸ್ ಸೇವೆಗಳು)

**ವಿಷಯ :** ಶ್ರೀ ಎಂ.ಜಿ. ರಾಮಕೃಷ್ಣ, ಸಿಪಿಐ, ನೆಲಮಂಗಲ ವೃತ್ತ, ಬೆಂಗಳೂರು ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಮೆಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರಿ ಹಾಗೂ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಬೆಂಗಳೂರುರವರ ಆದೇಶ ಸಂಖ್ಯೆ: ಸಿಬಿ(8)60/2005-06, ದಿನಾಂಕ: 03-07-2006.
2) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 12-03-2007.
3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)60/2005-06, ದಿನಾಂಕ: 23-05-2007.
4) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 89, ಸಿಎನ್‌ಎಸ್ 07 ಪಿಎಸ್‌ಸಿ, ದಿನಾಂಕ: 20-08-2007.

**ಪ್ರಸ್ತಾವನೆ:**

ಶ್ರೀ ಎಂ.ಜಿ. ರಾಮಕೃಷ್ಣ, ಸಿಪಿಐ, ನೆಲಮಂಗಲ ವೃತ್ತ, ಬೆಂಗಳೂರು ಜಿಲ್ಲೆ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ನೀವು ಹಿಂದೆ ಪೊಲೀಸ್ ಇನ್ಸ್‌ಪೆಕ್ಟರ್ ಆಗಿ ಯಲಹಂಕ ಪೊಲೀಸ್ ಠಾಣೆ, ಬೆಂಗಳೂರು ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ಫಿರ್ಯಾದಿ ಶ್ರೀ ನಟಶೇಖರ್ ಬಿನ್ ಸಿದ್ದಲಿಂಗದೇವರು, ಹುಣಸಮಾರನಹಳ್ಳಿ, ಬೆಂಗಳೂರು ರವರು ದಿನಾಂಕ 30-11-2004 ರಿಂದ 7 ಬಾರಿ, ಜಮೀನು ವಿವಾದವನ್ನು ಬಗೆಹರಿಸುವಂತೆ ಕೋರಿ, ದೂರು ನೀಡಿದರೂ ಸಹ, ಮೊಕದ್ದಮೆ ದಾಖಲು ಮಾಡಿ, ಕ್ರಮ ಕೈಗೊಳ್ಳಲು ವಿಫಲರಾಗಿ ನಂತರ ಮತ್ತೊಂದು ಬಾರಿ ದಿನಾಂಕ 17-01-2005 ರಂದು ಫಿರ್ಯಾದಿ ನೀಡಿದ ಮೇಲೆ, ಮೊಕದ್ದಮೆಯನ್ನು ದಾಖಲು ಮಾಡಿದ್ದು, ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತನ ಮತ್ತು ಬೇಜವಾಬ್ದಾರಿತನ ತೋರಿಸಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ: 03–07–2006 ರ ಆದೇಶದಲ್ಲಿ ಅರ್ಜಿದಾರರರಿಗೆ ಅವರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಎರಡು ವರ್ಷ ಕಾಲ ಮುಂದೂಡಲಾದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ಪರಿಶೀಲಿಸಲಾಗಿದೆ. ಅರ್ಜಿದಾರರು ತಮ್ಮ ಮೇಲ್ಮನವಿಯಲ್ಲಿ ಫಿರ್ಯಾದುದಾರರಾದ ಶ್ರೀ ನಟಶೇಖರ್ ರವರಿಗೂ ಹಾಗೂ ಅವರ ಎದುರಾಳಿ ಶ್ರೀ ಚಂದ್ರಶೇಖರ್ ರವರಿಗೆ ಭೂ ವಿವಾದವು ಎಕ್ಸಿಕ್ಯುಟಿವ್ ಮ್ಯಾಜಿಸ್ಟ್ರೇಟ್ ರವರಾದ ಬೆಂಗಳೂರು ಉತ್ತರ ಉಪ ವಿಭಾಗಾಧಿಕಾರಿಯವರ ನ್ಯಾಯಾಲಯದಲ್ಲಿ ವಿಚಾರಣೆ ಹಂತದಲ್ಲಿದ್ದು, ಅವರ ಮಧ್ಯಂತರ ಆಜ್ಞೆ ಇದ್ದಾಗ ಪೊಲೀಸರು ಭೂವಿಯ ವಿಚಾರಲ್ಲಿ ಅಕ್ರಮ ಪ್ರವೇಶದ ಕಲಂ ಅನ್ವಯ ಮೊಕದ್ದಮೆ ದಾಖಲು ಮಾಡಲು ಸಾಧ್ಯವಿರುವುದಿಲ್ಲ. ಅಲ್ಲದೇ ಎಕ್ಸಿಕ್ಯೂಟಿವ್ ಮ್ಯಾಜಿಸ್ಟ್ರೇಟ್ ರವರ ಶ್ರೀ ನಟಶೇಖರ್ ರವರ ಪರವಾಗಿ ಮೊಕದ್ದಮೆ ದಾಖಲು ಮಾಡಲು ಪೊಲೀಸ್ ರವರಿಗೆ ಅಧಿಕಾರ ನೀಡಿರಲಿಲ್ಲ, ಅಲ್ಲದೇ ಇದು ಸಿವಿಲ್ ವ್ಯಾಜ್ಯವಾಗಿದ್ದರಿಂದ ತಾವು ಮೊಕದ್ದಮೆ ದಾಖಲಿಸಿ ಕೊಂಡಿರುವುದಾಗಿ ತಿಳಿಸಿರುತ್ತಾರೆ. ಇವರ ವಾದವನ್ನು ಒಪ್ಪಬಹುದಾಗಿದ್ದು, ನ್ಯಾಯಾಲಯದಲ್ಲಿ ಪ್ರಕರಣ ವಿಚಾರಣೆಯಲ್ಲಿರುವಾಗ ಪೊಲೀಸರು ಮೊಕದ್ದಮೆ ದಾಖಲಿಸಿಕೊಳ್ಳಲು ಅವಕಾಶವಿಲ್ಲ ಎಂಬುದನ್ನು ಒಪ್ಪಬಹುದಾಗಿದೆ. ಆದ್ದರಿಂದ ಶ್ರೀ ಎಂ.ಜಿ. ರಾಮಚಂದ್ರ ಸಿಪಿಐ ಇವರಿಗೆ ಶಿಸ್ತು ಪ್ರಾಧಿಕಾರ ದಿನಾಂಕ: 03/02/2006 ರಂದು ಇವರ ಮೇಲೆ ಹೊರಿಸಲಾದ ದಂಡನಾದೇಶಗಳನ್ನು ರದ್ದುಪಡಿಸಿ ಅವರಿಗೆ ವಾಗ್ದಂಡನೆ ವಿಧಿಸಲು ಸರ್ಕಾರ ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 141 ಪೊಸಿಅ 2007, ಬೆಂಗಳೂರು, ದಿನಾಂಕ: 24ನೇ ಆಗಸ್ಟ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಜಿ. ರಾಮಕೃಷ್ಣ, ಸಿಪಿಐ, ನೆಲಮಂಗಲ ವೃತ್ತ, ಬೆಂಗಳೂರು ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಮೇಲ್ಮನವಿಯನ್ನು ಒಪ್ಪಿ ಶಿಸ್ತು ಪ್ರಾಧಿಕಾರ ವಿಧಿಸಿದ್ದ ಆದೇಶ ದಿನಾಂಕ 03/07/2006 ನ್ನು ರದ್ದುಪಡಿಸಿ 'ವಾಗ್ದಂಡನೆ'ಯನ್ನು ವಿಧಿಸಿ ಆದೇಶಿಸಿದೆ.

ಈ ಆದೇಶವನ್ನು ಪತ್ರಸಂಖ್ಯೆ psc/89 CNS 07 ದಿ: 20/08/2007 ರಲ್ಲಿ ಕರ್ನಾಟಕ ಲೋಕ ಸೇವಾ ಆಯೋಗ ನೀಡಿದ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1558

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ,

(ಪೊಲೀಸ್ ಸೇವೆಗಳು)

**ವಿಷಯ :** ಶ್ರೀ ಎಂ.ಕೆ. ತಮ್ಮಯ್ಯ ಪಿಎಸ್‌ಐ ಹಾಲಿ ಪಿಐ, ಬೆಂಗಳೂರು ಜಿಲ್ಲೆ, ಶ್ರೀ ರಾಮಯ್ಯ, ಎ.ಎಸ್.ಐ. ಹಾಲಿ ಪಿಎಸ್‌ಐ ಸೆಂಟ್ರಲ್ ಪೊಲೀಸ್ ಠಾಣೆ, ಶ್ರೀ ಈಶ್ವರಾಚಾರಿ, ಹೆಚ್.ಸಿ.673, ಹಾಲಿ ಎಎಸ್‌ಐ, ಚಂದ್ರಲೇಔಟ್ ಪೊಲೀಸ್ ಠಾಣೆ, ಶ್ರೀ ಈಶ್ವರಪ್ಪ, ಪಿಸಿ–5163 ಬಸವೇಶ್ವರನಗರ ಪೊಲೀಸ್ ಠಾಣೆ, ಶ್ರೀ ಸದಾಶಿವಯ್ಯ, ಪಿಸಿ–5021 ಹಾಲಿ ಹೆಚ್.ಸಿ.646, ಕಲಾಸಿಪಾಳ್ಯ, ಪೊಲೀಸ್ ಠಾಣೆ, ಶ್ರೀ ಆನಂದ, ಪಿಸಿ–2127 ಹಾಲಿ ಹೆಚ್.ಸಿ.2340, ಕಾಮಾಕ್ಷಿಪಾಳ್ಯ ಪೊಲೀಸ್ ಠಾಣೆ, ಮತ್ತು ಶ್ರೀ ಕೆಂಪಣ್ಣ, ಪಿಸಿ–6057, ಸಿಸಿಬಿ, ಎನ್.ಟಿ.ಪೇಟೆ, ರವರುಗಳು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರಿ ಹಾಗೂ ಡಿಜಿ ಮತ್ತು ಐಜಿಪಿ, ಬೆಂಗಳೂರು. ಇವರ ಆದೇಶ ಸಂಖ್ಯೆ: ಅಪೀಲು(3)43/ 2001–2002 ದಿನಾಂಕ:27–06–2005
2) ಕಾರ್ಯದರ್ಶಿ ಕರ್ನಾಟಕ ಲೋಕ ಸೇವಾ ಆಯೋಗ ಪತ್ರ ಸಂಖ್ಯೆ: PSC 62/CNS 2007 ದಿ:07–07–2007.

**ಪ್ರಸ್ತಾವನೆ :**

ಶ್ರೀ ಎಂ.ಕೆ. ತಮ್ಮಯ್ಯ ಪಿಎಸ್‌ಐ ಹಾಲಿ ಪಿಐ, ಬೆಂಗಳೂರು ಜಿಲ್ಲೆ, ಶ್ರೀ ರಾಮಯ್ಯ, ಎ.ಎಸ್.ಐ. ಹಾಲಿ ಪಿಎಸ್‌ಐ ಸೆಂಟ್ರಲ್ ಪೊಲೀಸ್ ಠಾಣೆ, ಶ್ರೀ ಈಶ್ವರಾಚಾರಿ, ಹೆಚ್.ಸಿ.673, ಹಾಲಿ ಎಎಸ್‌ಐ, ಚಂದ್ರಲೇಔಟ್ ಪೊಲೀಸ್ ಠಾಣೆ, ಶ್ರೀ ಈಶ್ವರಪ್ಪ, ಪಿಸಿ–5163 ಬಸವೇಶ್ವರನಗರ ಪೊಲೀಸ್ ಠಾಣೆ, ಶ್ರೀ ಸದಾಶಿವಯ್ಯ, ಪಿಸಿ–5021 ಹಾಲಿ ಹೆಚ್.ಸಿ.646,

ಕಲಾಸಿಪಾಳ್ಯ, ಪೊಲೀಸ್ ಠಾಣೆ, ಶ್ರೀ ಆನಂದ, ಪಿಸಿ-2127 ಹಾಲಿ ಹೆಚ್.ಸಿ. 2340, ಕಾಮಾಕ್ಷಿಪಾಳ್ಯ ಪೊಲೀಸ್ ಠಾಣೆ, ಮತ್ತು ಶ್ರೀ ಕೆಂಪಣ್ಣ, ಪಿಸಿ-6057, ಸಿಸಿಬಿ, ಎನ್.ಟಿ.ಪೇಟೆ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 6 & 8ರಡಿ ಜಂಟಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ಶ್ರೀ ಎಂ.ಕೆ. ತಮ್ಮಯ್ಯ, ಪಿಎಸ್ಐ, ಶ್ರೀ ರಾಮಯ್ಯ, ಎ.ಎಸ್.ಐ., ಶ್ರೀ ಈಶ್ವರಾಚಾರಿ, ಹೆಚ್.ಸಿ. 673, ಶ್ರೀ ಈಶ್ವರಪ್ಪ, ಪಿಸಿ-5163, ಶ್ರೀ ಸದಾಶಿವಯ್ಯ, ಪಿಸಿ 5021, ಶ್ರೀ ಆನಂದ, ಪಿಸಿ 2127 ಮತ್ತು ಶ್ರೀ ಕೆಂಪಣ್ಣ, ಪಿಸಿ 6057, ರವರಾದ ನೀವುಗಳು ಬಸವೇಶ್ವರ ನಗರ ಪೊಲೀಸ್ ಠಾಣೆಯಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ: 30-12-98 ರಂದು ಶ್ರೀ ಎಸ್.ಎ. ಜಯರಾಮ್ ರಾವ್ ಚೀಫ್ ಮ್ಯಾನೇಜರ್ (ನಿವೃತ್ತಿ) ಎಸ್.ಬಿ.ಐ. ರವರು ನಂ.07, ಎಸ್.ಬಿ.ಐ. ಕಾಲೋನಿ ಬಸವೇಶ್ವರ ನಗರ ಮತ್ತು ಆತನ ಮೃತನಾದ ಸಂಜಯ್ ಜೆ. ರಾವ್ ರವರಿಗೆ ಹಿಂಸೆ ನೀಡಿ, ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಬೇಜವಾಬ್ದಾರಿತನ ಮತ್ತು ದುರ್ನಡತೆಯನ್ನು ತೋರ್ಪಡಿಸಿರುವ ಬಗ್ಗೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಡಿಜಿ ಮತ್ತು ಐಜಿಪಿ ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 27-06-2005 ರ ಆದೇಶದಲ್ಲಿ ಅರ್ಜಿದಾರರುಗಳ ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಒಂದು ವರ್ಷ ಮುಂದೂಡಿದ ಶಿಕ್ಷೆಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರುಗಳು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪ್ರಸ್ತುತ ಪ್ರಕರಣ ಒಂದು ವರದಕ್ಷಿಣೆ ಕಿರುಕುಳ ಸಂಬಂಧ ಕೇಸು ದಾಖಲಾಗಿದ್ದು, ಇಲ್ಲಿ ಪೊಲಿಸ್ ಅಧಿಕಾರಿ ಹಾಗೂ ಸಿಬ್ಬಂದಿ ವರ್ಗದವರು ನಿಷ್ಠೆಯಿಂದ ಕಾರ್ಯನಿರ್ವಹಿಸಿರುವುದು ಕಂಡು ಬರುತ್ತದೆ. ತಮ್ಮನ್ನು ಹಾಗೂ ತಮ್ಮ ಮಗನ್ನು ಪೊಲೀಸರು ದಸ್ತಗಿರಿ ಮಾಡಿ ನ್ಯಾಯಾಲಯ ಬಂಧನಕ್ಕೆ ಒಳಪಡಿಸಿದ್ದರಿಂದ ಈ ರೀತಿ ಪೊಲೀಸ್ ಅಧಿಕಾರಿ ಸಿಬ್ಬಂದಿ ವರ್ಗದವರ ಮೇಲೆ ತಪ್ಪು ಹೊರಿಸಿ, ಅವರಿಗೆ ದಂಡನೆ ಕೊಡಿಸಲು ಕಾರಣರಾಗಿರುತ್ತಾರೆ. ಇಲಾಖಾ ವಿಚಾರಣೆಯಲ್ಲಿ ಕೂಡ ಪೊಲೀಸ್ ಅಧಿಕಾರಿ/ಸಿಬ್ಬಂದಿ ವಗಾದವರ ಮೇಲಿನ ಆರೋಪ ನಿಸ್ಸಂಶಯವಾಗಿ ಸಭೀತಾಗಿರುವುದಿಲ್ಲ, ಆದ್ದರಿಂದ ಶಿಸ್ತು ಪ್ರಾಧಿಕಾರಿ ವಿಧಿಸಿರುವ ದಿನಾಂಕ: 27-06-2005 ರ ದಂಡನಾದೇಶವನ್ನು ರದ್ದುಪಡಿಸಿ, ಅರ್ಜಿದಾರರುಗಳಾದ ಪೊಲೀಸ್ ಅಧಿಕಾರಿ ಹಾಗೂ ಸಿಬ್ಬಂದಿ ವರ್ಗದವರ ವೇತನವನ್ನು ಸಕ್ರಮಗೊಳಿಸಲು ಸರ್ಕಾರ ಉದ್ದೇಶಿಸಿ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ: 7-7-2007 ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ತನ್ನ ಸಹಮತಿ ನೀಡಿದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 479 ಪೊಸಿಅ 2006 ಬೆಂಗಳೂರು, ದಿನಾಂಕ: 10ನೇ ಆಗಸ್ಟ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಕೆ. ತಮ್ಮಯ್ಯ ಪಿಎಸ್ಐ ಹಾಲಿ ಪಿಐ, ಬೆಂಗಳೂರು ಜಿಲ್ಲೆ, ಶ್ರೀ ರಾಮಯ್ಯ, ಎ.ಎಸ್.ಐ. ಹಾಲಿ ಪಿಎಸ್ಐ ಸೆಂಟ್ರಲ್ ಪೊಲೀಸ್ ಠಾಣೆ, ಶ್ರೀ ಈಶ್ವರಾಚಾರಿ, ಹೆಚ್.ಸಿ. 673, ಹಾಲಿ ಎಎಸ್ಐ, ಚಂದ್ರಲೇಔಟ್ ಪೊಲೀಸ್ ಠಾಣೆ, ಶ್ರೀ ಈಶ್ವರಪ್ಪ, ಪಿಸಿ-5163 ಬಸವೇಶ್ವರನಗರ ಇವರುಗಳು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ ಈ ಕೆಳಕಂಡಂತೆ ಆದೇಶಿಸಿದೆ. ಶಿಸ್ತು ಪ್ರಾಧಿಕಾರಿ ದಂಡನಾದೇಶವನ್ನು ರದ್ದುಪಡಿಸಿ, ಮೇಲ್ಕಂಡ ಅರ್ಜಿದಾರರುಗಳಾದ ಪೊಲೀಸ್ ಅಧಿಕಾರಿ ಹಾಗೂ ಸಿಬ್ಬಂದಿ ವರ್ಗದವರ ವೇತನವನ್ನು ಸಕ್ರಮಗೊಳಿಸಲು ಆದೇಶಿಸಿದೆ.

ಈ ಆದೇಶವು ಶಿಸ್ತು ಪ್ರಾಧಿಕಾರವು ಹೊರಡಿಸಿದ ಆದೇಶದ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: PSC 62 CNS 2007 ದಿನಾಂಕ: 07-07-2007ರಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1573

**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ,
(ಪೊಲೀಸ್ ಸೇವೆಗಳು)

**ವಿಷಯ :** ಶ್ರೀ ಪ್ರಕಾಶ್ ಸಿಪಿಸಿ-1929 ಸ್ಟೇಷನ್ ಬಜಾರ ಪೊಲೀಸ್ ಠಾಣೆ ಗುಲ್ಬರ್ಗಾ ಇವರು ಸಲ್ಲಿಸಿರುವ ಮೇಲ್ಮನವಿ ಕುರಿತು.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರಿ ಹಾಗೂ ಎಸ್.ಪಿ. ಗುಲ್ಬರ್ಗಾ ಇವರ ಆದೇಶ ಸಂಖ್ಯೆ: ಪಿಆರ್ 282/01 ಓಬಿ ಸಂಖ್ಯೆ: 1757/01, ದಿನಾಂಕ: 25/7/2001.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, (ಈಶಾನ್ಯ ವಲಯ) ಗುಲ್ಬರ್ಗಾ ಇವರ ಆದೇಶ ಸಂಖ್ಯೆ: ಅಪೀಲು/119/ಈವ/2001 ದಿನಾಂಕ: 05-01-2002.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:09-07-2001
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು/2116/2002-03, ದಿನಾಂಕ:18-02-2003.

**ಪ್ರಸ್ತಾವನೆ :**

ಶ್ರೀ ಪ್ರಕಾಶ್ ಸಿಪಿಸಿ-1929 ಗುಲ್ಬರ್ಗಾ ಜಿಲ್ಲೆ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 7ರಡಿ ದೋಷಾರೋಪಣೆ ಪತ್ರ ಹೊರಡಿಸಿದೆ.

**ದೋಷರೋಪಣೆ :**

ಪೇದೆ 1958 ಶಿವಪುತ್ರಪ್ಪಾ ಸ್ಟೇಷನ್ ಬಜಾರ ಪೊಲೀಸ್ ಠಾಣೆ ರವರಿಗೆ ಪಲಾಯನ ಪತ್ರ ಜಾರಿ ಮಾಡದೇ ಕಾರ್ಯವಿಮುಖತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಬಗ್ಗೆ.

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣೆ ಪತ್ರ ಹೊರಡಿಸಿದೆ. ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಎಸ್.ಪಿ. ಗುಲ್ಬರ್ಗಾ ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 25-07-2001ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಮುಂಬಡ್ತಿ ಆರು ತಿಂಗಳುಗಳ ಕಾಲ ಮುಂದೂಡಿದ ವಾರ್ಷಿಕ ವೇತನ ಮುಂಬಡ್ತಿಯ ಮೇಲೆ ಪರಿಣಾಮ ಬೀರದಂತೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು (ಈಶಾನ್ಯ ವಲಯ) ಗುಲ್ಬರ್ಗಾ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ: 05-01-2002ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ನಿಯಮಾನುಸಾರ ಪಂಚರ ಸಮಕ್ಷಮದಲ್ಲಿ ಜಾರಿ ಮಾಡುವಲ್ಲಿ ವಿಫಲರಾಗಿರುವುದು ಸಾಬೀತಾಗಿರುತ್ತದೆ ಹಾಗೂ ಪರಿಷ್ಕರಿಸಲು ಸಕಾರಣಗಳು/ದಾಖಲೆಗಳು ಇಲ್ಲದಿರುವುದು ಕಂಡುಬರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಬೇಜವಾಬ್ದಾರಿತನ ಪ್ರದರ್ಶಿಸಿರುವುದು, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಲಘುದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 154 ಪೊಸಿಅ 2002 ಬೆಂಗಳೂರು, ದಿನಾಂಕ: 07ನೇ ಆಗಸ್ಟ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಪ್ರಕಾಶ್ ಸಿಪಿಸಿ-1929 ಗುಲ್ಬರ್ಗಾ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1572

**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ,
(ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಸಿದ್ದಪ್ಪ, ಪಿ.ಸಿ. 1146 ಮತ್ತು ಶ್ರೀ ಸಿದ್ದಪ್ಪ, ಸಿ.ಪಿ.ಸಿ 958 ಚಿಟಗುಪ್ಪ ಪೊಲೀಸ್ ಠಾಣೆ, ಹಾಲಿ ಬೀದರ್ ಸಂಚಾರಿ ಪೊಲೀಸ್‌ಠಾಣೆ ಅವರ ಪರಿಷ್ಕರಣ ಮೇಲ್ಮನವಿ ಬಗ್ಗೆ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರಿ ಹಾಗೂ ಎಸ್.ಪಿ. ಬೀದರ್ ಇವರ ಆದೇಶ ಸಂಖ್ಯೆ: 13:ಡಿಇ:2002 ದಿನಾಂಕ: 10-11-2005.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲಬರ್ಗ ಇವರ ಆದೇಶ ಸಂಖ್ಯೆ: ಅಪೀಲು/8/ಈವ/2006 ದಿನಾಂಕ: 19-06-2006.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:02-12-2006 ಮತ್ತು 28-09-2006
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)115/2006-07 ಮತ್ತು ಅಪೀಲು (2)142/2006-07 ದಿನಾಂಕ: 17-02-2007 ಮತ್ತು 24-05-2007.

**ಪ್ರಸ್ತಾವನೆ :**

ಶ್ರೀ ಸಿದ್ದಪ್ಪ, ಪಿ.ಸಿ. 1146 ಮತ್ತು ಶ್ರೀ ಸಿದ್ದಪ್ಪ, ಸಿ.ಪಿ.ಸಿ 958 ಚಿಟಗುಪ್ಪ ಪೊಲೀಸ್ ಠಾಣೆ, ಹಾಲಿ ಬೀದರ್ ಸಂಚಾರಿ ಪೊಲೀಸ್‌ಠಾಣೆ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 6 ಮತ್ತು 8 ರಡಿ ಜಂಟಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ :**

ದಿನಾಂಕ: 4-5-2001 ರಂದು ಬೆಮಲಖೇಢಾ ಪೊಲೀಸ್ ಠಾಣೆಯ ಗುನ್ಹೆ ಸಂ:41-01 ಕಲಂ, 457,380 ಈ.ಪಿ.ಸಿ ಪ್ರಕರಣದಲ್ಲಿ ವಿಚಾರಣೆಗೆ ಕರೆತಂದ ಆರೋಪಿ ರಾಜು ಪಾರ್ದಿ ಈತನು ಕೈಕೊಳ ಮತ್ತು ಸರಪಳಿಯ ಜೊತೆ ಪೊಲೀಸ್ ಠಾಣೆಯ ವಿಶೇಷ ಕಾವಲಿನಿಂದ ತಪ್ಪಿಸಿಕೊಂಡು ಹೋಗುವಲ್ಲಿ ಸಿ.ಪಿ.ಸಿ 1146 ಸಿದ್ದಪ್ಪಾ ಇವರಿಗೆ ಸಿ.ಪಿ.ಸಿ938 ಸಿದ್ದಪ್ಪಾ ಇವರು ತಮ್ಮ ಕರ್ತವ್ಯದಲ್ಲಿರುವಾಗ ರಾಜು ಪಾರ್ದಿ ಇವರ ಬಗ್ಗೆ ಚಾರ್ಜನಲ್ಲಿ ವಹಿಸದೆ ಅಂಧಕಾರದಲ್ಲಿಟ್ಟ ಸಿದ್ದಪ್ಪಾ ಸಿ.ಪಿ.ಸಿ 1146 ಇವರು ಪಹರೆ ಚಾರ್ಜ ವಹಿಸಿಕೊಳ್ಳುವಾಗ ವಶದಲ್ಲಿರುವ ರಾಜು ಪಾರ್ದಿ ಬಗ್ಗೆ ಸೂಕ್ತ ಪರಿಶಲಿಸದೇ ಸಿ.ಪಿ.ಸಿ 1238 ಮಲ್ಲಪ್ಪಾ ಒಂದು ವಿಶೇಷ ಕಾವಲಿಗಾಗಿ ನೇಮಿಸಿದ್ದು, ಚುರುಕುತನದಿಂದ ಇರದೇ ಮಲಗಿಕೊಂಡಿರುತ್ತಾರೆ. ಎಸ್.ಎಚ್.ಓ ಮಲ್ಲಿಕಾರ್ಜುನ ಎಚ್.ಸಿ 729 ಇವರು ದಿನಾಂಕ: 5-4-2001 ರಂದು 0800 ಗಂಟೆಯಿಂದ ದಿನಾಂಕ: 5-4-2001 ರವರಗೆ 0800 ಗಂಟೆಯವರಗೆ ದಿನಚರಿಯಲ್ಲಿ ದೈನಂದಿನ ಆಗು ಹೋಗುಗಳ ವಿವರವನ್ನು ಬರೆಯದೇ ಮತ್ತು ಪಹರೆ ಪುಸ್ತಕದಲ್ಲಿ ಸದರಿ ಆರೋಪಿಗೆ ತಂದಿಟ್ಟಿದ್ದು ಇದರ ಬಗ್ಗೆ ವಿವರ ನಮೂದಿಸದೇ ಪಹರೆ ಮತ್ತು ವಿಶೇಷ ಗಾರ್ಡ್ ಸಿಬ್ಬಂದಿಯವರ ಮೇಲೆ ಸೂಕ್ತ ಪರಿಶೀಲಿಸಿ ನಿಯಂತ್ರಣ ಮಾಡುವಲ್ಲಿ ಸಂಪೂರ್ಣ ಬೇಜವಾಬ್ದಾರಿ, ನಿಷ್ಕಾಳಜಿತನ ಮತ್ತು ಗಂಭೀರ ಕರ್ತವ್ಯ ಲೋಪವೆಸಗಿರುವಿರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಎಸ್.ಪಿ. ಬೀದರ್ ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 10-11-2005 ರ ಆದೇಶದಲ್ಲಿ ಅರ್ಜಿದಾರರರಿಗೆ ಆರೋಪಿತ ಪೊಲೀಸ್ ಅಧಿಕಾರಿ ಸಿ.ಎಚ್.ಸಿ729 ಮಲ್ಲಿಕಾರ್ಜುನ, ಸಿ.ಪಿ.ಸಿ 938 ಸಿದ್ದಪ್ಪಾ, ಸಿ.ಪಿ.ಸಿ 1298 ಹಾಗೂ ಸಿ.ಪಿ.ಸಿ 1146 ಸಿದ್ದಪ್ಪಾ ಅವರ ಮುಂಬರುವ ಒಂದು ವಾರ್ಷಿಕ ವೇತನ ಮುಂಬಡ್ತಿಯು ಭವಿಷ್ಯದ ವೇತನ ಮುಂಬಡ್ತಿಗಳಿಗೆ ಪರಿಣಾಮ ಬೀರದಂತೆ ಒಂದು ವರ್ಷ ತನಕ ಮುಂದೂಡಿದ ಮತ್ತು ಅಮಾನತ್ತಿನಲ್ಲಿನಲ್ಲಿರುವ ಸಿ.ಎಚ್.ಸಿ 279 ಮಲ್ಲಿಕಾರ್ಜುನ, ಸಿ.ಪಿ.ಸಿ 938 ಸಿದ್ದಪ್ಪಾ, ಸಿ.ಪಿ.ಸಿ 1298 ಮಲ್ಲಪ್ಪಾ, ಅವರ ಅಮಾನತ್ತಿನ ಅವಧಿ ದಿ: 15-06-2001 ರಿಂದ ಕೆಳಗಿನ ಅವಧಿಗಳಂತೆ ಸಿ.ಎಚ್.ಸಿ 929 ದಿ: 27-06-2001 ರವರಗೆ ಸಿ.ಪಿ.ಸಿ 1298 ದಿ: 6-7-2001 ರವರಗೆ ಹಾಗೂ ಸಿ.ಪಿ.ಸಿ-938 ದಿ:9-7-2001 ರವರಗೆ ಅಮಾನತ್ತೆಂದೇ ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲಬರ್ಗ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ: 19-06-2006ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇಲಾಖಾ ವಿಚಾರಣೆ ಕೈಗೊಳ್ಳುವ ಪ್ರಾಮುಖ್ಯತೆ ಅದರ ನಿರ್ಣಯ ಅಲ್ಲಿ ಬರುವ ಸನ್ನಿವೇಶ ಮತ್ತು ಸಾಕ್ಷ್ಯಾಧಾರಗಳನ್ನು ಗಮನಿಸಿಯೇ ಇಲಾಖಾ ವಿಚಾರಣಾ ಅಧಿಕಾರಿಯವರು ತಮ್ಮ ನಿರ್ಣಯವನ್ನು ಸಲ್ಲಿಸಿರುತ್ತಾರೆ. ಆ ನಿರ್ಣಯವನ್ನು ಒಪ್ಪಬೇಕಾಗಿರುವುದು ಅನಿವಾರ್ಯ ಕೂಡ ಆದರೆ ಕೆಲವೊಂದು ಸನ್ನಿವೇಶದಲ್ಲಿ ಶಿಸ್ತು ಪ್ರಾಧಿಕಾರವು ಶಿಸ್ತು ಪಾಲನಾ ಇಲಾಖೆಯಲ್ಲಿ ಇಲಾಖಾ ವಿಚಾರಣೆಯ ವರದಿಯನ್ನು ಸಂಪೂರ್ಣವಾಗಿ ಒಪ್ಪಲು ಕಷ್ಟ ಸಾಧ್ಯ ಕೂಡ. ಆದರೂ ಪ್ರಸ್ತುತ ಪ್ರಕರಣದಲ್ಲಿ ಎಸಗಿರುವ ಆರೋಪಕ್ಕೆ ಶಿಸ್ತು ಪಾಲನಾ ಇಲಾಖೆಯಲ್ಲಿ ಈ ರೀತಿಯ ಲಘು ದಂಡನೆಯನ್ನು ವಿಧಿಸದಿದ್ದರೆ ಸಿಬ್ಬಂದಿ ವರ್ಗದವರನ್ನು ಶಿಸ್ತಿನಲ್ಲಿಟ್ಟು ಅವರಿಂದ ಜವಾಬ್ದಾರಿಯುತ ಕೆಲಸ ತೆಗೆದುಕೊಳ್ಳುವುದು ಸಾಧ್ಯವಾಗದೇ ಇರಬಹುದು. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು

ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 181 ಪೊಸಿಅ 2007 ಬೆಂಗಳೂರು, ದಿನಾಂಕ: 15ನೇ ಅಕ್ಟೋಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸಿದ್ದಪ್ಪ, ಪಿ.ಸಿ.1146 ಮತ್ತು ಶ್ರೀ ಸಿದ್ದಪ್ಪ, ಸಿ.ಪಿ.ಸಿ 958 ಚಿಟಗುಪ್ಪ ಪೊಲೀಸ್ ಠಾಣೆ, ಹಾಲಿ ಬೀದರ್ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1925

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ,

(ಪೊಲೀಸ್ ಸೇವೆಗಳು)

**ವಿಷಯ :** ಶ್ರೀ ರಾಜೇಂದ್ರ, ಪಿಸಿ–397, ಕೆಂಭಾವಿ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ ರವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು ಗುಲ್ಬರ್ಗಾ ಇವರ ಆದೇಶ ಸಂಖ್ಯೆ: ಪಿ.ಆರ್./86/2005 ದಿನಾಂಕ: –1–2006.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರ್ದೇಶಕರು, ಗುಲ್ಬರ್ಗಾ ಇವರ ಆದೇಶ ಸಂಖ್ಯೆ: ಅಪೀಲು/68/ಈವ 2006, ದಿನಾಂಕ: –7–2006.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 2–6–2006.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು/2/118/2006–07, ದಿನಾಂಕ: 7–2–2007.

**ಪ್ರಸ್ತಾವನೆ :**

ಶ್ರೀ ರಾಜೇಂದ್ರ, ಪಿಸಿ–397, ಕೆಂಭಾವಿ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ನೀವು ಮಲ್ಲಪ್ಪಾ ಹೆಚ್.ಸಿ.–193 ಜೇವರ್ಗಿ ಪೊಲೀಸ್ ಠಾಣೆ ಇವರಿಗೆ ಅವಾಚ್ಯ ಶಬ್ದಗಳಿಂದ ಬೈದು ಕರ್ತವ್ಯದಲ್ಲಿ ನಿರ್ಲಕ್ಷತನ ತೋರಿಸಿದ್ದರ ಬಗ್ಗೆ.

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣೆ ಪತ್ರ ಹೊರಡಿಸಿ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು ಗುಲ್ಬರ್ಗಾ ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: –1–2006ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಆರು ತಿಂಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಯ ಮೇಲೆ ಪರಿಣಾಮ ಬೀರದಂತೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರ್ದೇಶಕರು, ಗುಲ್ಬರ್ಗಾ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ: –7–2006ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಎಸಗಿರುವ ಆರೋಪ ಸಾಬೀತಾಗಿರುತ್ತದೆ ಹಾಗೂ ಅಪೀಲುದಾರರ ಮೇಲ್ಮನವಿಯಲ್ಲಿ ಪರಿಗಣಿಸಬಹುದಾದ ಯಾವ ಅಂಶಗಳು ಕಂಡು ಬರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 153 ಪೊಸಿಅ 2007 ಬೆಂಗಳೂರು, ದಿನಾಂಕ: 15ನೇ ಅಕ್ಟೋಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ರಾಜೇಂದ್ರ, ಪಿಸಿ-397, ಕೆಂಭಾವಿ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1927

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ,

(ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಂ. ಸುಭಾಷ್ ನಾಯಕ್, ಮಾಜಿ ಹೆಚ್.ಸಿ.-1594, ಹುಬ್ಬಳ್ಳಿ-ಧಾರವಾಡ ನಗರ, ರವರು ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ :**

1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮಿಷನರ್, ಹುಬ್ಬಳ್ಳಿ-ಧಾರವಾಡ ಇವರ ಆದೇಶ ಸಂಖ್ಯೆ: ಸಿಓಪಿ/ಸಿಬ್ಬಂದಿ/ಶಿಕ್ಷ/3/92-93 ದಿನಾಂಕ: 4-7-92.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮನಿ ಮತ್ತು ಆಮನಿ ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು(3)/80/02-03 ದಿನಾಂಕ: 20-6-07.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: ----
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು/2143/2007-08, ದಿನಾಂಕ: 25-9-2007.

**ಪ್ರಸ್ತಾವನೆ :**

ಶ್ರೀ ಎಂ. ಸುಭಾಷ್ ನಾಯಕ್, ಮಾಜಿ ಹೆಚ್.ಸಿ.-1594, ಹುಬ್ಬಳ್ಳಿ-ಧಾರವಾಡ ನಗರ ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 6(2)ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ :**

i) ದಿ:7-5-91 ರಂದು ರಾತ್ರಿ **9-00** ಗಂಟೆಗೆ ಹುಬ್ಬಳ್ಳಿ ಕೇಂದ್ರ ಬಸ್ ನಿಲ್ದಾಣದಲ್ಲಿ ಒಬ್ಬ ವಾಯೂಧಖಾನ್ ರಹಮಾನ್ ಪುಲ್ಲಿ, ಸಾ//ಸವಣೂರು ಇವರು ತಮ್ಮ ಬಾಬತ್ತು 2,000-00 ರೂಪಾಯಿಗಳ ಕಿಮ್ಮತ್ತಿನ ಬಾಂಡ್ ಸಾಮಾನುಗಳನ್ನು ಗೋಣಿಚೀಲದಲ್ಲಿ ಇಟ್ಟುಕೊಂಡು ಮಡಗಾವಕ್ಕೆ ಹೋಗುವ ಸಲುವಾಗಿ ಹುಬ್ಬಳ್ಳಿ ಬಸ್ ಸ್ಟಾಂಡ್‌ನಲ್ಲಿ ಕುಳಿತಿದ್ದಾಗ ನೀವು ಅವರಿಗೆ ಹೆದರಿಸಿ ಅವನ ಕಪಾಳಕ್ಕೆ ಹೊಡೆದು ಅವನ ಹತ್ತಿರ ಇದ್ದ ಸ್ಟೀಲ್ ಬಾಂಡ್ ಸಾಮಾನುಗಳನ್ನು ಕಡಿದುಕೊಂಡು ಹೋಗಿದ್ದು ಇರುತ್ತದೆ. ಈ ಬಗ್ಗೆ ನಿಮ್ಮ ವಿರುದ್ಧ ಹುಬ್ಬಳ್ಳಿ ಉಪನಗರ ಪೊಲೀಸ್ ಠಾಣೆ, ಹುಬ್ಬಳ್ಳಿಯಲ್ಲಿ ಗುನ್ನಾ ಸಂಖ್ಯೆ: 173-91 ಕಲಂ 392 ಐಪಿಸಿ ಪ್ರಕಾರ ಪ್ರಕರಣ ದಾಖಲಾಗಿರುತ್ತದೆ. ನಿವು ಇದರಲ್ಲಿ ಫಿರ್ಯಾದಿಗೆ ಕೇಂದ್ರ ಬಸ್ ನಿಲ್ದಾಣದಲ್ಲಿ ಕುಳಿತಾಗ ಅವನ ಮಾಲನ್ನು ತೆಗೆದುಕೊಂಡು ಆಟೋರಿಕ್ಷಾ ಸಂಖ್ಯೆ:ಕೆ-25-1402 ನೇದ್ದರಲ್ಲಿ ಇಟ್ಟುಕೊಂಡು ಕೆ.ಎಂ.ಸಿ. ಕ್ಯಾಂಪಸ್‌ದ ಹತ್ತಿರ ತೆಗೆದುಕೊಂಡು ಹೋಗಿದ್ದು ಇರುತ್ತದೆ.

ii) ನೀವು ಶಿಸ್ತಿನ ಇಲಾಖೆಯಲ್ಲಿ ಇದ್ದುಕೊಂಡು ಸಾರ್ವಜನಿಕರನ್ನು ರಕ್ಷಿಸುವ ಬದಲು ಅವರಿಗೆ ಕೇಂದ್ರ ಬಸ್ ನಿಲ್ದಾಣದಲ್ಲಿ ಹೊಡೆದು ಅವರ ತಾಬಾದಲ್ಲಿ ಇದ್ದ 2,000-00 ರೂ. ಬೆಲೆ ಬಾಳುವ ಸ್ಟೀಲ್ ಸಾಮಾನುಗಳನ್ನು ತುಂಬಿದ ಗೋಣಿ ಚೀಲವನ್ನು ಜಬರಿ ಮಾಡಿ ತೆಗದುಕೊಂಡು ಹೋಗಿದ್ದು ಇರುತ್ತದೆ. ನೀವು ಶಿಸ್ತಿನ ಮತ್ತು ಸಂರಕ್ಷಣಾ ಇಲಾಖೆಯಲ್ಲಿ ಇದ್ದು, ಸಾರ್ವಜನಿಕರಿಗೆ ರಕ್ಷಿಸದೆ ಇಲಾಖೆಗೆ ಕಳಂಕ ತಂದಿದ್ದು, ಅಲ್ಲದೆ ನೀವು ನಿಮ್ಮ ಅಧಿಕಾರದ ದುರುಪಯೋಗ ಪಡಿಸಿಕೊಂಡು ಜಬರಿ ಕಳವು ಮಾಡಿ ಘೋರ ಅಪರಾಧ ಎಸಗಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮಿಷನರ್, ಹುಬ್ಬಳ್ಳಿ-ಧಾರವಾಡ ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ: 4-7-92ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಮಾಡಿ ಹಾಗೂ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮನಿ ಮತ್ತು ಆಮನಿ ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸ ಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 20–6–07ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಶಿಕ್ಷೆಯನ್ನು ರದ್ದುಪಡಿಸಲು ಯಾವುದೇ ಕಾರಣಗಳನ್ನು ಮನವಿಯಲ್ಲಿ ತಿಳಿಸಿರುವುದಿಲ್ಲ ಹಾಗೂ ಯಾವುದೇ ಮಾನವೀಯತೆಯ ದೃಷ್ಠಿಗೆ ಅರ್ಹರಿರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 286 ಪೊಸಿಅ 2007 ಬೆಂಗಳೂರು, ದಿನಾಂಕ: 22ನೇ ಅಕ್ಟೋಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ. ಸುಭಾಷ್ ನಾಯಕ್, ಮಾಜಿ ಹೆಚ್.ಸಿ.–1594, ಹುಬ್ಬಳ್ಳಿ–ಧಾರವಾಡ ನಗರ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1929

**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ,
(ಪೊಲೀಸ್ ಸೇವೆಗಳು)

**ವಿಷಯ :** ಶ್ರೀ ಆರ್ಮುಗಂ ಬಿನ್ ಗಣಪತಿ, ಮಾಜಿ ಪಿಸಿ–1470, ಸಿಎಆರ್ (ಕೇಂದ್ರ), ಬೆಂಗಳೂರು ನಗರ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಆರಕ್ಷಕ ಆಯುಕ್ತರು ಬೆಂಗಳೂರು ಇವರ ಆದೇಶ ಸಂಖ್ಯೆ: ಡಿಇ/91/90–91, ದಿನಾಂಕ: 6–9–1995.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮಿಷನರ್ ಬೆಂಗಳೂರು ಇವರ ಆದೇಶ ಸಂಖ್ಯೆ: 60/ಅಪೀಲು/ 95–96 ದಿನಾಂಕ: 29–9–1997.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 16–6–2006.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು/2/99/2006–07, ದಿನಾಂಕ: 5–5–2007.

**ಪ್ರಸ್ತಾವನೆ:**

ಶ್ರೀ ಆರ್ಮುಗಂ ಬಿನ್ ಗಣಪತಿ, ಮಾಜಿ ಪಿಸಿ–1470, ಸಿಎಆರ್ (ಕೇಂದ್ರ), ಬೆಂಗಳೂರು ನಗರ ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"Gross misconduct and misdemeanouring act in that you PC.409 Armugam of MT Section has poured kerosene oil on his wife Smt. Valli at his residence on 29.7.90 at about 1 p.m. with the intention of killing her, resulting severe burn injuries and on her shifting to Victoria Hospital, she expired on the same day"

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಆರಕ್ಷಕ ಆಯುಕ್ತರು ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 6–9–1995ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಲಾಗಿದೆ ಹಾಗೂ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಲಾದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮಿಷನರ್ ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ: 29–9–1997ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ನ್ಯಾಯಾಲಯವು ಶಿಕ್ಷೆ ವಿಧಿಸಿರುವುದರಿಂದ ಹಾಗೂ ಪರಿಷ್ಕರಣ ಮೇಲ್ಮನವಿಯಲ್ಲಿ ಯಾವುದೇ ಹೊಸ ಅಂಶಗಳು ಕಂಡುಬರುತ್ತಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 260 ಪೊಸಿಅ 2007 ಬೆಂಗಳೂರು, ದಿನಾಂಕ: 23ನೇ ಅಕ್ಟೋಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಆರ್ಮುಗಂ ಬಿನ್ ಗಣಪತಿ, ಮಾಜಿ ಪಿಸಿ–1470, ಸಿಎಆರ್ (ಕೇಂದ್ರ), ಬೆಂಗಳೂರು ನಗರ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1930

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ,

(ಪೊಲೀಸ್ ಸೇವೆಗಳು)

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಡಿ. ರಮೇಶಬಾಬು, ಮಂಡನಾಧಿಕಾರಿಗಳು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು (ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ) ಇವರ ಜನ್ಮ ದಿನಾಂಕವನ್ನು ಒಪ್ಪಿಕೊಳ್ಳುವ ಬಗ್ಗೆ –ಆದೇಶ.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂ. ಲಾ 97 ಪಿಪಿಇ 97, ದಿನಾಂಕ 29–1–1998.
2. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ಪತ್ರ ಸಂ. ಡಿಪಿಎನ್/ಕೇಂಸ/ವಿವ/24/2000–01, ದಿನಾಂಕ: 19–9–2007.

**ಸರ್ಕಾರದ ಆದೇಶ ಸಂಖ್ಯೆ: ಒಇ 486 ಪಿಪಿಇ 2007, ಬೆಂಗಳೂರು, ದಿನಾಂಕ 29ನೇ ಅಕ್ಟೋಬರ್ 2007.**

ಮೇಲೆ ಓದಲಾದ (1) ಸರ್ಕಾರದ ಅಧಿಸೂಚನೆಯ ಕ್ರ.ಸಂ. 39ರಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕಗೊಂಡ ಶ್ರೀ ಡಿ. ರಮೇಶ್‌ಬಾಬು, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಹಾಲಿ ಮಂಡನಾಧಿಕಾರಿಗಳು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಜನ್ಮ ದಿನಾಂಕ 1–3–67 ಅನ್ನು ಕರ್ನಾಟಕ ರಾಜ್ಯ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ನೀಡಿರುವ ಎಸ್.ಎಸ್.ಎಲ್.ಸಿ. ಮೂಲ ಅಂಕಪಟ್ಟಿಯನ್ನು ಪರಿಶೀಲಿಸಿದ ನಂತರ ಕರ್ನಾಟಕ ಸರ್ಕಾರಿ ನೌಕರರ (ವಯೋನಿರ್ಧಾರ) ಕಾಯ್ದೆ 1974ರ ಕಲಂ–3ರ ಉಪಕಲಂ–2ರ ಅನ್ವಯ ಶ್ರೀ ಡಿ. ರಮೇಶ್‌ಬಾಬು ಇವರ ಜನ್ಮ ದಿನಾಂಕ 1–3–1967 (ಒಂದನೇ ಮಾರ್ಚ್ ಸಾವಿರದೊಂಬೈನೂರು ಅರವತ್ತೇಳು) ಎಂದು ಸರ್ಕಾರವು ಒಪ್ಪಿರುತ್ತದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1985

**ಆರ್. ಲೀಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾ. ಮತ್ತು ಸು ಮತ್ತು ಕಾಫಿಪೋಸಾ ಮತ್ತು ಅಭಿಯೋಗ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಮೈಸೂರಿನ ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆಗೆ ಸೇರಿದ ಜೀವರಾಯನಕಟ್ಟೆ ಮೈದಾನದ ಜಮೀನಿನಲ್ಲಿ ದೇವರಾಜ ಪೊಲೀಸ್ ಠಾಣೆಯ ಕಟ್ಟಡ ನಿರ್ಮಾಣಕ್ಕೆ ಜಮೀನನ್ನು ನೀಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಆಕುಕ 199 ಎಂಎಸ್‌ಎಫ್ 2004, ದಿನಾಂಕ: 19–11–2004.
2. ಸರ್ಕಾರಿ ಆದೇಶ ಸಂಖ್ಯೆ: ಆಕುಕ 199 ಎಂಎಸ್‌ಎಫ್ 2004, ದಿನಾಂಕ: 13–6–2005.
3. ಸರ್ಕಾರಿ ಆದೇಶ ಸಂಖ್ಯೆ: ಆಕುಕ 327 ಎಂಪಿಎಸ್ 2007, ದಿನಾಂಕ: 24–7–2007.

**ಪ್ರಸ್ತಾವನೆ :**

ಮೈಸೂರಿನ ದೇವರಾಜ ಮೊಹಲ್ಲಾ ಆಸ್ತಿ ಸಂಖ್ಯೆ: 5 ವಿಸ್ತೀರ್ಣ 54941 ಚ.ಮೀ. ಉಳ್ಳ ಮೈಸೂರಿನ ಜಿ.ಕೆ. ಆಟದ ಮೈದಾನವನ್ನು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಸರ್ಕಾರದ ಓದಲಾದ ಆದೇಶದಲ್ಲಿ ಮೈಸೂರು ವೈದ್ಯಕೀಯ ಕಾಲೇಜಿನ ಆಸ್ತಿಯೆಂದು ಮೈಸೂರು ಮಹಾನಗರ ಪಾಲಿಕೆಯಲ್ಲಿ ಹಾಗೂ ನಗರ ಭೂ ಮಾಪನ ಕಛೇರಿಯಲ್ಲಿ ದಾಖಲಿಸಲು ಆದೇಶಿಸಲಾಗಿದೆ ಮತ್ತು ಮೈಸೂರು ವೈದ್ಯಕೀಯ ಕಾಲೇಜಿನ ಹಳೆಯ ಆಟದ ಮೈದಾನದ ಸ್ವಲ್ಪ ಭಾಗದಲ್ಲಿ ಲೀಸ್ ಆಧಾರದಲ್ಲಿ ನಿರ್ಮಿಸಿರುವ ಪೆಟ್ರೋಲ್ ಬಂಕ್ ಮತ್ತು ಹಳೇ ವಸ್ತು ಪ್ರದರ್ಶನ ಕಟ್ಟಡದ ಹಿಂಭಾಗದಲ್ಲಿ ಇರುವ ರಾಯಲ್ ಎಜುಕೇಷನ್ ಸೊಸೈಟಿ ಕಟ್ಟಡಗಳನ್ನು 1974ರ Karnataka Public Premises (Erection of Unauthorized occupants) Act ರಡಿ ಸ್ವಂತವಾಗಿ ಹೊರಹಾಕಲು ಕ್ರಮ ತೆಗೆದುಕೊಳ್ಳಲು ಮೈಸೂರು ವೈದ್ಯಕೀಯ ಕಾಲೇಜಿನ ಪ್ರಾಂಶುಪಾಲರಿಗೆ ನಿರ್ದೇಶನ ನೀಡಿದೆ.

ವೈದ್ಯಕೀಯ ಶಿಕ್ಷಣ ಇಲಾಖೆಯ ಮೈಸೂರು ವೈದ್ಯಕೀಯ ಕಾಲೇಜಿನ ಜೀವರಾಯನಕಟ್ಟೆ ಪ್ರದೇಶದ ಆಗ್ನೇಯ ದಿಕ್ಕಿನಲ್ಲಿರುವ ಹತ್ತು ಸಾವಿರ ಚದರಡಿ ಖಾಲಿ ನಿವೇಶನವನ್ನು ದೇವರಾಜ ಪೊಲೀಸ್ ಠಾಣೆಯ ಕಟ್ಟಡ ನಿರ್ಮಾಣದ ಸಲುವಾಗಿ ಪೊಲೀಸ್ ಇಲಾಖೆಗೆ ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ವರ್ಗಾಯಿಸಲಾಗಿದೆ.

ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಇವರು ಮೈಸೂರು ವೈದ್ಯಕೀಯ ಕಾಲೇಜಿನ ಜೀವರಾಯನಕಟ್ಟೆ ಪ್ರದೇಶದ 10,000 ಚದರಡಿ ಖಾಲಿ ನಿವೇಶನವನ್ನು ದೇವರಾಜ ಪೊಲೀಸ್ ಠಾಣೆ ಕಟ್ಟಡ ನಿರ್ಮಾಣಕ್ಕಾಗಿ ನೀಡಿದ ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶವನ್ನು ಹಿಂದಕ್ಕೆ ಪಡೆಯಲಾಗಿತ್ತು. ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ ಮೈಸೂರು ವೈದ್ಯಕೀಯ ಮಹಾವಿದ್ಯಾಲಯ ಮತ್ತು ಸಂಶೋಧನಾ ಸಂಸ್ಥೆಯ ಜಮೀನನ್ನು ಗುರುತಿಸಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 327 ಎಂಪಿಎಸ್ 2007, ಬೆಂಗಳೂರು, ದಿನಾಂಕ: 26ನೇ ಸೆಪ್ಟೆಂಬರ್ 2007**

ಮೈಸೂರು ವೈದ್ಯಕೀಯ ಮಹಾವಿದ್ಯಾಲಯ ಮತ್ತು ಸಂಶೋಧನಾ ಸಂಸ್ಥೆ, ಮೈಸೂರು ಇದಕ್ಕೆ ಸೇರಿದ ಅದರ ಎದುರುಗೆ ಇರುವ ಜೀವರಾಯನಕಟ್ಟೆ (ಜಿ.ಕೆ.) ಮೈದಾನದ ಪ್ರದೇಶದ ಒಟ್ಟು ವಿಸ್ತೀರ್ಣದ 54,941 ಚದರ ಮೀಟರ್‌ಗಳ ಜಮೀನಿನ ಪೈಕಿ ಆಗ್ನೇಯ ಮೂಲೆಯಲ್ಲಿ 825 ಚ.ಮೀ. (ಎಂಟು ನೂರು ಇಪ್ಪತ್ತೈದು ಚದರ ಮೀಟರ್ ಮಾತ್ರ) (9000 ಚದರ ಅಡಿ) (ಒಂಭತ್ತು ಸಾವಿರ ಚದರಡಿ ಮಾತ್ರ) ವಿಸ್ತೀರ್ಣದ ಜಮೀನನ್ನು ದೇವರಾಜ ಪೊಲೀಸ್ ಠಾಣೆಯ ಕಟ್ಟಡ ನಿರ್ಮಾಣಕ್ಕಾಗಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಗುರುತಿಸಿ ನೀಡಲಾಗಿದೆ.

(ಅ) ಉದ್ದೇಶಿತ ಪೊಲೀಸ್ ಠಾಣೆ ಕಟ್ಟಡದ ನಿರ್ಮಾಣದಿಂದ ಸರ್ಕಾರಿ ವೈದ್ಯಕೀಯ ಮಹಾವಿದ್ಯಾಲಯ ಮತ್ತು ಸಂಶೋಧನಾ ಸಂಸ್ಥೆ, ಮೈಸೂರು ಇದರ ಕ್ರೀಡಾಂಗಣ ಇದಕ್ಕೆ ಯಾವುದೇ ತರಹದ ಅಡಚಣೆ ಉಂಟಾಗಬಾರದು.

(ಆ) ಹಾಲಿ ಇರುವ ಪೆಟ್ರೋಲ್ ಬಂಕ್‌ನ ತೆರವಿನ ನಂತರ ಸದರಿ ಜಮೀನು ವೈದ್ಯಕೀಯ ಮಹಾವಿದ್ಯಾಲಯದ ಪ್ರಾಂಗಣಕ್ಕೆ ಸೇರುತ್ತದೆ.

(ಇ) ಆರಕ್ಷಕ ಠಾಣೆ ಕಟ್ಟಡದ ನಿರ್ಮಾಣವನ್ನು ಆದ್ಯತೆಯ ಮೇರೆಗೆ ಕೈಗೊಳ್ಳುವುದು ಮತ್ತು ಹೊಸ ಕಟ್ಟಡ ನಿರ್ಮಾಣದ ನಂತರ ಆರ್.ಎಂ.ಓ. ವಸತಿ ಗೃಹದಲ್ಲಿರುವ ಹಾಲಿ ದೇವರಾಜ ಆರಕ್ಷಕ ಠಾಣೆಯನ್ನು ಖಾಲಿ ಮಾಡತಕ್ಕದ್ದು.

(ಈ) ಜಿ.ಕೆ. ಪ್ರದೇಶ ಮೈಸೂರು, ಇದರ ಉಳಿದ ಪ್ರದೇಶದಲ್ಲಿ ಪೊಲೀಸ್ ಇಲಾಖೆಗೆ ನೀಡಿದಂತ ಪ್ರದೇಶದ ವಿಸ್ತೀರ್ಣವನ್ನು ಹೊರತುಪಡಿಸಿ ಒತ್ತುವರಿ ಮಾಡಬಾರದು.

(ಉ) ಪೆಟ್ರೋಲ್ ಬಂಕಿನ ಲೀಸ್ ಮುಕ್ತಾಯವಾದ ನಂತರ ಈ ಪ್ರದೇಶವನ್ನು ಕಾಲೇಜಿನ ಸಂಪನ್ಮೂಲಗಳನ್ನು ವೃದ್ಧಿಸಿಕೊಳ್ಳಲು ಯಾವುದಾದರೂ ವಾಣಿಜ್ಯ ಚಟುವಟಿಕೆಗೆ ಉಪಯೋಗಿಸಿಕೊಳ್ಳತಕ್ಕದ್ದು.

(ಊ) ಚಕ್ಕುಬಂದಿ:– ಪೂರ್ವ–ಪಶ್ಚಿಮ 55 ಮೀ, ಉತ್ತರ–ದಕ್ಷಿಣ –15 ಮೀ
ಪೂರ್ವ: ದಕ್ಷಿಣದಿಂದ ಉತ್ತರಕ್ಕೆ ಹರಿಯುವ ಕೊಳಚೆ ನೀರು ಚರಂಡಿ

ಪಶ್ಚಿಮ: ಜೆ.ಕೆ. ಮೈದಾನದ ಉಳಿದ ಭಾಗ
ಉತ್ತರ: ಪಶ್ಚಿಮದಿಂದ ಪೂರ್ವಕ್ಕೆ ಹರಿಯುವ ದೊಡ್ಡ ಕೊಳಚೆ ನೀರು ಚರಂಡಿ
ದಕ್ಷಿಣ: ಧನ್ವಂತರಿ ರಸ್ತೆ

(ಋ) ಧನ್ವಂತರಿ ರಸ್ತೆಯ ಮೂಲಕ ಮಾತ್ರವೇ ಸಂಪರ್ಕ ರಸ್ತೆ, ಇರತಕ್ಕದ್ದು.

(ೠ) ಅಪಘಾತಕ್ಕೀಡಾದ ವಾಹನ ಮತ್ತು ಸಾಲವೇಜ್ ವಾಹನ ಇತ್ಯಾದಿಗಳನ್ನು ಧನ್ವಂತರಿ ರಸ್ತೆಯ ಇಕ್ಕೆಲಗಳಲ್ಲಿ ನಿಲ್ಲಿಸಲು ಅವಕಾಶವಿರುವುದಿಲ್ಲ.

(ಎ) ನೀಡಲಾದ ಪ್ರದೇಶ/ ಆರಕ್ಷಕ ಸಂಕೀರ್ಣದಲ್ಲಿ ಯಾವುದೇ ವಸತಿ ಗೃಹಗಳನ್ನು ನಿರ್ಮಿಸತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1783

**ವಿ. ಶ್ರೀರಾಮರೆಡ್ಡಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ವೈದ್ಯಕೀಯ ಶಿಕ್ಷಣ)

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಎಸ್.ಎಸ್. ಖಾಜಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 3ನೇ ಎಂಎಂ. (ಸಂಚಾರಿ) ನ್ಯಾಯಾಲಯ, ಬೆಂಗಳೂರು ಇವರನ್ನು ಸೇವೆಯಿಂದ ಅಮಾನತ್ತಿನಲ್ಲಿಡುವ ಬಗ್ಗೆ.

**ಓದಲಾಗಿದೆ :**
1. ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಪಿಎನ್:ನಿಶಾ:1/118/2007–08, ದಿನಾಂಕ: 18–9–07.
2. ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)ಸಿಟಿ/ಕ್ರೈಂ.32/2007, ದಿನಾಂಕ: 18–9–07.
3. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 13 ಎಸ್‌ಡಿಇ 85, ದಿನಾಂಕ: 3–7–1985.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ದಿನಾಂಕ: 18–9–07ರ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರವರ ಪತ್ರ ಮತ್ತು ಮೇಲೆ (2)ರಲ್ಲಿ ದಿನಾಂಕ: 18–9–07ರ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಇವರ ಪತ್ರಗಳಲ್ಲಿ ಬೆಂಗಳೂರಿನ ಸದಾಶಿವ ನಗರದ ಸಂಚಾರಿ ಠಾಣೆಯ ಮೊಕದ್ದಮೆ ಕ್ರ.ಸಂ. 36/2007 ಸಿ.ಸಿ. ನಂ. 1892/07, 3ನೇ ಎಂಎಂ. (ಸಂಚಾರಿ) ನ್ಯಾಯಾಲಯ, ಬೆಂಗಳೂರು, ಪ್ರಕರಣದಲ್ಲಿ ಆರೋಪಿಯಾಗಿರುವ ಶ್ರೀಮತಿ ನೀತಾ ಪರಶುರಾಮ ಇವರಿಂದ ಪ್ರಕರಣವನ್ನು ಮುಗಿಸಿಕೊಡಲು ರೂ. 2,000/–ಗಳ ಲಂಚವನ್ನು ನೀಡುವಂತೆ ಶ್ರೀ ಎಸ್.ಎಸ್. ಖಾಜಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 3ನೇ ಎಂ.ಎಂ. (ಸಂಚಾರಿ) ನ್ಯಾಯಾಲಯ, ಬೆಂಗಳೂರು ಇವರು ಒತ್ತಾಯಿಸಿರುತ್ತಾರೆ ಮತ್ತು ಅವರಿಂದ ದಿನಾಂಕ: 17–9–2007ರಂದು ರೂ. 1000/– ಲಂಚದ ಹಣ ಪಡೆಯುತ್ತಿದ್ದಾಗ ಲೋಕಾಯುಕ್ತರ ಬಲೆಗೆ ಸಿಲುಕಿರುತ್ತಾರೆ. ಸದರಿಯವರನ್ನು ಅದೇ ದಿನ ದಸ್ತಗಿರಿ ಮಾಡಿ ಬೆಂಗಳೂರಿನ 23ನೇ ಅಪರ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರ (ಭ್ರಷ್ಟಾಚಾರ ನಿರೋಧ ಕಾಯ್ದೆ) ನ್ಯಾಯಾಲಯದಲ್ಲಿ ಹಾಜರುಪಡಿಸಿದ್ದು, ಸಧ್ಯ ನ್ಯಾಯಾಂಗ ಬಂಧನದಲ್ಲಿರುತ್ತಾರೆ. ಆದಕಾರಣ, ಮೇಲೆ 3ರಲ್ಲಿ ಓದಲಾಗಿರುವ ದಿನಾಂಕ: 3–7–1985ರ ಅಧಿಕೃತ ಜ್ಞಾಪನದ ಅನುಸಾರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 10(1)(ಎ)ರ ರೀತ್ಯಾ ಸರ್ಕಾರಿ ಸೇವೆಯಿಂದ ಅಮಾನತ್ತಿನಲ್ಲಿಡುವ ಬಗ್ಗೆ ಪರಿಶೀಲಿಸಿ ಕ್ರಮ ಕೈಗೊಳ್ಳಲು ಎಫ್‌ಐಆರ್ ಪ್ರತಿಯನ್ನು ಒದಗಿಸಿರುತ್ತಾರೆ.

ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 446 ಪಿಪಿಇ 2007, ಬೆಂಗಳೂರು, ದಿನಾಂಕ: 17ನೇ ಅಕ್ಟೋಬರ್ 2007**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಕ್ಕಾಗಿ ಶ್ರಿ ಎಸ್.ಎಸ್. ಖಾಜಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 3ನೇ ಎಂ.ಎಂ. (ಸಂಚಾರಿ) ನ್ಯಾಯಾಲಯ, ಬೆಂಗಳೂರು ಇವರನ್ನು ದಿನಾಂಕ: 17–9–2007ರಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 10(1)(ಎ)ರ ರೀತ್ಯಾ ಸರ್ಕಾರಿ ಸೇವೆಯಿಂದ ಅಮಾನತ್ತಿನಲ್ಲಿ ಇರಿಸಿ ಆದೇಶವನ್ನು ಹೊರಡಿಸಲಾಗಿದೆ.

ಸದರಿ ಅಧಿಕಾರಿಯವರು ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿ 1957ರ ನಿಯಮ 98ರ ಅನುಸಾರ ಅಮಾನತ್ತಿನ ಅವಧಿಯಲ್ಲಿ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯು ನೇಮಕಾತಿ ಪ್ರಾಧಿಕಾರಿ / ಮೇಲಾಧಿಕಾರಿಯ ಪೂರ್ವಾನುಮತಿ ಪಡೆದು ಕಾರ್ಯಕೇಂದ್ರವನ್ನು ಬಿಡತಕ್ಕದ್ದು.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1883

**ಆರ್. ಲೀಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾ. ಮತ್ತು ಸು ಮತ್ತು ಕಾಫಿಪೋಸ ಮತ್ತು ಅಭಿಯೋಗ)

**ಶಿಕ್ಷಣ ಸಚಿವಾಲಯ**

**ವಿಷಯ :** ಶಿಕ್ಷಣ ಇಲಾಖೆಯ ಬೋಧಕ ಸಿಬ್ಬಂದಿಗಳ ನಿಯೋಜನೆ/ ಅನ್ಯ ಕಾರ್ಯದ ನಿಮಿತ್ತ ಸಿಬ್ಬಂದಿಗಳ ನಿಯೋಜನೆಗಳನ್ನು ನಿಷೇಧಿಸುವ ಬಗ್ಗೆ.

**ಓದಲಾಗಿದೆ :** 1. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಇವರ ಪತ್ರ ಸಂಖ್ಯೆ: ಸಿ1(4) ನಿಯೋಜನೆ–46/ 2006–07.

2. ಸರ್ಕಾರದ ಸುತ್ತೋಲೆ ಸಂಖ್ಯೆ: ಇಡಿ 119 ಡಿಜಿಎಂ 2005, ದಿನಾಂಕ: 16–8–2006.

**ಪ್ರಸ್ತಾವನೆ :**

ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆಯ ವ್ಯಾಪ್ತಿಗೆ ಬರುವ ಸಾರ್ವಜನಿಕ ಶಿಕ್ಷಣ ಇಲಾಖೆಯ ಮತ್ತು ಪದವಿ ಪೂರ್ವ ಶಿಕ್ಷಣ ಇಲಾಖೆಯ ಬೋಧಕ ಸಿಬ್ಬಂದಿಗಳಾದ ಶಿಕ್ಷಕರು, ಮುಖ್ಯ ಶಿಕ್ಷಕರು ಹಾಗೂ ಉಪನ್ಯಾಸಕರು ಮತ್ತು ಪ್ರಾಂಶುಪಾಲರುಗಳನ್ನು ಶಿಕ್ಷಣ ಇಲಾಖೆಯ ವ್ಯಾಪ್ತಿಯ ಕಛೇರಿಗಳಿಗೆ ಅನ್ಯ ಸೇವಾ (ಓ.ಓ.ಡಿ) ಆಧಾರದ ಮೇಲೆ ಅಥವಾ ಬೇರೆ ಇಲಾಖೆಗೆ ನಿಯೋಜನೆ ಮಾಡುವುದನ್ನು ನಿಷೇಧಿಸಿ, ಉಲ್ಲೇಖ (2)ರ ಸುತ್ತೋಲೆಯಲ್ಲಿ ತಿಳಿಸಲಾಗಿತ್ತು. ಆದಾಗ್ಯೂ, ಸಹ ಬೇರೆ ಇಲಾಖೆಗಳಿಗೆ ಶಿಕ್ಷಣ ಇಲಾಖೆಯ ಸಿಬ್ಬಂದಿಗಳನ್ನು ನಿಯೋಜಿಸಲು ಒತ್ತಡ ಮತ್ತು ಶಿಫಾರಸ್ಸುಗಳು ಬರುತ್ತಿದ್ದು, ಇದರಿಂದ ಶಿಕ್ಷಣ ಇಲಾಖೆಯ ಬೋಧಕ ಸಿಬ್ಬಂದಿಯನ್ನು ನಿಯೋಜಿಸಿದಲ್ಲಿ ಶಾಲಾ ಮತ್ತು ಕಾಲೇಜುಗಳ ಬೋಧಕ ಸಿಬ್ಬಂದಿಯ ಕೊರತೆಯಿಂದ ಮಕ್ಕಳ ವಿದ್ಯಾಭ್ಯಾಸಕ್ಕೆ ತೊಂದರೆಯಾಗುತ್ತದೆ. ಆದ್ದರಿಂದ ಈ ವ್ಯವಸ್ಥೆಯನ್ನು ಸಂಪೂರ್ಣವಾಗಿ ನಿಷೇಧಿಸುವುದು ಅಗತ್ಯವಾಗಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 70 ಡಿಜಿಎಂ 2007, ಬೆಂಗಳೂರು, ದಿನಾಂಕ: 10ನೇ ಸೆಪ್ಟೆಂಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸನ್ನಿವೇಶದಲ್ಲಿ, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಸಾರ್ವಜನಿಕ ಶಿಕ್ಷಣ ಇಲಾಖೆ ಮತ್ತು ಪದವಿ ಪೂರ್ವ ಶಿಕ್ಷಣ ಇಲಾಖೆಯ ಬೋಧಕ ಸಿಬ್ಬಂದಿಗಳಾದ ಶಿಕ್ಷಕರು, ಮುಖ್ಯ ಶಿಕ್ಷಕರು ಹಾಗೂ ಉಪನ್ಯಾಸಕರು ಮತ್ತು ಪ್ರಾಂಶುಪಾಲರುಗಳನ್ನು ಬೇರೆ ಇಲಾಖೆಗಳಲ್ಲಿ ಸಮನಾಂತರ ಹುದ್ದೆಗಳಿಗೆ ನಿಯೋಜಿಸುವುದನ್ನು ನಿಷೇಧಿಸಿದೆ. ಹಾಗೂ ಈಗಾಗಲೇ ನಿಯೋಜನೆ ಮೇಲೆ ಇರುವವರನ್ನು ತಕ್ಷಣವೇ ಮಾತೃ ಇಲಾಖೆಗಳಿಗೆ ಹಿಂತಿರುಗಿಸಲು ಸಹ ಸಂಬಂಧಪಟ್ಟ ಇಲಾಖಾ ಮುಖ್ಯಸ್ಥರುಗಳಿಗೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1785

**ಎಂ.ಎಂ. ಹಿರೇಮಠ**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ, (ಸೇವೆಗಳು–1,2)

**ಒಳಾಡಳಿತ ಸಚಿವಾಲಯ**

**ಸಂಖ್ಯೆ: ಒಇ 426 ಪಿಪಿಇ 2007, ಬೆಂಗಳೂರು, ದಿನಾಂಕ: 16ನೇ ನವೆಂಬರ್ 2007**

**ತಿದ್ದುಪಡಿ**

ದಿನಾಂಕ 20–9–2007ರ ಸಮಸಂಖ್ಯೆಯ ಅಧಿಸೂಚನೆಯಲ್ಲಿನ ತಃಖ್ತೆಯ ಕ್ರಮ ಸಂಖ್ಯೆ 1ರಲ್ಲಿನ ಅಂಕಣ 2ರಲ್ಲಿ ನಮೂದಿಸಿರುವ "1ನೇ ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮಂಗಳೂರು" ಎಂಬುದರ ಬದಲಾಗಿ "2ನೇ ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮಂಗಳೂರು" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

ಇದರ ಹೊರತಾಗಿ ಸದರಿ ಅಧಿಸೂಚನೆಯಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2054

**ಆರ್. ಲೀಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾ. ಮತ್ತು ಸು ಮತ್ತು ಕಾಫಿಪೋಸ ಮತ್ತು ಅಭಿಯೋಗ)

## ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಕುಮಾರಿ ಕೆ.ಆರ್. ಶೈಲಜಾ, ದ್ವಿತೀಯ ದರ್ಜೆ ಮೋಜಣಿದಾರರು ಇವರನ್ನು ದ್ವಿತೀಯ ದರ್ಜೆ ಸಹಾಯಕರ ಹುದ್ದೆಗೆ ವೃಂದ ಬದಲಾವಣೆ ಮಾಡುವ ಕುರಿತು.

**ಓದಲಾಗಿದೆ:** ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಇವರ ಪತ್ರ ಸಂಖ್ಯೆ: ಬಿ3/ಸಿಬ್ಬಂದಿ/ಸಿಆರ್-66/2006-07, ದಿನಾಂಕ: 06-10-2006 ಮತ್ತು 28-05-2007.

**ಪ್ರಸ್ತಾವನೆ:**

ಅರಣ್ಯ ಸಂರಕ್ಷಣಾಧಿಕಾರಿ, ಹಾಸನ ವೃತ್ತ ಕಛೇರಿಯಲ್ಲಿ, ದ್ವಿತೀಯ ದರ್ಜೆ ಮೋಜಣಿದಾರರಾಗಿ ಕಾರ್ಯನಿರ್ವಹಿಸುತ್ತಿರುವ ಕುಮಾರಿ ಕೆ.ಆರ್. ಶೈಲಜಾ ಇವರನ್ನು ವೈದ್ಯಕೀಯ ಕಾರಣಗಳ ಮೇಲೆ ದ್ವಿತೀಯ ದರ್ಜೆ ಮೋಜಣಿದಾರಿಂದ ದ್ವಿತೀಯ ದರ್ಜೆ ಸಹಾಯಕ ಹುದ್ದೆಗೆ ವೃಂದ ಬದಲಾವಣೆ ಮಾಡಲು ಕೋರಿ ಮೇಲೆ ಓದಲಾದ ದಿನಾಂಕ: 06-10-2006ರ ಪತ್ರದಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಕುಮಾರಿ ಕೆ.ಆರ್. ಶೈಲಜಾ, ದ್ವಿತೀಯ ದರ್ಜೆ ಮೋಜಣಿದಾರರು ಸದರಿ ವೃಂದದಲ್ಲಿ ತೃಪ್ತಿಕರವಾದ ಪರೀಕ್ಷಾರ್ಥ ಅವಧಿಯನ್ನು ಪೂರೈಸಿದ್ದು, ದ್ವಿತೀಯ ದರ್ಜೆ ಸಹಾಯಕ ವೃಂದದ ಹುದ್ದೆಗೆ ನಿಗದಿಪಡಿಸಿದ ಎಲ್ಲಾ ಇಲಾಖಾ ಪರೀಕ್ಷೆಗಳನ್ನು ಪಾಸು ಮಾಡಿರುತ್ತಾರೆ ಹಾಗೂ ಸದರಿ ಹುದ್ದೆಯಲ್ಲಿ ಕಾರ್ಯನಿರ್ವಹಿಸಲು ಅಸಮರ್ಥತೆ ಹೊಂದಿರುವ ಬಗ್ಗೆ ವೈದ್ಯಕೀಯ ಮಂಡಳಿಯು ಪ್ರಮಾಣ ಪತ್ರ ಸಲ್ಲಿಸಿರುತ್ತಾರೆ. ಅಲ್ಲದೆ, ಸದರಿ ನೌಕರರು ಸಮಾನಾಂತರ ಹುದ್ದೆ ಅಥವಾ ಕೆಳದರ್ಜೆ ಹುದ್ದೆಗೆ ವರ್ಗಾಯಿಸಲು ಬರವಣಿಗೆ ಮೂಲಕ ಒಪ್ಪಿಗೆ ಸೂಚಿಸಿರುತ್ತಾರೆ.

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕುಮಾರಿ, ಕೆ.ಆರ್ ಶೈಲಜಾ, ದ್ವಿತೀಯ ದರ್ಜೆ ಮೋಜಣಿದಾರರನ್ನು ದ್ವಿತೀಯ ದರ್ಜೆ ಸಹಾಯಕ ಹುದ್ದೆಗೆ ಕೆಲವೊಂದು ಷರತ್ತಿಗೊಳಪಟ್ಟು ವೃಂದ ಬದಲಾವಣೆ ಮಾಡಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 60 ಹುಸ್ಯಮು 2007 ಬೆಂಗಳೂರು, ದಿನಾಂಕ: 30-08-2007.**

ಪ್ರಸ್ತಾವನೆಲ್ಲಿ ವಿವರಿಸಿದ ಕಾರಣಗಳಿಂದ ಸರ್ಕಾರವು ಕುಮಾರಿ ಕೆ.ಆರ್. ಶೈಲಜಾ, ದ್ವಿತೀಯ ದರ್ಜೆ ಮೋಜಣಿದಾರರು, ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಹಾಸನ ವಿಭಾಗ, ಹಾಸನ ಇವರನ್ನು ವೈದ್ಯಕೀಯ ಕಾರಣಗಳ ಮೇಲೆ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 79/ / ರ ನಿಯಮ 16 (ಎ) (iii)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಕೆಳಕಂಡ ಷರತ್ತಿಗೊಳಪಟ್ಟು ದ್ವಿತೀಯ ದರ್ಜೆ ಸಹಾಯಕ ಹುದ್ದೆಗೆ ವೃಂದ ಬದಲಾವಣೆ ಮಾಡಿ ಆದೇಶಿಸಿದೆ.

1. ಈ ನೌಕರರು ಸ್ವಇಚ್ಛೆಯ ಮೇರೆಗೆ ಮಾಡುವ ವರ್ಗಾವಣೆ ಮೂಲಕ ನೇಮಕಾತಿಯಾಗಿರುವುದರಿಂದ, ವರ್ಗಾವಣೆ ಮೂಲಕ ನೇಮಿಸಲಾಗುವ ವೃಂದದ ಹುದ್ದೆಯಲ್ಲಿ ಇವರ ಜೇಷ್ಠತೆಯನ್ನು ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತೆ) ನಿಯಮಗಳು, 1957ರ ನಿಯಮ 6ರ ಮೊದಲನೇ ಪರಂತುಕದನುಸಾರ ನಿರ್ಧರಿಸುವುದು.
2. ಸದರಿ ನೌಕರರು ವರ್ಗಾವಣೆ ಭತ್ಯೆ ಪಡೆಯಲು ಅರ್ಹರಿರುವುದಿಲ್ಲ.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು-ಎ) ಟಿಪ್ಪಣಿ ಸಂ: ಸಿಆಸುಇ 345 ಸೇನಿಎ 2007, ದಿನಾಂಕ: 16-07-2007ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1652

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**ವಿಷಯ:** ಶ್ರೀ ಕೆ.ಎನ್. ರತ್ನಸ್ವಾಮಿ, ವ್ಯವಸ್ಥಾಪಕರುರವರಿಗೆ ರಜೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ರವರ ಪತ್ರ ಸಂ: ಎ2/ರಜೆ/ಸಿಆರ್-56/2006-07, ದಿನಾಂಕ: 20-03-2007 ಹಾಗೂ 14-06-2007.

**ಪ್ರಸ್ತಾವನೆ:**

ಶ್ರೀ ಕೆ.ಎನ್. ರತ್ನಸ್ವಾಮಿ, ಪತ್ರಾಂಕಿತ ವ್ಯವಸ್ಥಾಪಕರು, ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಸಂಶೋಧನೆ ಮತ್ತು ಬಳಕೆ, ಬೆಂಗಳೂರು ಇವರು ದಿನಾಂಕ: 14-06-2006 ರಿಂದ 21-06-2006 ರವರೆಗೆ 8 ದಿನಗಳ ಗಳಿಕೆ ರಜೆ ಮೇಲೆ ತೆರಳಿದ್ದು, ತದನಂತರ ದಿನಾಂಕ: 22-06-2006 ರಿಂದ 28-2-2007 ರವರೆಗೆ ವೈದ್ಯಕೀಯ ಕಾರಣಗಳ ಮೇಲೆ 252 ದಿನ ರಜೆ ಮುಂದುವರೆಸಿ, ದಿನಾಂಕ: 01-03-2007 ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಈ ಅವಧಿಯಲ್ಲಿ ವೈದ್ಯಕೀಯ ಚಿಕಿತ್ಸೆ ಪಡೆದಿರುತ್ತಾರೆಂದು ಹಿರಿಯ ತಜ್ಞರು ಕೆ.ಸಿ. ಜನರಲ್ ಆಸ್ಪತ್ರೆ, ಬೆಂಗಳೂರು ರವರು ಪ್ರಮಾಣೀಕರಿಸಿರುವುದರಿಂದ, ಸದರಿ ಅಧಿಕಾರಿಗೆ ರಜೆ ಮಂಜೂರು ಮಾಡುವಂತೆ ಪ್ರಧಾನ ಮುಖ್ಯ ಅರಣ್ಯ

ಸಂರಕ್ಷಣಾಧಿಕಾರಿಯವರು ಮೇಲೆ ಓದಲಾದ ಪತ್ರದಲ್ಲಿ ಕೋರಿರುತ್ತಾರೆ. ಶ್ರೀ ಕೆ.ಎನ್. ರತ್ನಸ್ವಾಮಿ ರವರ ಲೆಕ್ಕದಲ್ಲಿ 240 ದಿನ ಗಳಿಕೆ ರಜೆ ಹಾಗೂ 20 ದಿನ ಪರಿವರ್ತಿತ ರಜೆ ಇದ್ದು, ದಿನಾಂಕ: 14-06-2006ರಿಂದ 28-02-2007 ರವರೆಗೆ ರಜೆ ಪಡಯಲು ಅಂಗೀಕಾರಾರ್ಹರೆಂದು ರಜಾ ಅರ್ಜಿಯಲ್ಲಿ ಮಹಾಲೇಖಪಾಲರು ಪ್ರಮಾಣೀಕರಿಸಿರುತ್ತಾರೆ.

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಶ್ರೀ ಕೆ.ಎನ್. ರತ್ನಸ್ವಾಮಿ, ಪತ್ರಾಂಕಿತ ವ್ಯವಸ್ಥಾಪಕರು, ರವರಿಗೆ ರಜೆ ಮಂಜೂರು ಮಾಡಲು ಸರ್ಕಾರವು ನಿರ್ಧರಿಸಿರುವ ಕಾರಣ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 16 ಹುಸ್ಕಮು 2007 ಬೆಂಗಳೂರು, ದಿನಾಂಕ: 06-09-2007.**

ಶ್ರೀ ಕೆ.ಎನ್. ರತ್ನಸ್ವಾಮಿ, ವ್ಯವಸ್ಥಾಪಕರು ರವರ ದಿನಾಂಕ: 14-06-2006 ರಿಂದ 28-02-2007 ರವರೆಗಿನ ಅವಧಿಗೆ ಈ ಕೆಳಕಂಡಂತೆ ರಜೆ ಮಂಜೂರು ಮಾಡಲು ಆದೇಶಿಸಿದೆ.

| | | |
|---|---|---|
| 1. | ದಿನಾಂಕ: 14-06-2006 ರಿಂದ 21-06-2006ರ ವರೆಗೆ | 8 ದಿನ ಗಳಿಕೆ ರಜೆ – ವೈಯಕ್ತಿಕ ಕಾರಣಗಳ ಮೇಲೆ |
| 2. | ದಿನಾಂಕ: 22-06-2006 ರಿಂದ 11-10-2006 ರವರೆಗೆ | 112 ದಿನ ಗಳಿಕೆ ರಜೆ ವೈದ್ಯಕೀಯ ಕಾರಣ ಮೇಲೆ |
| 3. | ದಿನಾಂಕ: 12-10-2006 ರಿಂದ 31-10-2006 ರವರೆಗೆ | 20 ದಿನಗಳ ಪರಿವರ್ತಿತ ರಜೆ ವೈದ್ಯಕೀಯ ಕಾರಣಗಳ ಮೇಲೆ |
| 4. | ದಿನಾಂಕ: 01-11-2006 ರಿಂದ 28-02-2007 ರವರೆಗೆ | 120 ದಿನ ಅಸಾಧಾರಣ ರಜೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ, ನಿಯಮ 117ರ ಪ್ರಕಾರ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1653

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ:** ಮೈಸೂರಿನಲ್ಲಿ ಪ್ರಾದೇಶಿಕ ವಿಜ್ಞಾನ ಕೇಂದ್ರವನ್ನು ಸ್ಥಾಪಿಸಲು ಅನುದಾನ ಬಿಡುಗಡೆ ಬಗ್ಗೆ

**ಓದಲಾಗಿದೆ:** 1 ಸರ್ಕಾರಿ ಆದೇಶ ಸಂಖ್ಯೆ: ವಿಯಇ 185 ವಿತ್ರಮ 06 ದಿನಾಂಕ: 30-04-2007.

2 ಮೈಸೂರು ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರ್‌ರವರ ಅ.ಸ. ಪತ್ರ ಸಂಖ್ಯೆ: ಡಿವಿ 3/71/2005-06, ದಿನಾಂಕ: 27/06/2005

**ಪ್ರಸ್ತಾವನೆ:**

ಭಾರತ ಸರ್ಕಾರವು ವಿಜ್ಞಾನ ಮತ್ತು ತಂತ್ರಜ್ಞಾನದಲ್ಲಿ ಆಗುತ್ತಿರುವ ಬೆಳವಣಿಗೆಗಳು ಉದ್ಯಮ ಜನ ಕಲ್ಯಾಣ ಸಲುವಾಗಿ ಜನರಲ್ಲಿ ವೈಜ್ಞಾನಿಕ ಮನೋಭಾವನೆಯನ್ನು ಬಲಪಡಿಸುವ ಏಕೈಕ ಉದ್ದೇಶದಿಂದ ವಿಜ್ಞಾನ ನಗರಗಳನ್ನು, ಪ್ರಾದೇಶಿಕ ವಿಜ್ಞಾನ ಕೇಂದ್ರಗಳನ್ನು ಮತ್ತು ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರಗಳನ್ನು ಸ್ಥಾಪಿಸುವ ಸಲುವಾಗಿ ಯೋಜನೆಯೊಂದನ್ನು ರೂಪಿಸಿ ಮಾರ್ಗಸೂಚಿಗಳನ್ನು ಹೊರಡಿಸಿದೆ.

ಮೇಲ್ಕಾಣಿಸಿದ ಯೋಜನೆಯಡಿ ಮೈಸೂರಿನ ಚಾಮುಂಡಿ ಬೆಟ್ಟದ ಹತ್ತಿರ ಪ್ರಾದೇಶಿಕ ವಿಜ್ಞಾನ ಕೇಂದ್ರವೊಂದನ್ನು ಸ್ಥಾಪಿಸುವ ಉದ್ದೇಶದಿಂದ ಮೈಸೂರು ಪ್ರಾದೇಶಿಕ ವಿಜ್ಞಾನ ಕೇಂದ್ರ ಸೊಸೈಟಿ ಎಂಬ ಸಂಘವನ್ನು ರಚಿಸಿ, ಯೋಜನಾ ವರದಿಯೊಂದಿಗೆ ಮೇಲೆ ಓದಲಾದ (1)ರಲ್ಲಿನ ಅರೆ ಸರ್ಕಾರಿ ಪತ್ರದಲ್ಲಿ ಪ್ರಸ್ತಾವನೆಯೊಂದನ್ನು ರಿಜಿಸ್ಟ್ರಾರ್, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು. ಇವರು ಸರ್ಕಾರಕ್ಕೆ ಸಲ್ಲಿಸಿದ್ದಾರೆ.

ಮೇಲೆ ಹೇಳಿದ ಪ್ರಸ್ತಾವನೆಯನ್ನು ಕೇಂದ್ರ ಸರ್ಕಾರದ ಮಾರ್ಗಸೂಚಿಗಳ ಅಡಿಯಲ್ಲಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಿಯಇ 90 ವಿತ್ರಮ 2005, ಬೆಂಗಳೂರು, ದಿನಾಂಕ: 27ನೇ ಆಗಸ್ಟ್ 2007.**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ, ಮೈಸೂರು ಚಾಮುಂಡಿ ಬೆಟ್ಟದ ಹತ್ತಿರ ಕುರುಬರಹಳ್ಳಿಯ ಸರ್ವೆ ನಂ. 4ರಲ್ಲಿ ಕಾಯ್ದಿರಿಸಲಾದ 25 ಎಕರೆ ಜಮೀನಿನಲ್ಲಿ ಪ್ರಾದೇಶಿಕ ವಿಜ್ಞಾನ ಕೇಂದ್ರವೊಂದನ್ನು ಸ್ಥಾಪಿಸುವ ಕುರಿತು, ರಿಜಿಸ್ಟ್ರಾರ್, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು. ಇವರು ಸಲ್ಲಿಸಿದ ರೂ. 6.50 ಕೋಟಿಗಳ ಅಂದಾಜು ಪ್ರಸ್ತಾವನೆಗೆ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆ.

1. ಈ ಯೋಜನೆಗೆ ತಗಲುವ ಒಟ್ಟು ವೆಚ್ಚ ರೂ. 6.50 ಕೋಟಿಗಳ ಪೈಕಿ ಅರ್ಧದಷ್ಟನ್ನು ಅಂದರೆ ರೂ. 3.25 ಕೋಟಿಗಳನ್ನು ರಾಜ್ಯ ಸರ್ಕಾರವು, ಉಳಿದ ಅರ್ಧದಷ್ಟನ್ನು ಅಂದರೆ ರೂ. 3.25 ಕೋಟಿಗಳನ್ನು ಭಾರತ ಸರ್ಕಾರವು ಭರಿಸುತ್ತದೆ.
2. ಒಂದು ವೇಳೆ ಕೇಂದ್ರ ಸರ್ಕಾರವು ಈ ಯೋಜನೆಗೆ ಒಪ್ಪದೇ ಇರುವ ಸಂದರ್ಭದಲ್ಲಿ ಈ ಯೋಜನೆಯನ್ನು ರಾಜ್ಯ ಸರ್ಕಾರದ ಪಾಲಿನ 3.25ಕೋಟಿ ರೂ.ಗಳ ಗಾತ್ರಕ್ಕೆ ಕುಗ್ಗಿಸಿ ಅನುಷ್ಠಾನಗೊಳಿಸುವುದು. ಮತ್ತು

ಯೋಜನೆಯ ಹೆಚ್ಚುವರಿ ವಿಸ್ತರಣೆಗಳನ್ನು ಮೈಸೂರು ಪ್ರಾದೇಶಿಕ ವಿಜ್ಞಾನ ಕೇಂದ್ರ ಸೊಸೈಟಿಯ ಸಾರ್ವಜನಿಕರಿಂದ ದೇಣಿಗೆಗಳನ್ನು ಸಂಗ್ರಹಿಸಿದಾಗ ಮತ್ತು ಸಂಗ್ರಹಿಸಿದ ಮೇಲೆ ಮಾಡತಕ್ಕದ್ದು.

3. ಈ ಯೋಜನೆಯನ್ನು ಕೇಂದ್ರ ಸರ್ಕಾರದ ಹಾಗೂ ನ್ಯಾಷಿನಲ್ ಕೌನ್ಸಿಲ್ ಫಾರ್ ಸೈನ್ಸ್ ಮೂಸಿಯಮ್ಸ್, ಕೋಲ್ಕತ್ತ ಇವರ ಮಾರ್ಗಸೂಚಿಗಳ ಪ್ರಕಾರ ನಿಗದಿತ ಅವಧಿಯೊಳಗಾಗಿ ಅನುಷ್ಠಾನಗೊಳಿಸುವುದು.
4. ಈ ಯೋಜನೆಗೆ ಈಗ ನೀಡಿದ ಅನುದಾನಕ್ಕಿಂತ ಹೆಚ್ಚಿನ ಅನುದಾನವನ್ನು ರಾಜ್ಯ ಸರ್ಕಾರದಿಂದ ನೀಡುವುದು ಸಾಧ್ಯವಿಲ್ಲ.
5. ಯೋಜನಾ ಅನುಷ್ಠಾನದ ವೆಚ್ಚದಲ್ಲಿ ಸರ್ಕಾರದ ಪಾಲುದಾರಿಕೆಯನ್ನು ಸೀಮಿತಗೊಳಿಸಲಾಗಿದೆ.
6. ಯೋಜನೆಯ ಅನುಷ್ಠಾನದಲ್ಲಿ ಪಾರದರ್ಶಕತೆ ನೀತಿಯಿಂದ ಗುರುತಿಸಲಾದಂತಹ ಜವಾಬ್ದಾರಿಯಲ್ಲಿಯೇ ಇರತಕ್ಕದ್ದು.
7. ಉದ್ದೇಶಿತ ಯೋಜನೆಯ ನಿವೇಶನವು ಸರ್ಕಾರದ ಸಾಮ್ಯತೆಯಲ್ಲಿ ಇರುತ್ತದೆ. ಅಥವಾ ಖಾಸಗಿ ಪಾಲುದಾರಿಕೆಯವರಿಗೆ ಮಾರುಕಟ್ಟೆ ದರದ ಮೇರೆಗೆ ಗುತ್ತಿಗೆ (Lease) ನಿಗಧಿಪಡಿಸುವುದು.
8. ಯೋಜನೆಯಲ್ಲಿ ಖಾಸಗಿ ಹೂಡಿಕೆದಾರರಿಗೆ ಯಾವುದೇ ರೀತಿಯ ಆಶ್ವಾಸನೆಯನ್ನು, ಭರವಸೆಯನ್ನು ಸರ್ಕಾರದಿಂದ ಅಪೇಕ್ಷಿಸತಕ್ಕದ್ದಲ್ಲ.
9. ಯೋಜನಾ ವೆಚ್ಚವನ್ನು ಲೆಕ್ಕಶೀರ್ಷಿಕೆ 3425–60–200–0–20–(101)(ಯೋ) ಇದರ ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಎಫ್‌ಡಿ 459 ವೆಚ್ಚ–7/07 ದಿನಾಂಕ: 25/5/2007 ಹಾಗೂ ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ: ಪಿಡಿ 19 ಜಶ 2006, ದಿನಾಂಕ: 23/03/2006ರಲ್ಲಿ ಸದರಿ ಇಲಾಖೆಗಳು ನೀಡಿದ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1654

**ಹೆಚ್.ಎನ್. ಪ್ರಸಾದ್**

ಸರ್ಕಾರದ ಅಧೀನ ಕಾರ್ಯದರ್ಶಿ,
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## ಶಿಕ್ಷಣ ಸಚಿವಾಲಯ

**ವಿಷಯ:** ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಲ್ಲಿನ ಕ್ರೀಡಾ ಶುಲ್ಕವನ್ನು ಪರಿಷ್ಕರಿಸುವ ಬಗ್ಗೆ

**ಓದಲಾಗಿದೆ:** ನಿರ್ದೇಶಕರು, ಪ್ರೌಢ ಶಿಕ್ಷಣ ಇವರ ದಿನಾಂಕ: 16.06.2007ರ ಪತ್ರ ಸಂಖ್ಯೆ: ಸಿ4 (6) ಶು.ಮ.ಪಾ. 59/2005–06.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 16.06.2007ರ ಪತ್ರದನ್ವಯ ನಿರ್ದೇಶಕರು (ಪ್ರೌಢ ಶಿಕ್ಷಣ), ಸಾರ್ವಜನಿಕ ಶಿಕ್ಷಣ ಇಲಾಖೆ, ಇವರು ಸರ್ಕಾರಿ ಪ್ರಾಥಮಿಕ ಪ್ರೌಢ ಶಾಲೆಗಳಲ್ಲಿ ಕ್ರೀಡಾ ಸಲಕರಣೆಗಳು ಮತ್ತು ಇಲಾಖೆ ನಡೆಸುವ ವಿವಿಧ ಕ್ರೀಡೆಗಳಲ್ಲಿ ಭಾಗವಹಿಸುವ ವಿದ್ಯಾರ್ಥಿಗಳಿಗೆ ಆರ್ಥಿಕ ನೆರವು ಈಗ ಇರುವ ಶುಲ್ಕದಲ್ಲಿ ವೆಚ್ಚ ಮಾಡಲು ಸಾಕಾಗುವುದಿಲ್ಲವೆಂದು ದಿನಾಂಕ: 16.06.2007 ರಂದು ನಡೆದ ಡಾ॥ ವೈದ್ಯನಾಥನ್ ಕಮಿಟಿ, ಸಭೆಯಲ್ಲಿ ನಿರ್ಣಯ ಕೈಗೊಂಡು ಈಗ ವಿದ್ಯಾರ್ಥಿಗಳಿಂದ ವಸೂಲಿ ಮಾಡುತ್ತಿರುವ ಕ್ರೀಡಾ ಶುಲ್ಕವನ್ನು ಪರಿಷ್ಕರಿಸುವಂತೆ ತೀರ್ಮಾನಿಸಿದೆ. ಆದ್ದರಿಂದ ಈಗಿರುವ ಕ್ರೀಡಾ ಶುಲ್ಕವನ್ನು ಈ ಕೆಳಗಿನಂತೆ ಪರಿಷ್ಕರಿಸಲು ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| ಪ್ರಸ್ತುತ ಇರುವ ಕ್ರೀಡಾ ಶುಲ್ಕದ ವಿವರ | | ಪರಷ್ಕರಿಸಬೇಕಾದ ಕ್ರೀಡಾ ಶುಲ್ಕದ ವಿವರ | |
|---|---|---|---|
| ತರಗತಿ | ಕ್ರೀಡಾ ಶುಲ್ಕ (ರೂ.ಗಳಲ್ಲಿ) | ತರಗತಿ | ಕ್ರೀಡಾ ಶುಲ್ಕ (ರೂ.ಗಳಲ್ಲಿ) |
| 1 ರಿಂದ 5 | -- | 1 ರಿಂದ 5 | -- |
| 6 ರಿಂದ 7 | 15.00 | 6 ರಿಂದ 7 | 20.00 |
| 8 ರಿಂದ 10 | 20.00 | 8 ರಿಂದ 10 | 25.00 |

2. ನಿರ್ದೇಶಕರು (ಪ್ರೌಢ ಶಿಕ್ಷಣ), ಸಾರ್ವಜನಿಕ ಶಿಕ್ಷಣ ಇಲಾಖೆ, ಇವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದೆ ಹಾಗೂ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 220 ಎಸ್‌ಎಲ್‌ಬಿ 2007, ಬೆಂಗಳೂರು ದಿನಾಂಕ: 03.09.2007**

3. ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ದಿನಾಂಕ: 16.06.2007 ರಂದು ನಡೆದ ಡಾ॥ ವೈದ್ಯನಾಥನ್ ಕಮಿಟಿ, ಸಭೆಯಲ್ಲಿ ಕೈಗೊಂಡ ನಿರ್ಣಯದಂತೆ ಈಗ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಲ್ಲಿನ ವಿದ್ಯಾರ್ಥಿಗಳಿಂದ ವಸೂಲಿ ಮಾಡುತ್ತಿರುವ ಕ್ರೀಡಾ ಶುಲ್ಕವನ್ನು ಈ ಕೆಳಕಂಡಂತೆ ಪರಿಷ್ಕರಿಸಲಾಗಿದೆ.

| ಪ್ರಸ್ತುತ ಇರುವ ಕ್ರೀಡಾ ಶುಲ್ಕದ ವಿವರ | | ಪರಷ್ಕರಿಸಬೇಕಾದ ಕ್ರೀಡಾ ಶುಲ್ಕವ ವಿವರ | |
|---|---|---|---|
| ತರಗತಿ | ಕ್ರೀಡಾ ಶುಲ್ಕ (ರೂ.ಗಳಲ್ಲಿ) | ತರಗತಿ | ಕ್ರೀಡಾ ಶುಲ್ಕ (ರೂ.ಗಳಲ್ಲಿ) |
| 1 ರಿಂದ 5 | -- | 1 ರಿಂದ 5 | -- |
| 6 ರಿಂದ 7 | 15.00 | 6 ರಿಂದ 7 | 20.00 |
| 8 ರಿಂದ 10 | 20.00 | 8 ರಿಂದ 10 | 25.00 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1655

**ಎಂ.ಎನ್. ಸೋಮಶೇಖರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ.

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ:** ಹಾಸನ ತಾಲ್ಲೂಕಿನ ಆಡುವಳ್ಳಿ ಗ್ರಾಮದ ಸರ್ವೆ ನಂ. 11 ರಲ್ಲಿ ರೇಷ್ಮೆ ಇಲಾಖೆಯು ಹೊಂದಿರುವ ಹಾಸನ ಬೆಳವಣಿಗೆ ಕೇಂದ್ರದ ಕಟ್ಟಡ ಹಾಗೂ ಜಮೀನನ್ನು ಸರ್ಕಾರಿ ಇಂಜಿನಿಯರಿಂಗ್ ಕಾಲೇಜು ಸ್ಥಾಪನೆಗಾಗಿ ತಾಂತ್ರಿಕ ಶಿಕ್ಷಣ ಇಲಾಖೆಗೆ ನೀಡುವ ಬಗ್ಗೆ.

**ಓದಲಾಗಿದೆ:**

1 ದಿನಾಂಕ: 2-8-2007 ರಂದು ಮಾನ್ಯ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ಹಾಸನದಲ್ಲಿ ಹೊಸ ಸರ್ಕಾರಿ ಇಂಜಿನಿಯರಿಂಗ್ ಕಾಲೇಜು ಸ್ಥಾಪನೆ ಕುರಿತಂತೆ ನಡೆದ ಪ್ರಗತಿ ಪರಿಶೀಲನಾ ಸಭೆಯ ನಡವಳಿಗಳು

2 ಮುಖ್ಯಮಂತ್ರಿಯವರ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ: ಸಿಎಂ/ಎಸ್‌ಸಿಎಂ-2/2205/2007, ದಿನಾಂಕ: 6-8-2007.

3. ರೇಷ್ಮೆ ಕೃಷಿ ಅಭಿಬಿವೃದ್ಧಿ ಆಯುಕ್ತರ ಪತ್ರ ಸಂಖ್ಯೆ: ರೇಉಕೋ/ತಾಂ1/ಬೆಕೇ/ವಿಲೇವಾರಿ/ಹಾಸನ/ 14/2006-07, ದಿನಾಂಕ: 21.8.2007.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ: 2-8-2007 ರಂದು ಮಾನ್ಯ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ಹಾಸನದಲ್ಲಿ ಹೊಸ ಸರ್ಕಾರಿ ಇಂಜಿನಿಯರಿಂಗ್ ಕಾಲೇಜು ಸ್ಥಾಪನೆಗೆ ಕುರಿತಂತೆ ನಡೆದ ಸಭೆಯಲ್ಲಿ ಹಾಸನದಲ್ಲಿ ಸರ್ಕಾರಿ ಇಂಜಿನಿಯರಿಂಗ್ ಕಾಲೇಜನ್ನು ಸ್ಥಾಪಿಸಲಾಗುತ್ತಿರುವ ಜಾಗದ ಪಕ್ಕದಲ್ಲಿಯೇ ಲಭ್ಯವಿರುವ ರೇಷ್ಮೆ ಮಾರುಕಟ್ಟೆ ಮಂಡಳಿಗೆ ಸೇರಿದ ಜಮೀನನ್ನು ಪಡೆದು ಇಂಜಿನಿಯರಿಂಗ್ ಕಾಲೇಜಿನ ಉಪಯೋಗಕ್ಕೆ ಬಳಸಲು ಚರ್ಚಿಸಿ, ಹಾಸನ ಸರ್ಕಾರಿ ಇಂಜಿನಿಯರಿಂಗ್ ಕಾಲೇಜಿನ ನಿವೇಶನಕ್ಕೆ ಹೊಂದಿಕೊಂಡಿರುವ ಬಿ.ಎಂ. ರಸ್ತೆಯ ಸರ್ವೆ ನಂ. 11 ರಲ್ಲಿ ರೇಷ್ಮೆ ಮಾರುಕಟ್ಟೆ ಮಂಡಳಿಗೆ ಸೇರಿದ ಒಂದೂವರೆ ಎಕರೆ ಜಮೀನನ್ನು ಹಾಗೂ ಈ ಜಮೀನಿನ ಕಟ್ಟಡಗಳನ್ನು ರೇಷ್ಮೆ ಇಲಾಖೆಯಿಂದ ಕಟ್ಟಡದ ಬೆಲೆಯೂ ಒಳಗೊಂಡಂತೆ ಎಕರೆಗೆ ರೂ. 10 ಲಕ್ಷಗಳ ದರದಲ್ಲಿ ತಾಂತ್ರಿಕ ಶಿಕ್ಷಣ ಇಲಾಖೆಗೆ ವರ್ಗಾಯಿಸಲು ತೀರ್ಮಾನಿಸಲಿರುವ ಹಿನ್ನಲೆಯಲ್ಲಿ ಈ ಬಗ್ಗೆ ಅಗತ್ಯ ಕ್ರಮ ಕೈಗೊಳ್ಳುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಟಿಪ್ಪಣಿಯಲ್ಲಿ ಮಾನ್ಯ ಮುಖ್ಯಮಂತ್ರಿಯವರ ಕಾರ್ಯದರ್ಶಿಯವರು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮಸಂಖ್ಯೆ (3)ರ ಪತ್ರದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ದಿ: 2-8-2007ರಂದು ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ನಡೆದ ಹಾಸನದ ಬೆಳವಣಿಗೆ ಕೇಂದ್ರದ 4 ಶೆಡ್‌ಗಳಿರುವ ಒಂದೂವರೆ ಎಕರೆ ಜಮೀನನ್ನು ಇಂಜಿನಿಯರಿಂಗ್ ಕಾಲೇಜಿಗೆ ಹಸ್ತಾಂತರಿಸಲು ತೀರ್ಮಾನಿಸಿರುವ ಹಿನ್ನಲೆಯಲ್ಲಿ ಸದರಿ ಜಮೀನನ್ನು ಇಂಜಿನಿಯರಿಂಗ್ ಕಾಲೇಜಿಗೆ ಹಸ್ತಾಂತರಿಸಲು ಮಾನ್ಯ ಲೋಕೋಪಯೋಗಿ ಸಚಿವರು ಪ್ರಸ್ತಾವಿಸಿರುವಂತೆ ತಿಳಿಸಿ, ಈ ಕೇಂದ್ರದಲ್ಲಿರುವ ಯಂತ್ರೋಪಕರಣಗಳನ್ನು ಸ್ಥಳಾಂತರಿಸಲು ಕಟ್ಟಡಗಳು ಲಭ್ಯವಿಲ್ಲದ ಕಾರಣ ಅವುಗಳನ್ನು ಎಲ್ಲಿವೆಯೋ ಹಾಗೆಯೇ ಹರಾಜು ಪ್ರಕ್ರಿಯೆ ಮೂಲಕ ವಿಲೇ ಮಾಡಲು ಹಾಗೂ ಮಾನ್ಯ ಲೋಕೋಪಯೋಗಿ ಸಚಿವರ ಪ್ರಸ್ತಾವನೆಯಂತೆ ಹಾಸನ ತಾಲ್ಲೂಕಿನ ಆಡುವಳ್ಳಿ ಗ್ರಾಮದ ಸರ್ವೆ ನಂ. 11ರಲ್ಲಿಯ ಒಂದೂವರೆ ಎಕರೆ ಜಮೀನನ್ನು ಹಾಗೂ ಬೆಳವಣಿಗೆ ಕೇಂದ್ರದ 4 ಶೆಡ್ ಹಾಗೂ ಇನ್ನಿತರ 4 ಕಟ್ಟಡಗಳನ್ನು ಸರ್ಕಾರಿ ಇಂಜಿನಿಯರಿಂಗ್ ಕಾಲೇಜಿಗೆ ಹಸ್ತಾಂತರಿಸಲು ಆದೇಶ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ತೀರ್ಮಾನದ ಹಿನ್ನಲೆಯಲ್ಲಿ ಹಾಗೂ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರ ಅಭಿಪ್ರಾಯದ ಹಿನ್ನಲೆಯಲ್ಲಿ ಹಾಸನ ತಾಲ್ಲೂಕಿನ ಆಡುವಳ್ಳಿ ಗ್ರಾಮದ ಸರ್ವೆ ನಂ. 11 ರಲ್ಲಿರುವ ಒಂದೂವರೆ ಎಕರೆ ಜಮೀನನ್ನು ಹಾಗೂ ಈ ಜಮೀನಿನ ಕಟ್ಟಡಗಳನ್ನು ತಾಂತ್ರಿಕ ಶಿಕ್ಷಣ ಇಲಾಖೆಗೆ ವರ್ಗಾಯಿಸಲು ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 10 ರೇಯೋವಿ 2007, ಬೆಂಗಳೂರು, ದಿನಾಂಕ: 7-9-2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಹಾಸನ ತಾಲ್ಲೂಕಿನ ಆಡುವಳ್ಳಿ ಗ್ರಾಮದ ಸರ್ವೆ ನಂ. 11ರಲ್ಲಿರುವ ರೇಷ್ಮೆ ಇಲಾಖೆಯ ಒಂದೂವರೆ ಎಕರೆ ಜಮೀನನ್ನು ಹಾಗೂ ಬೆಳವಣಿಗೆ ಕೇಂದ್ರದ 4 ಶೆಡ್ ಹಾಗೂ ಇನ್ನಿತರ 4

ಕಟ್ಟಡಗಳನ್ನು, ಕಟ್ಟಡದ ಬೆಲೆಯೂ ಒಳಗೊಂಡಂತೆ ಎಕರೆಗೆ ರೂ. 10 ಲಕ್ಷಗಳ ದರದಲ್ಲಿ ರೇಷ್ಮೆ ಇಲಾಖೆಯಿಂದ ತಾಂತ್ರಿಕ ಶಿಕ್ಷಣ ಇಲಾಖೆಗೆ ವರ್ಗಾಯಿಸಲು ಅನುಮೋದನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1656

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ (ರೇಷ್ಮೆ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಎ. ಮಹದೇವ, ನಿವೃತ್ತ ಕೆ.ಎ.ಎಸ್. ಅಧಿಕಾರಿ, ಇವರು ಚಿತ್ರದುರ್ಗ ಜಿಲ್ಲಾ ಪಂಚಾಯತ್ ಕಛೇರಿಯಲ್ಲಿ ಎಸಗಿದ ದುರ್ನಡತೆಗೆ ದಂಡನೆ ವಿಧಿಸುವ ಬಗ್ಗೆ – ಆದೇಶ.

**ಓದಲಾಗಿದೆ:**
1 ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 20 ಎಸ್ಇಎನ್ 2001, ದಿನಾಂಕ: 2.4.2001 ಮತ್ತು ತಿದ್ದೋಲೆ ದಿನಾಂಕ: 3.5.2001
2 ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 20 ಎಸ್ಇಎನ್ 2001, ದಿನಾಂಕ: 19.10.2004.
3. ಪತ್ರ ಸಂಖ್ಯೆ: ಪಿಎಫ್‌ಸಿ 113 ಸಿಎನ್ಎಸ್ 04, ದಿನಾಂಕ 12.1.05.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ಮತ್ತು (2)ರಲ್ಲಿ ಓದಲಾದ ಆದೇಶದಲ್ಲಿ ಚಿತ್ರದುರ್ಗ ಜಿಲ್ಲಾ ಪಂಚಾಯತ್ ವ್ಯಾಪ್ತಿಯಲ್ಲಿನ ಮಂಡಲ ಪಂಚಾಯಿತಿಗಳಿಗೆ ಅವಶ್ಯವಿರುವ ವಹಿಗಳು, ಅರ್ಜಿಗಳು ಇತ್ಯಾದಿ ಲೇಖನ ಸಾಮಗ್ರಿಗಳನ್ನು ಮುದ್ರಿಸುವ ವಿಚಾರದಲ್ಲಿ ಅವ್ಯವಹಾರ ನಡೆದಿದೆ ಎಂಬ ಆರೋಪದ ಹಿನ್ನೆಲೆಯಲ್ಲಿ ಈ ಕೆಳಕಂಡ ಅಧಿಕಾರಿ, ನೌಕರರ ವಿರುದ್ಧ ಜಂಟಿ ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 14 (ಎ) ರಡಿ ಈ ಪ್ರಕರಣವನ್ನು ಲೋಕಾಯುಕ್ತರಿಗೆ ವಹಿಸಲಾಗಿತ್ತು.

1. ಶ್ರೀ ಮಹದೇವ ನಿವೃತ್ತ ಕೆ.ಎ.ಎಸ್. ಅಧಿಕಾರಿ, ಅಂದಿನ ಸಹಾಯಕ ಕಾರ್ಯದರ್ಶಿ, ಜಿಲ್ಲಾ ಪಂಚಾಯತ್, ಚಿತ್ರದುರ್ಗ.
2. ಶ್ರೀ ಎ.ಎನ್. ರಾಮರೆಡ್ಡಿ ಅಂದಿನ ಕಛೇರಿ ವ್ಯವಸ್ಥಾಪಕರು, ಜಿಲ್ಲಾ ಪಂಚಾಯತ್, ಚಿತ್ರದುರ್ಗ
3. ಶ್ರೀ ಸದ್ಯೋಜಾದಪ್ಪ, ವಿಷಯ ನಿರ್ವಾಹಕರು, ಜಿಲ್ಲಾ ಪಂಚಾಯತ್, ಚಿತ್ರದುರ್ಗ.
4. ಶ್ರೀ ವಿಜಯರಾಜ್, ಕಾರ್ಯದರ್ಶಿ, ಶ್ರೀರಾಮಪುರ ಮಂಡಲ ಪಂಚಾಯಿತಿ.

ಲೋಕಾಯುಕ್ತರು ದಿನಾಂಕ: 01.01.2003 ರಂದು ಸರ್ಕಾರಕ್ಕೆ ವರದಿಯನ್ನು ಸಲ್ಲಿಸಿ ಆರೋಪವು ಸಾಬೀತಾಗಿರುವ ಹಿನ್ನೆಲೆಯಲ್ಲಿ ಆಪಾದಿತರಿಗೆ ದಂಡನೆ ವಿಧಿಸಲು ಶಿಫಾರಸ್ಸು ಮಾಡಿದ್ದು, ಈ ಪೈಕಿ ಆರೋಪಿತ ಅಧಿಕಾರಿಯಾದ ಶ್ರೀ ಎ. ಮಹದೇವ ಅವರು ಸೇವೆಯಿಂದ ನಿವೃತ್ತರಾಗಿರುವುದರಿಂದ ಅವರನ್ನು ಹೊರತುಪಡಿಸಿ ಲೋಕಾಯುಕ್ತರು ಶಿಫಾರಸ್ಸು ಮಾಡಿರುವ ದಂಡನೆಯು ತೀವ್ರವೆಂದು ಸರ್ಕಾರವು ನಿರ್ಣಯಿಸಿ ಈ ಶಿಫಾರಸ್ಸನ್ನು ಒಪ್ಪದೇ, ಉಳಿದ ಮೂರು ನೌಕರರುಗಳಿಗೆ ಕುರಿತಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ದಂಡನೆ ಆದೇಶವನ್ನು ಹೊರಡಿಸಲಾಗಿದೆ.

ಈ ಪ್ರಕರಣದಲ್ಲಿನ ಆಪಾದಿತರಾದ ಶ್ರೀ ಎ. ಮಹದೇವ ನಿವೃತ್ತ ಕೆ.ಎ.ಎಸ್. ಅಧಿಕಾರಿ ಇವರ ನಿವೃತ್ತಿ ವೇತನದ ಶೇ. 50 ರಷ್ಟು ಕಡಿತಗೊಳಿಸಲು ಲೋಕಾಯುಕ್ತರು ಸರ್ಕಾರಕ್ಕೆ ಶಿಫಾರಸ್ಸು ಮಾಡಿದ್ದರು. ಆದರೆ, ಲೋಕಾಯುಕ್ತರ ಶಿಫಾರಸ್ಸನ್ನು ಸರ್ಕಾರ ಒಪ್ಪದೆ ಸದರಿಯವರಿಗೆ ರೂ. 300.00 ಗಳನ್ನು ನಿವೃತ್ತಿ ವೇತನದಿಂದ ಶಾಶ್ವತವಾಗಿ ಕಡಿತಗೊಳಿಸಲು ನಿರ್ಣಯಿಸಿ ದಂಡನೆ ವಿಧಿಸುವ ಮೊದಲು ಪ್ರಸ್ತಾವನೆಯನ್ನು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಗಾಗಿ ಕಳುಹಿಸಲಾಗಿತ್ತು.

ಕರ್ನಾಟಕ ಲೋಕಸೇವಾ ಆಯೋಗವು ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಎ. ಮಹದೇವ, ನಿವೃತ್ತ ಕೆ.ಎ.ಎಸ್. ಅಧಿಕಾರಿ ಇವರು ಈಗಾಗಲೇ ಎರಡು ಬಾರಿ ಇತರೆ ಪ್ರಕರಣಗಳಲ್ಲಿ ಒಳಗಾಗಿದ್ದರೂ ಸಹ ಹಾಗೂ ಇವರ ದೊಡ್ಡ ಪ್ರಮಾಣದಲ್ಲಿ ಅಪರಾಧಗಳನ್ನು ಎಸಗುತ್ತಾ ಬಂದಿರುವುದರಿಂದ ಅವರ ನಿವೃತ್ತಿ ವೇತನದಿಂದ ಪ್ರತಿ ತಿಂಗಳು ರೂ. 700.00 ಗಳನ್ನು ಶಾಶ್ವತವಾಗಿ ಕಡಿತಗೊಳಿಸುವುದು ಸೂಕ್ತವೆಂದು ಅಭಿಪ್ರಾಯ ನೀಡಿರುತ್ತದೆ.

ಶ್ರೀ ಎ. ಮಹದೇವ ನಿವೃತ್ತ ಕೆ.ಎ.ಎಸ್. ಅಧಿಕಾರಿ ಇವರಿಗೆ ಸಂಬಂಧಿಸಿದಂತೆ ವಿಚಾರಣಾ ವರದಿ ಮತ್ತು ಲೋಕಾಯುಕ್ತರ ಶಿಫಾರಸ್ಸನ್ನು ಪರಿಶೀಲಿಸಲಾಗಿ ಲೋಕಾಯುಕ್ತರವರು ಶಿಫಾರಸ್ಸು ಮಾಡಿರುವ ದಂಡನೆಯು ತೀವ್ರವೆಂದು ಸರ್ಕಾರವು ಪರಿಗಣಿಸಿ ಕರ್ನಾಟಕ ಲೋಕಸೇವಾ ಆಯೋಗದ ಶಿಫಾರಸ್ಸಿನಂತೆ ಅವರ ವಿಶ್ರಾಂತಿ ವೇತನದಿಂದ ಪ್ರತಿ ತಿಂಗಳು ರೂ. 700.00 ಗಳನ್ನು ಶಾಶ್ವತವಾಗಿ ಕಡಿತಗೊಳಿಸಿ ದಂಡನೆ ವಿಧಿಸುವುದು ನ್ಯಾಯೋಚಿತವೆಂದು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 20 ಎಸ್ಇಎನ್ 2001, ಬೆಂಗಳೂರು ದಿನಾಂಕ: 12.9.2007**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಸರ್ಕಾರವು ಈ ಪ್ರಕರಣದ ಒಂದನೇ ಆರೋಪಿಯಾದ ಶ್ರೀ ಎ. ಮಹದೇವ ನಿವೃತ್ತ ಕೆ.ಎ.ಎಸ್. ಅಧಿಕಾರಿ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 214 (1)

(ಎ) ಅನುಸಾರ ಅವರ ನಿವೃತ್ತಿ ವೇತನದಿಂದ ಪ್ರತಿ ತಿಂಗಳು ರೂ. 700.00 (ರೂ. ಏಳುನೂರು ಮಾತ್ರ)ಗಳನ್ನು ಶಾಶ್ವತವಾಗಿ ಕಡಿತಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1658

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸುಇ (ಸೇವೆಗಳು-2)

**ವಿಷಯ:** ಶ್ರೀ ಬಿ.ಎನ್. ಚಂದ್ರಶೇಖರಯ್ಯ, ನಿವೃತ್ತ ಇಂಜಿನಿಯರ್-ಇನ್-ಚೀಫ್ ಮತ್ತು ಶ್ರೀ ಪಿ. ಪುಷ್ಪರಾಜು, ನಿವೃತ್ತ ತಾಂತ್ರಿಕ ಸಹಾಯಕರು, ರಾಷ್ಟ್ರೀಯ ಹೆದ್ದಾರಿಗಳು, ಬೆಂಗಳೂರು ಇವರುಗಳ ವಿರುದ್ಧ ಶಿಸ್ತು ಕ್ರಮ ಪ್ರಾರಂಭಿಸುವಂತೆ ಕೋರಿ ಸಲ್ಲಿಸಲಾಗಿದ್ದ ಸನ್ಮಾನ್ಯ ಲೋಕಾಯುಕ್ತರ ಶಿಫಾರಸ್ಸನ್ನು ತಿರಸ್ಕರಿಸಿ ಶಿಸ್ತು ಕ್ರಮವನ್ನು ಕೈಬಿಡುವ ಬಗ್ಗೆ-ಆದೇಶ.

**ಓದಲಾಗಿದೆ:** ಕರ್ನಾಟಕ ಲೋಕಾಯುಕ್ತ ನಿಬಂಧಕರ ಪತ್ರ ಸಂಖ್ಯೆ: ಕಂಪ್ಲೆಂಟ್/ಲೋಕ್/ಬಿಸಿಡಿ-114/2005/ ಡಿಆರ್ಇ-5, ದಿನಾಂಕ: 25.05.2005.

**ಪ್ರಸ್ತಾವನೆ:**

ಲೋಕೋಪಯೋಗಿ ಇಲಾಖೆ, ರಾಷ್ಟ್ರೀಯ ಹೆದ್ದಾರಿಗಳು, ಬೆಂಗಳೂರಿನಲ್ಲಿ ಶ್ರೀ ಬಿ.ಎನ್. ಚಂದ್ರಶೇಖರಯ್ಯ, ಇಂಜಿನಿಯರ್-ಇನ್-ಚೀಫ್ (ನಿವೃತ್ತ) ಅವರು ಇಂಜಿನಿಯರ್-ಇನ್-ಚೀಫ್ ಹುದ್ದೆಯಲ್ಲಿ ಮತ್ತು ಶ್ರೀ ಪಿ. ಪುಷ್ಪರಾಜು, ತಾಂತ್ರಿಕ ಸಹಾಯಕರು (ನಿವೃತ್ತ) ಅವರು ತಾಂತ್ರಿಕ ಸಹಾಯಕ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ, ಅವರುಗಳು ಭ್ರಷ್ಟಾಚಾರದಲ್ಲಿ ತೊಡಗಿದ್ದಾರೆಂದು ಶ್ರೀ ಹೆಚ್.ಎಸ್. ಸೀತಾರಾಮ್, ಅನೇಕಲ್ ತಾಲ್ಲೂಕು, ಬೆಂಗಳೂರು ಅವರು ನೀಡಿರುವ ದೂರಿನನ್ವಯ ಸನ್ಮಾನ್ಯ ಲೋಕಾಯುಕ್ತ ರವರು ದಿನಾಂಕ: 30.03.2005 ರಂದು ಸದರಿ ಅಧಿಕಾರಿಗಳ ಕಛೇರಿ ಮತ್ತು ನಿವಾಸಗಳನ್ನು ಶೋಧನೆ ಮಾಡಿಸಿದ್ದು ಶೋಧನೆ ಕಾರ್ಯದ ಸಂದರ್ಭದಲ್ಲಿ ಈ ಕೆಳಕಂಡ ಮಾಹಿತಿ ಬೆಳಕಿಗೆ ಬಂದಿರುವುದಾಗಿ ತಿಳಿಸಿರುತ್ತಾರೆ.

1. ಶ್ರೀ ಬಿ.ಎನ್. ಚಂದ್ರಶೇಖರಯ್ಯ, ಇಂಜಿನಿಯರ್-ಇನ್-ಚೀಫ್ ಅವರ ಕಛೇರಿಯಲ್ಲಿ ಅವರ ಬ್ರೀಫ್‌ಕೇಸ್‌ನಲ್ಲಿ ರೂ. 3.00 ಲಕ್ಷ ನಗದು ಹಣ ದೊರಕಿರುತ್ತದೆ ಹಾಗೂ ಇವರ ಜೇಬಿನಲ್ಲಿ ರೂ. 30,000/- ಹಣ ದೊರಕಿರುತ್ತದೆ, ಇವರ ನಿವಾಸದಲ್ಲಿ ರೂ. 9,500/- ದೊರಕಿರುತ್ತದೆ.
2. ಶ್ರೀ ಪಿ. ಪುಷ್ಪರಾಜು, ತಾಂತ್ರಿಕ ಸಹಾಯಕ ಇವರ ಕಛೇರಿಯ ಅಲ್ಮೆರಾದಲ್ಲಿ ರೂ. 50,000/- ಮತ್ತು ಅವರ ಜೇಬಿನಲ್ಲಿ ರೂ. 10,000/- ಹಾಗೂ ಅವರ ನಿವಾಸದಲ್ಲಿ ರೂ. 88,070/- ದೊರಕಿರುತ್ತದೆ.

ಸದರಿ ಅಧಿಕಾರಿಯವರು ಅಧಿಕಾರ ದುರುಪಯೋಗ, ಲಂಚಗುಳಿತನ ಎಸಗಿರುವುದು ಮೇಲ್ನೋಟಕ್ಕೆ ಕಂಡು ಬರುತ್ತಿರುವುದರಿಂದ ಇವರುಗಳ ವಿರುದ್ಧ ಶಿಸ್ತು ಕ್ರಮ ಮತ್ತು ಐ.ಪಿ.ಸಿ. ಅಥವಾ ಪಿ.ಸಿ. ಕಾಯ್ದೆಯಡಿ ಕ್ರಮ ತೆಗೆದುಕೊಳ್ಳಲು ಕರ್ನಾಟಕ ಲೋಕಾಯುಕ್ತ ಕಾಯ್ದೆ ಕಲಂ 12(3)ರಡಿಯಲ್ಲಿ ಮಾಡಲಾಗಿದ್ದ ದಿ: 24.05.2005ರ ಶಿಫಾರಸ್ಸನ್ನು ಮೇಲೆ ಓದಲಾದ ದಿ: 25.05.2005ರ ಪತ್ರದೊಂದಿಗೆ ಲೋಕಾಯುಕ್ತ ನಿಬಂಧಕರು ಸರ್ಕಾರಕ್ಕೆ ಸಲ್ಲಿಸಿದ್ದರು.

ಸನ್ಮಾನ್ಯ ಲೋಕಾಯುಕ್ತರ ದಿ: 24.05.2005ರ ಶಿಫಾರಸ್ಸನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಶ್ರೀ ಬಿ.ಎನ್. ಚಂದ್ರಶೇಖರಯ್ಯ ಮತ್ತು ಶ್ರೀ ಪಿ. ಪುಷ್ಪರಾಜು ಅವರುಗಳು ಈ ಪ್ರಕರಣದಲ್ಲಿನ ಆರೋಪಗಳ ಕುರಿತಂತೆ ಸಲ್ಲಿಸಿರುವ ವಿವರಣೆಗಳನ್ನು ನಂತರ ಪರಿಶೀಲಿಸಲಾಗುವುದೆಂದು ಲೋಕಾಯುಕ್ತ ಕಾಯ್ದೆ ಕಲಂ 12(3)ರ ವರದಿಯಲ್ಲಿ ತಿಳಿಸಿರುವುದನ್ನು ಪರಿಶೀಲಿಸಲಾಗಿದೆ. ಈ ಅಧಿಕಾರಿಗಳು ಅವರ ಬಳಿ ದೊರೆತ ಹಣದ ಕುರಿತಂತೆ ನೀಡಿರುವ ವಿವರಣೆಗಳನ್ನು ಲೋಕಾಯುಕ್ತರವರು ಸರ್ಕಾರಕ್ಕೆ ವರದಿ ಕಳುಹಿಸಿ ಕೊಡುವ ಮುನ್ನ ಪರಿಶೀಲಿಸಿದ ನಂತರ ಪರಿಶೀಲಿಸಲಾಗುವುದೆಂದು ತಿಳಿಸಿರುವುದನ್ನು ಗಮನಿಸಲಾಗಿದೆ. ಇವರುಗಳು ಸಲ್ಲಿಸಿರುವ ವಿವರಣೆಗಳನ್ನು ಅಂಗೀಕರಿಸಿರುವ ಅಥವಾ ತಿರಸ್ಕರಿಸಿರುವ ಬಗ್ಗೆ ನಿರ್ಣಯ ತೆಗೆದುಕೊಂಡ ನಂತರವೇ ಈ ಅಧಿಕಾರಿಗಳು ಮೇಲ್ನೋಟಕ್ಕೆ ದುರ್ನಡತೆ ಎಸಗಿದ್ದಾರೆಂಬ ತೀರ್ಮಾನಕ್ಕೆ ಬರಬೇಕಾಗುತ್ತದೆ. ನಂತರ ಇವರುಗಳ ಸಮಜಾಯಿಷಿಯನ್ನು ಪರಿಶೀಲಿಸಲಾಗುವುದೆಂದು ಲೋಕಾಯುಕ್ತರವರು ತಿಳಿಸಿರುವುದು ಈ ಪ್ರಕರಣವನ್ನು ಪೂರ್ವಭಾವಿಯಾಗಿ ತೀರ್ಮಾನಿಸಿದಂತಾಗುತ್ತದೆ. ಆದುದರಿಂದ ಈ ಅಧಿಕಾರಿಗಳು ಎಸಗಿದ ದುರ್ನಡತೆ ಹಾಗೂ ಯಾವ ನಿಯಮಗಳಡಿ ಕ್ರಮ ತೆಗೆದುಕೊಳ್ಳಲು ಉದ್ದೇಶಿಸಿದೆ ಎಂದು ಸ್ಪಷ್ಟೀಕರಣವನ್ನು ನೀಡುವಂತೆ ಸನ್ಮಾನ್ಯ ಲೋಕಾಯುಕ್ತದ ನಿಬಂಧಕರನ್ನು ಕೋರಲಾಗಿತ್ತು. ಅದಕ್ಕೆ ಉತ್ತರವಾಗಿ ಕಲಂ 12(3) ರಡಿ ಸಲ್ಲಿಸಿರುವ ವರದಿಯ ಬಗ್ಗೆ ಹಾಗೂ ಆರೋಪ ಪಟ್ಟಿ ಇತ್ಯಾದಿ ಅಂಶಗಳ ಬಗ್ಗೆ ಸಕ್ಷಮ ಪ್ರಾಧಿಕಾರಕ್ಕೆ ತಿಳಿಸುವ ಅವಶ್ಯಕತೆ ಉದ್ಭವಿಸುವುದಿಲ್ಲವೆಂದು ವರಿ ಮಾಡಿರುವುದರಿಂದ ಈ ವರದಿಯು ಅಪೂರ್ಣವಾಗಿರುವುದು ಗೋಚರವಾಗುತ್ತದೆ. ಇವರುಗಳ ವಿವರಣೆಗಳನ್ನು ಪರಿಶೀಲನೆ ಮಾಡದೇ ಇರುವುದರಿಂದ ಶೋಧನೆಯ ಸಮಯದಲ್ಲಿ ಈ ಅಧಿಕಾರಿಗಳ ಬಳಿ ಕಂಡು ಬಂದ ಹಣವು ಭ್ರಷ್ಟಾಚಾರಕ್ಕೆ ಸಂಬಂಧಿಸಿದೆ ಎಂದು ಹೇಳಲು ಬರುವುದಿಲ್ಲ. ಇದರಿಂದಾಗಿ ಇವರುಗಳು ದುರ್ನಡತೆ ಎಸಗಿದ್ದಾರೆಂಬ ನಿರ್ಣಯಕ್ಕೆ ಬರಲು ಸಾಧ್ಯವಾಗುವುದಿಲ್ಲ. ಆದುದರಿಂದ ಸದರಿಯವರುಗಳು ಲಂಚಗುಳಿತನ ಎಸಗಿ ಅಧಿಕಾರ

ದುರುಪಯೋಗಪಡಿಸಿ– ಕೊಂಡಿರುತ್ತಾರೆಂದು ಇವರುಗಳ ವಿರುದ್ಧ ಶಿಸ್ತು ಕ್ರಮ ಮತ್ತು ಐ.ಪಿ.ಸಿ. ಅಥವಾ ಪಿ.ಸಿ. ಆಯ್ದೆಯಡಿ ಕ್ರಮವನ್ನು ಕೈಗೊಳ್ಳುವಂತೆ ಕೋರಿ ಸಲ್ಲಿಸಿರುವ ಕರ್ನಾಟಕ ಲೋಕಾಯುಕ್ತ ಕಾಯ್ದೆ ಕಲಂ 12(3)ರ ವರದಿಯನ್ನು ಒಪ್ಪದಿರಲು ಸರ್ಕಾರವು ತೀರ್ಮಾನಿಸಿ ಈ ಕೆಳಗಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 79 ಎಸ್‌ಇಎನ್ 2005 ಬೆಂಗಳೂರು, ದಿನಾಂಕ: 13ನೇ ಸೆಪ್ಟೆಂಬರ್ 2007.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಸರ್ಕಾರವು ಶ್ರೀ ಬಿ.ಎಸ್. ಚಂದ್ರಶೇಖರಯ್ಯ, ನಿವೃತ್ತ ಇಂಜಿನಿಯರ್–ಇನ್–ಚೀಫ್ ಮತ್ತು ಶ್ರೀ ವಿ. ಪುಷ್ಪರಾಜು, ನಿವೃತ್ತ ತಾಂತ್ರಿಕ ಸಹಾಯಕರು, ರಾಷ್ಟ್ರೀಯ ಹೆದ್ದಾರಿಗಳು, ಬೆಂಗಳೂರು ಇವರುಗಳ ವಿರುದ್ಧ ಶಿಸ್ತು ಕ್ರಮ ಮತ್ತು ಐ.ಪಿ.ಸಿ. ಅಥವಾ ಪಿ.ಸಿ. ಕಾಯ್ದೆಯಡಿ ಕ್ರಮಕೈಗೊಳ್ಳಲು 1984ರ ಕರ್ನಾಟಕ ಲೋಕಾಯುಕ್ತ ಕಾಯ್ದೆ ಕಲಂ 12(3)ರಡಿಯಲ್ಲಿ ಸನ್ಮಾನ್ಯ ಲೋಕಾಯುಕ್ತರವರು ಮಾಡಿರುವ ದಿನಾಂಕ: 24.05.2005ರ ಶಿಫಾರಸ್ಸನ್ನು ಒಪ್ಪದಿರಲು ತೀರ್ಮಾನಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1659

**ಎಂ. ವಾಸುದೇವಮೂರ್ತಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3)

**ಒಳಾಡಳಿತ ಸಚಿವಾಲಯ**

**ಸಂಖ್ಯೆ: ಒಇ 397 ಪಿಪಿಇ 2007, ಬೆಂಗಳೂರು, ದಿನಾಂಕ 3ನೇ ಸೆಪ್ಟೆಂಬರ್ 2007**

**ತಿದ್ದುಪಡಿ**

ಸರ್ಕಾರದ ಆದೇಶ ಸಂಖ್ಯೆ ಒಇ 71 ಪಿಪಿಇ 2007, ದಿನಾಂಕ 27.07.2007ರ ವಿಷಯ ಭಾಗದ 2ನೇ ಸಾಲಿನಲ್ಲಿ, ಪ್ರಸ್ತಾವನೆಯ ಖಂಡಿಕೆ 1ರ 2ನೇ ಸಾಲಿನಲ್ಲಿ ಮತ್ತು ಆದೇಶ ಭಾಗದ 2ನೇ ಸಾಲಿನ "ಸಿ.ಜೆ.ಎಂ.ಎಫ್.ಸಿ ನ್ಯಾಯಾಲಯ" ಎಂಬುದರ ಬದಲಾಗಿ "ಸಿ.ಜೆ.ಎಂ. ನ್ಯಾಯಾಲಯ" ಎಂದು ತಿದ್ದುಪಡಿ ಮಾಡಿ ಓದಿಕೊಳ್ಳತಕ್ಕದ್ದು, ಉಳಿದಂತೆ ಸದರಿ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1660

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ)

ಒಳಾಡಳಿತ ಇಲಾಖೆ,

(ಕಾ. ಮತ್ತು ಸು. ಕಾಫಿಪೋಸ ಮತ್ತು ಅಭಿಯೋಗಗಳು)

**FOREST, ECOLOGY AND ENVIRONMENT SECRETARIAT**

**Sub:** Diversion of 1.70 ha. of forest land for establishment of 6 MW of generation across Somavathi river near Samse village, Chickmagalur district in favour of SRM Power Private Limitd, Bangalore.

**Read:**
1 Letter No. A5 (4) GFL.CR-19/05-06, dated: 21.02.2007 of Principal Chief Conservator of Forests, Bangalore.
2 State Government letter No. FEE 31 FLL 2007,dated: 14.03.2007.
3. Letter No. 4-KRC.318/2007-BAN/95, dated: 24.04.2007 of Government of India, Ministry of Environment and Forests, Regional Office, Southern Zone, Bangalore.
4. Leter No. 4-KRC 318/2006-BAN/622, dated: 13.08.2007 of Government of India, Ministry of Environment and Forests, Regional Office, Southern Zone, Bangalore.

**Preamble:**

The Principal Chief Conservator of Forests, Bangalore vide his letter dated: 21-02-2007 read at (1) above has submitted the proposal to obtain the approval of Government of India under Section 2 of Forest (Conservation) Act, 1980 for diversion of 1.70 ha. of forest land i.e. Sy. No. 25, 143 and 183 of Samse Village Mudigere taluk in Chickmagalur district for establishment of 6 MW mini Hydro Electric Power generation plant across Somavathi river in favour of S.R.M. Power Private Limited, Bangalore subject to the certain conditions.

Accordingly the proposal was recommended to Government of India vide State Government letter dated 14.03.2007 read at (2) above.

The Government of India, Ministry of Environment and Forests, Regional office, Bangalore vide their letter dated 24.04.2007 read at (3) above has given its in principle approval (Stage-I) for diversion of forest land subject to fulfillment of certain conditions and the same was communicated to the Principal Chief Conservator of Forests, Bangalore for compliance.

The Principle Chief Conservator of Forests, Bangalore vide his letter dated 28.7.2007 furnished the compliance report.

Government of India Ministry of Environment and Forests, Regional Office, South Zone, Bangalore vide their letter dated 15.08.2007 read at (4) above has conveyed its approval (Stage-II) under Section 2 of the Forest (Conservation) Act, 1980 for diversion of 1.70 ha of forest land i.e, Sy. No. 25, 143 and 183 of Samse village, Mudigere taluk in Chickmagalur district for establishment of 6 MW Mini Hydro Electric Power generation plant across Somavathi river in favour of S.R.M. Power Private Limited, Bangalore subject to certain conditions.

The proposal has been examined in detail and hence the order.

**Government Order No. FEE 31 FLL 2007, Bangalore, dated 29.8.2007**

In the circumstances explained in the preamble above, Government is pleased to accord sanction under Section 2 of The Forest (Conservation) Act, 1980 for diversion of 1.70 ha. of forest land i.e. Sy. No. 25,143 and 183 of Samse village Mudigere taluk in Chickmagalur district for establishment of 6 MW Mini Hydro Electric Power generation plant across Somavathi river in favour of S.R.M. Power Private Limited, Bangalore subject to the following conditions.

1. The legal status of the forest land shall remain unchanged.
2. Compensatory afforestation shall be raised over 1.70 ha. of identified non forest land at Sy. No. 34, Lingapur village, Ndarasimharajpur taluk at the cost of user agency. The State Government shall obtain prior permission of Central Government for change of location and schedule of compensatory afforestation, if any.
3. Non forest land for compensatory afforestation shall be notified by the RF/PF under Indian Forest Act, 1927 or the State Forest Act within a period of 6 months and Nodal Officer (Forest Conservation) shall report the complicance within 6 months.
4. The funds received from the user agency towards NPV, CA and CAT Plan under this project shall be transferred to Ad-hoc CAMPA in account No. CA-1582 of Corporation Bank, Block-II, CGO Complex, Phase-I, Lodhi Road, New Delhi-110 003.
5. The Catchment Area Treatment works shall be executed as per the plan under the supervision of State Forest Department.
6. The total forest area utilized for the project shall not exceed 1.70 ha. and it shall be used only for the purpose for which it is diverted. In case the land is not used for the stipulated purpose or when it is no longer needed for the purpose, then the area will be resumed by the Forest Department.
7. The land shall be utilized only for the purpose for which it is released.
8. If the land is not required for the purpose for which it is granted the same should be resumed back to the Forest Department by the Conservator of Forests, under Secton 82 of Karnataka Forest Act, 1963.
9. The user agency has to pay the lease rent as fixed by the Government the time of sanction and any subsequent orders in this regard.
10. The lease is granted for 30 years.
11. The Karnataka Forest Act 1963 and Rules 1969 will be applicable for any violation.
12. If the land is not utilized for the purpose within five (5) years, the forest land shall be resumed back by the Deputy Conservator of Forests.
13. The user agency has to pay the Net Present Value as per the Government of India's notification dated: 17-1-2004.
14. The user agency should pay the cost extraction of trees as estimated by the Department.
15. The user agency shall pay compensatory afforestation charges in prevailing rates.

16. Trees shall be felled only when it becomes necessary under strict supervision of Forest Department.
17. Any other condition to be stipulated by / Government of India/ State Government / Principal Chief Conservator of Forests, Karnataka in the interest of conservation of forests.
18. The user agency shall abide by all the conditions imposed upon by Government of India, Government of Karnataka and Principal Chief Conservator of Forests.

By order and in the Name of the Governor of Karnataka
**P.R. KALAVATHI**
Under Secretary to Government,
Forest, Ecology and Environment Department.

PR. 1661

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ:** ಸಾರ್ವಜನಿಕ ಆರೋಗ್ಯ ಸಂಸ್ಥೆ ಹಾಗೂ ವಿಭಾಗೀಯ ಪ್ರಾದೇಶಿಕ ಮತ್ತು ಜಿಲ್ಲಾ ಪ್ರಯೋಗ ಶಾಲೆಗಳಲ್ಲಿ ಬರುವ ನೀರು ಮತ್ತು ಆಹಾರ ಮಾದರಿಗಳ ವಿಶ್ಲೇಶಣಾ ದರವನ್ನು ಪರಿಷ್ಕರಿಸುವ ಬಗ್ಗೆ

**ಓದಲಾಗಿದೆ:** ನಿರ್ದೇಶಕರು, ಅರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪತ್ರ ಸಂ: ಸಾಆಸಂ:ನಗದು:13:06-07, ದಿನಾಂಕ: 21.4.2007.

**ಪ್ರಸ್ತಾವನೆ:**

ಮೇಲಿನ ಉಲ್ಲೆಖಿತ ಪ್ರಸ್ತಾವನೆಯಲ್ಲಿ ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರು ಪ್ರಸ್ತುತ ರಾಸಾಯನಿಕಗಳು, ಗಾಜಿನ ಉಪಕರಣಗಳು, ಯಂತ್ರೋಪಕರಣಗಳ ಬೆಲೆಗಳು ತುಂಬಾ ದುಬಾರಿಯಾಗಿದ್ದು ಹಾಗೂ ಇದರ ಜೊತೆಗೆ ಪ್ರಯೋಗಾಲಯಗಳಲ್ಲಿ ಕೆಲಸ ನಿರ್ವಹಿಸುವ ಸಿಬ್ಬಂದಿಗಳ ವೇತನವು ಸಹ ಏರಿಕೆಯಾಗಿರುವುದು ಹಾಲಿ ಚಾಲ್ತಿಯಲ್ಲಿರುವ ಅಹಾರ ಮತ್ತು ನೀರಿನ ಮಾದರಿಗಳ ವಿಶ್ಲೇಷಣಾ ದರವನ್ನು ಪರಿಷ್ಕರಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 113 ಸಿಜಿಇ 07 ಬೆಂಗಳೂರು, ದಿನಾಂಕ: 29-09-2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡ ಆಹಾರ ಮತ್ತು ನೀರಿನ ಮಾದರಿಗಳ ವಿಶ್ಲೇಷಣಾ ದರಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ಪರಿಷ್ಕರಿಸಿದೆ.

| ಕ್ರ.ಸಂ. | ಮಾದರಿ ಹೆಸರು | ನಿಗದಿಪಡಿಸಿದ ದರ ರೂ.ಗಳಲ್ಲಿ |
|---|---|---|
| 1. | ಆಹಾರ ಪದಾರ್ಥಗಳ ರಾಸಾಯನಿಕ ವಿಶ್ಲೇಷಣೆ | 200.00 |
| 2. | ಮದ್ಯಸಾರ ಮತ್ತು ಪಾನೀಯಕ್ಕೆ ಸಂಬಂಧಪಟ್ಟ ರಾಸಾಯನಿಕ ವಿಶ್ಲೇಷಣೆ | 200.00 |
| 3. | ನೀರಿನ ಮಾದರಿ ರಸಾಯನಿಕ ವಿಶ್ಲೇಷಣೆ | 300.00 |
| 4. | ನೀರಿನ ರೋಗಾಣು ವಿಶ್ಲೇಷಣಾ ಪರೀಕ್ಷೆ | 150.00 |
| 5. | ಇನ್ನಿತರ ಮಾದರಿ ವಸ್ತುಗಳ ವಿಶ್ಲೇಷಣೆ (ಆಹಾರ ಮಾದರ ವಿಶ್ಲೇಷಣೆ) | 300.00 |

ಇನ್ನು ಮುಂದೆ ಈ ದರಗಳನ್ನು ಎರಡು ವರ್ಷಗಳಿಗೊಮ್ಮೆ ಶೇ. 50 ರಷ್ಟು ಪರಿಷ್ಕರಿಸುವುದು. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 1586 ವೆಚ್ಚ/5 : 2007 ದಿನಾಂಕ: 25-8-2007ರ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್.ಆರ್. ಶಂಕರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಪಿ.ಆರ್.1821

**ವಿಷಯ:** ಶ್ರೀ ಹೆಚ್. ಶ್ರೀನಿವಾಸ, ಸಹಾಯಕ ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ನಡೆಸುವ ಬಗ್ಗೆ - ಮಂಡನಾಧಿಕಾರಿಯವರನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:** 1 ಸರ್ಕಾರಿ ಆದೇಶ ಸಂಖ್ಯೆ: ಆಕುಕ 172 ಐಎಂಎಂ 2005, ದಿನಾಂಕ: 23.07.2007.
2 ಔಷಧ ನಿಯಂತ್ರಕರ ಪತ್ರ ಸಂಖ್ಯೆ: ಔನಿಇ / 385 / ಸಿಬ್ಬಂದಿ / 2005-06, ದಿನಾಂಕ: 10-09-2007.

**ಪ್ರಸ್ತಾವನೆ:**

ಶ್ರೀ ಹೆಚ್. ಶ್ರೀನಿವಾಸ, ಸಹಾಯಕ ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ, ಬೆಂಗಳೂರು ವೃತ್ತ-1 ಇವರ ವಿರುದ್ಧ ಆರೋಪ ಕುರಿತು ವಿಚಾರಣೆ ನಡೆಸಲು ಮೇಲೆ ಕ್ರ.ಸಂ. (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ, ಶ್ರೀ ಅಬುಲ್ ಮೊಹಿಸಿನ್, ಉಪ ಔಷಧ ನಿಯಂತ್ರಕರು ರಕ್ತ ನಿಧಿ ಮತ್ತು ಗುಪ್ತ ವಾರ್ತೆ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ.

ಮೇಲೆ ಕ್ರ.ಸಂ. (2) ರಲ್ಲಿ ಓದಲಾದ ಪತ್ರದಲ್ಲಿ, ಶ್ರೀ ಅಬುಲ್ ಮೊಹಿಸಿನ್, ಉಪ ಔಷಧ ನಿಯಂತ್ರಕರು, ರಕ್ತ ನಿಧಿ ಮತ್ತು ಗುಪ್ತ ವಾರ್ತೆ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದ್ದು, ಸದರಿಯವರನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ:ಆಕುಕ 142 ಐಎಂಎಂ 2007, ದಿನಾಂಕ: 01-09-2007 ರಂದು ರಕ್ತ ನಿಧಿ ಮತ್ತು ಗುಪ್ತ ವಾರ್ತೆ, ಹುಬ್ಬಳ್ಳಿ ವಿಭಾಗ ಇಲ್ಲಿಗೆ ವರ್ಗಾಯಿಸಿರುವುದರಿಂದ, ಸದರಿ ಅಧಿಕಾರಿಯವರ ಸ್ಥಾನದಲ್ಲಿ ಶ್ರೀಮತಿ ಸುಧಾಸ್ವಾಮಿ, ಅಧೀಕ್ಷಕರು (ತಾಂತ್ರಿಕ), ಔಷಧ ಪರೀಕ್ಷಾ ಪ್ರಯೋಗಾಲಯ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಸರ್ಕಾರವು ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 172 ಐಎಂಎಂ 2005 ಬೆಂಗಳೂರು, ದಿನಾಂಕ: 04-10-2007**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದ, ಶ್ರೀ ಹೆಚ್. ಶ್ರೀನಿವಾಸ, ಸಹಾಯಕ ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ ಇವರ ವಿರುದ್ಧ ಹೂಡಲಾದ ಇಲಾಖಾ ವಿಚಾರಣೆಯ ಮುಂದೆ ಪ್ರಕರಣವನ್ನು ಮಂಡಿಸಲು ಶ್ರೀಮತಿ ಸುಧಾಸ್ವಾಮಿ, ಅಧೀಕ್ಷಕರು (ತಾಂತ್ರಿಕ), ಔಷಧ ಪರೀಕ್ಷಾ ಪ್ರಯೋಗಾಲಯ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1822

**ಎನ್. ಮಹಾಲಕ್ಷ್ಮಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ಭಾರತೀಯ ವೈದ್ಯ ಪದ್ಧತಿ)

## ಆರ್ಥಿಕ ಸಚಿವಾಲಯ

**ವಿಷಯ:** ರಾಜ್ಯದಲ್ಲಿ ಸಾರಾಯಿ ನಿಷೇಧ ಯಶಸ್ವೀ ಅನುಷ್ಠಾನಕ್ಕೆ ಕಾರ್ಯಯೋಜನೆಗಳಾದ - ಸಾರಾಯಿ ಕುಡಿತದ ದುಷ್ಪರಿಣಾಮಗಳ ಬಗ್ಗೆ ಜನಜಾಗೃತಿ ಮೂಡಿಸಲು "ಜಾಗೃತಿ ಜಾಥಾ"

**ಓದಲಾಗಿದೆ:** ಅಬಕಾರಿ ಆಯುಕ್ತರ ಪತ್ರ ಸಂ: ಇಸಿಇ 02 ವಿಯುಸಿ 2007, ದಿನಾಂಕ 26-06-2007.

**ಪ್ರಸ್ತಾವನೆ:**

ಮೇಲೆ ಓದಲಾದ ಅಬಕಾರಿ ಆಯುಕ್ತರ ಪತ್ರ ದಿನಾಂಕ: 26-06-2007ರಲ್ಲಿ, ರಾಜ್ಯ ಸರ್ಕಾರಿ 2007ರ ಜುಲೈ ರಿಂದ ರಾಜ್ಯದಲ್ಲಿ ಸಾರಾಯಿಯನ್ನು ನಿಷೇಧಗೊಳಿಸಲಾಗಿದೆ. ಈ ಹಿನ್ನೆಲೆಯಲ್ಲಿ ಪ್ರಚಾರಾಂದೋಲನ ಕಾರ್ಯಕ್ರಮದ ಅನುಷ್ಠಾನದ ಬಗ್ಗೆ ಚರ್ಚಿಸಲು ಏರ್ಪಡಿಸಲಾದ ಸಭೆಯಲ್ಲಿ ಅಬಕಾರಿ ಆಯುಕ್ತರು, ಕಾರ್ಯದರ್ಶಿಗಳು, ಕನ್ನಡ ಮತ್ತು ಸಂಸ್ಕೃತಿ ಮತ್ತು ವಾರ್ತಾ ಪ್ರವಾಸೋದ್ಯಮ ಇಲಾಖೆ ಇವರ ಸಮ್ಮುಖದಲ್ಲಿ ತೀರ್ಮಾನ ಕೈಗೊಂಡಿರುವಂತೆ, ಸಾರಾಯಿ ಕುಡಿತದಿಂದ ಆಗುವ ದುಷ್ಪರಿಣಾಮಗಳ ಬಗ್ಗೆ ರಾಜ್ಯದ ಜನರಲ್ಲಿ ಅರಿವು ಮೂಡಿಸಲು ರಾಜ್ಯ ಮತ್ತು ಜಿಲ್ಲಾ ಮಟ್ಟದ ಈ ಪ್ರಚಾರಾಂದೋಲನ ಕಾರ್ಯಕ್ರಮಗಳ ಅನುಷ್ಠಾನಕ್ಕೆ ರಾಜ್ಯ ಮಟ್ಟದ ಕ್ರಿಯಾಯೋಜನೆ ಮತ್ತು ಜಿಲ್ಲಾ ಮಟ್ಟದ ಕ್ರಿಯಾಯೋಜನೆ ಇವುಗಳಿಗೆ ತಗಲುವ ರೂ. 2,60,75,000/-ಗಳ ಅಂದಾಜು ವೆಚ್ಚದ ಕ್ರಿಯಾ ಯೋಜನೆಗಳ ವಿವರಗಳನ್ನು ಸಲ್ಲಿಸಿ ಅನುದಾನ ಬಿಡುಗಡೆ ಮಾಡಲು ಕೋರಿರುತ್ತಾರೆ. ಈ ಹಿನ್ನೆಲೆಯಲ್ಲಿ ರಾಜ್ಯದಲ್ಲಿ ಸಾರಾಯಿ ನಿಷೇಧ ಯಶಸ್ವಿಯಾಗಿ ಅನುಷ್ಠಾನಗೊಳಿಸಲು ಕಾರ್ಯಯೋಜನೆಗಳಾದ "ಜಾಗೃತಿ ಜಾಥಾ" ಕಾರ್ಯಕ್ರಮಗಳ ಸಮೀಕ್ಷೆ ಹಾಗೂ ಕಾರ್ಯಕ್ರಮಗಳನ್ನು ಪರಾಮರ್ಶಿಸಲು ರಾಜ್ಯಮಟ್ಟದಲ್ಲಿ ಮಾನ್ಯ ಉಪ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ಮತ್ತು ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿಗಳು ಕಂದಾಯ, ರವರ ಅಧ್ಯಕ್ಷತೆಯಲ್ಲಿ ಈ ಕೆಳಕಂಡ ಸದಸ್ಯರುಗಳನ್ನೊಳಗೊಂಡ ಎರಡು ಸಮಿತಿಗಳನ್ನು ರಚಿಸಲು ಸರ್ಕಾರ ತೀರ್ಮಾನ ಕೈಗೊಂಡಿರುವ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 32 ಇಡಿಸಿ 2007, ಬೆಂಗಳೂರು, ದಿನಾಂಕ: 26-09-2007.**

ರಾಜ್ಯದಲ್ಲಿ ಸಾರಾಯಿ ನಿಷೇಧ ಯಶಸ್ವಿಯಾಗಿ ಅನುಷ್ಠಾನಗೊಳಿಸಲು ಕಾರ್ಯಯೋಜನೆಗಳಾದ - "ಜಾಗೃತಿ ಜಾಥಾ" ಕಾರ್ಯಕ್ರಮಗಳ ಸಮೀಕ್ಷೆ ಹಾಗೂ ಈ ಕಾರ್ಯಕ್ರಮಗಳನ್ನು ಪರಾಮರ್ಶಿಸಲು ಈ ಕೆಳಕಂಡಂತೆ 2 ಸಮಿತಿಗಳನ್ನು ರಚಿಸಲಾಗಿರುತ್ತದೆ.

1. ರಾಜ್ಯ ಮಟ್ಟದಲ್ಲಿ ಮಾನ್ಯ ಉಪ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ಈ ಕೆಳಕಂಡ ಸದಸ್ಯರನ್ನೊಳಗೊಂಡಂತೆ ಸಮಿತಿಯನ್ನು ರಚಿಸಲಾಗಿದೆ.

1. ಮಾನ್ಯ ಉಪ ಮುಖ್ಯಮಂತ್ರಿಗಳು -- ಅಧ್ಯಕ್ಷರು
2. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ -- ಸದಸ್ಯರು
3. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ -- ಸದಸ್ಯರು
4. ಡೈರೆಕ್ಟರ್ ಜನರಲ್ ಆಫ್ ಪೋಲೀಸ್ -- ಸದಸ್ಯರು
5. ಅಬಕಾರಿ ಆಯುಕ್ತರು -- ಸದಸ್ಯ ಕಾರ್ಯದರ್ಶಿಗಳು

2. ಜಿಲ್ಲಾಧಿಕಾರಿ (ಕಂದಾಯ)ರವರ ಅಧ್ಯಕ್ಷತೆಯಲ್ಲಿ ಈ ಕೆಳಕಂಡ ಸದಸ್ಯರುಗಳನ್ನೊಳಗೊಂಡ ಒಂದು ಸಮೀಕ್ಷಾ ಸಮಿತಿಯನ್ನು ಜಿಲ್ಲಾ ಮಟ್ಟದಲ್ಲಿ ರಚಿಸಲಾಗಿದೆ.

1. ಜಿಲ್ಲಾಧಿಕಾರಿ (ಕಂದಾಯ) -- ಅಧ್ಯಕ್ಷರು
2. ಅಬಕಾರಿ ಜಂಟಿ ಆಯುಕ್ತರು (ಜಾರಿ ಮತ್ತು ತನಿಖೆ) -- ಸದಸ್ಯರು
3. ಪೋಲೀಸ್ ಅಧೀಕ್ಷಕರು -- ಸದಸ್ಯರು
4. ಅಬಕಾರಿ ಉಪ ಆಯುಕ್ತರು -- ಸದಸ್ಯ ಕಾರ್ಯದರ್ಶಿಗಳು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1828

**ಬಿ. ಕೋದಂಡರಾಮ ಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಅಬಕಾರಿ)

**ಕಂದಾಯ ಸಚಿವಾಲಯ**

**ವಿಷಯ:** ಗ್ರಾಮ ಸಹಾಯಕರ ಮಿತವೇತನವನ್ನು ಹೆಚ್ಚಿಸಿದ್ದು, ದಿನಾಂಕ 01.4.2005 ರಿಂದ ಜಾರಿಗೊಳಿಸುವ ಬಗ್ಗೆ.

**ಓದಲಾಗಿದೆ:** 1 ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 178 ಬಿಆರ್‌ಎಸ್ 2007, ದಿನಾಂಕ 13.08.2007.
2 ಸರ್ಕಾರದ ಆದೇಶ ಸಂಖ್ಯೆ ಕಂಇ 107 ಬಿಎಸ್‌ಸಿ 2007, ದಿನಾಂಕ: 4.10.2007.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂ (1)ರಲ್ಲಿನ ಸರ್ಕಾರದ ಆದೇಶದಲ್ಲಿ ಗ್ರಾಮ ಸಹಾಯಕರುಗಳಿಗೆ ಬಾಕಿ ಮಿತ ವೇತನ ಪಾವತಿಸಲು ಲೆಕ್ಕ ಶೀರ್ಷಿಕೆ "2029-00-101-1-01-015 Subsidary Expenses (NP)"ರಲ್ಲಿ ರೂ. 400.00 ಲಕ್ಷಗಳ ಹೆಚ್ಚುವರಿ ಅನುದಾನವನ್ನು ಒದಗಿಸಲಾಗಿದ್ದು, ಅದರಂತೆ ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಗ್ರಾಮ ಸಹಾಯಕರುಗಳಿಗೆ ದಿನಾಂಕ 1.4.2005 ರಿಂದ 7.8.2005ರವರೆಗಿನ ಅವಧಿಯ ಬಾಕಿ ಇರುವ ಮಿತ ವೇತನ ಪಾವತಿಸಲು ರೂ. 400 ಲಕ್ಷಗಳನ್ನು (ರೂಪಾಯಿ ನಾಲ್ಕು ನೂರು ಲಕ್ಷಗಳು ಮಾತ್ರ) ಬಿಡುಗಡೆ ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು, ಗ್ರಾಮ ಸಹಾಯಕರುಗಳಿಗೆ ದಿನಾಂಕ 1.4.2005 ರಿಂದ 7.8.2005ರವರೆಗಿನ ಬಾಕಿ ಮೊತ್ತ ಪಾವತಿಸಲು (ಪ್ರತಿ ತಿಂಗಳು ರೂ. 1,000/-ಗಳಂತೆ)ರೂ. 4,06,73,520/- (ರೂಪಾಯಿ ನಾಲ್ಕು ಕೋಟಿ ಆರು ಲಕ್ಷದ ಎಪ್ಪತ್ಮೂರು ಸಾವಿರ ಐದು ನೂರ ಇಪ್ಪತ್ತು ರೂಪಾಯಿಗಳು ಮಾತ್ರ)ಗಳನ್ನು ಬಿಡುಗಡೆ ಮಾಡಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ.ಕಂ.ಇ 94 ಎಂಎಸ್‌ಟಿ 2007, ಬೆಂಗಳೂರು, ದಿನಾಂಕ: 9/10/2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ಕಾಣಿಸಿರುವ ರೀತ್ಯಾ ರಾಜ್ಯದ ಕಂದಾಯ ಇಲಾಖೆಯಲ್ಲಿ ಮಿತ ವೇತನ (ಸ್ಟೈಫೆಂಡರಿ) ಗ್ರಾಮ ಸಹಾಯಕರಾಗಿ ಕೆಲಸ ನಿರ್ವಹಿಸುತ್ತಿರುವ ಒಟ್ಟು 9625 ಗ್ರಾಮ ಸಹಾಯಕರುಗಳಿಗೆ ದಿನಾಂಕ 1.4.2005 ರಿಂದ ದಿನಾಂಕ: 7.8.20005ರವರೆಗೆ ಬಾಕಿ ಇರುವ ಮಾಸಿಕ ಸಂಭಾವನೆ ತಲಾ ರೂ. 1000/-ಗಳಂತೆ ಪಾವತಿಸಲು ಒಟ್ಟು ರೂ. 4,06,73,520/- (ರೂಪಾಯಿ ನಾಲ್ಕು ಕೋಟಿ ಆರು ಲಕ್ಷದ ಎಪ್ಪತ್ಮೂರು ಸಾವಿರದ ಐದು ನೂರು ಇಪ್ಪತ್ತು ರೂಪಾಯಿಗಳು ಮಾತ್ರ)ಗಳನ್ನು ಎಲ್ಲಾ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲಾಗಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2029-00-101-01-015ರ ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಸಿ 96 ದಿನಾಂಕ: 10/7/1996ರ ಕಂಡಿಕೆ 3ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಕೆ. ನರಸಿಂಹಲು,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ.ಸು.ಕೋ.)

ಅನುಬಂಧ

| ಸರ್ಕಾರದ ಆದೇಶದ ಕ್ರಮಾಂಕ ಕಂಇ 94 ಎಂಎಸ್‌ಟಿ 2007 ದಿನಾಂಕ 09-10-2007 | | | | | |
|---|---|---|---|---|---|
| ಕ್ರ. ಸಂ. | ಜಿಲ್ಲೆಯ ಹೆಸರು | ಹಾಲಿ ಕೆಲಸ ನಿರ್ವಹಿಸುತ್ತಿರುವ ಗ್ರಾಮ ಸಹಾಯಕರುಗಳ ಸಂಖ್ಯೆ | 4 ತಿಂಗಳಿಗೆ ಬಾಕಿ ಮಿತ ವೇತನ (ತಿಂಗಳಿಗೆ 1000/- ರೂನಂತೆ) | 7 ದಿವಸಕ್ಕೆ ಬಾಕಿ ಮಿತ ವೇತನ (ತಿಂಗಳಿಗೆ 1000/- ರೂನಂತೆ) | ಸರ್ಕಾರದಿಂದ ಬಿಡುಗಡೆ ಮಾಡುತ್ತಿರುವ ಒಟ್ಟು ಅನುದಾನ (ರೂಪಾಯಿಗಳಲ್ಲಿ) |
| 1 | ಬಾಗಲಕೋಟೆ | 348 | 1392000 | 78590 | 1470590 |
| 2 | ಬೆಂಗಳೂರು (ಗ್ರಾ) | 424 | 1696000 | 95750 | 1791750 |
| 3 | ಬೆಂಗಳೂರು (ನ) | 191 | 764000 | 43130 | 807130 |
| 4 | ಬೆಳಗಾವಿ | 727 | 2908000 | 164170 | 3072170 |
| 5 | ಬಳ್ಳಾರಿ | 402 | 1608000 | 90780 | 1698780 |
| 6 | ಬೀದರ್ | 342 | 1368000 | 77230 | 1445230 |
| 7 | ಬಿಜಾಪುರ | 337 | 1348000 | 76100 | 1424100 |
| 8 | ಚಾಮರಾಜನಗರ | 239 | 956000 | 53970 | 1009970 |
| 9 | ಚಿಕ್ಕಮಗಳೂರು | 226 | 904000 | 51040 | 955040 |
| 10 | ಚಿತ್ರದುರ್ಗ | 330 | 1320000 | 74520 | 1394520 |
| 11 | ದಕ್ಷಿಣ ಕನ್ನಡ | 345 | 1380000 | 77910 | 1457910 |
| 12 | ದಾವಣಗೆರೆ | 278 | 1112000 | 62780 | 1174780 |
| 13 | ಧಾರವಾಡ | 223 | 892000 | 50360 | 942360 |
| 14 | ಗದಗ | 194 | 776000 | 43810 | 819810 |
| 15 | ಗುಲ್ಬರ್ಗ | 650 | 2600000 | 146780 | 2746780 |
| 16 | ಹಾಸನ | 437 | 1748000 | 98680 | 1846680 |
| 17 | ಹಾವೇರಿ | 370 | 1480000 | 83550 | 1563550 |
| 18 | ಕೊಡಗು | 121 | 484000 | 27330 | 511330 |
| 19 | ಕೋಲಾರ | 507 | 2028000 | 114490 | 2142490 |
| 20 | ಕೊಪ್ಪಳ | 216 | 864000 | 48780 | 912780 |
| 21 | ಮಂಡ್ಯ | 523 | 2092000 | 118100 | 2210100 |
| 22 | ಮೈಸೂರು | 466 | 1864000 | 105230 | 1969230 |
| 23 | ರಾಯಚೂರು | 331 | 1324000 | 74750 | 1398750 |
| 24 | ಶಿವಮೊಗ್ಗ | 161 | 644000 | 36360 | 680360 |
| 25 | ತುಮಕೂರು | 637 | 2548000 | 143840 | 2691840 |
| 26 | ಉಡುಪಿ | 223 | 892000 | 50360 | 942360 |
| 27 | ಉತ್ತರ ಕನ್ನಡ | 377 | 1508000 | 85130 | 1593130 |
| ಒಟ್ಟು | | **9625** | **38500000** | **2173520** | **40673520** |

**ಎಂ.ಕೆ. ನರಸಿಂಹಲು,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಸುಧಾರಣಾ ಕೋಶ)

ಪಿ.ಆರ್.1943

**ವಿಷಯ:** ರಾಜ್ಯದ ಮಾಜಿ ಭೂಮಾಲೀಕರಿಗೆ 2007-08ನೇ ಸಾಲಿನ ಭೂ ಪರಿಹಾರ ನೀಡಲು ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಪ್ರಾದೇಶಿಕ ಆಯುಕ್ತರು ಬೆಳಗಾವಿ, ಬೆಳಗಾವಿ ವಿಭಾಗ ಇವರ ಪತ್ರ ಸಂಖ್ಯೆ: ಕಂಶಾ/ಭೂಸು/ವಿವ/4/2007-08, ದಿನಾಂಕ: 13/07/2007.
2. ಪ್ರಾದೇಶಿಕ ಆಯುಕ್ತರು ಗುಲಬರ್ಗಾ, ಇವರ ಪತ್ರ ಸಂಖ್ಯೆ: ಕಂ/ಪ್ರಾಆಗು/ಭೂಸು/77/2007-08, ದಿನಾಂಕ: 13/07/2007.

3. ಪ್ರಾದೇಶಿಕ ಆಯುಕ್ತರು ಮೈಸೂರು, ಮೈಸೂರು ವಿಭಾಗ ಇವರ ಪತ್ರ ಸಂಖ್ಯೆ: ಎಲ್ಎನ್‌ಡಿ/ಸಿಆರ್/59/2007-08, ದಿನಾಂಕ: 13/07/2007.
4. ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ, ಇವರ ಪತ್ರ ಸಂಖ್ಯೆ: ಎಲ್ಆರ್‌ಎಫ್/ಸಿಆರ್/15/2007-08, ದಿನಾಂಕ: 11/07/2007.
5. ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ, ಕೋಲಾರ, ಇವರ ಪತ್ರ ಸಂಖ್ಯೆ: ಎಲ್ಆರ್‌ಎಫ್/ಸಿಆರ್/41/2007-08, ದಿನಾಂಕ: 13/07/2007.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರಗಳಲ್ಲಿ ಪ್ರಾದೇಶಿಕ ಆಯುಕ್ತರು ಬೆಳಗಾವಿ, ಗುಲ್ಬರ್ಗಾ, ಮೈಸೂರು ಹಾಗೂ ಜಿಲ್ಲಾಧಿಕಾರಿಗಳು ಕೋಲಾರ ಮತ್ತು ಶಿವಮೊಗ್ಗ ಇವರ ಮಾಜಿ ಭೂ ಮಾಲೀಕರಿಗೆ ಭೂ ಪರಿಹಾರ ನೀಡುವ ಸಲುವಾಗಿ ಬೆಳಗಾವಿ ಜಿಲ್ಲೆ ಜಿಲ್ಲಾಧಿಕಾರಿಗಳು ರೂ. 1,90,22,000-00 ಲಕ್ಷಕ್ಕೆ, ಬಾಗಲಕೋಟೆ ಜಿಲ್ಲೆ ಜಿಲ್ಲಾಧಿಕಾರಿಗಳು ರೂ. 89,98,000-00 ಲಕ್ಷಕ್ಕೆ, ಬಿಜಾಪುರ ಜಿಲ್ಲೆ ಜಿಲ್ಲಾಧಿಕಾರಿಗಳು ರೂ. 9,87,000-00 ಲಕ್ಷಕ್ಕೆ, ಧಾರವಾಡ ಜಿಲ್ಲೆ ಜಿಲ್ಲಾಧಿಕಾರಿಗಳು ರೂ. 1,24,46,000-00 ಲಕ್ಷಕ್ಕೆ ಗದಗ ಜಿಲ್ಲೆ ಜಿಲ್ಲಾಧಿಕಾರಿಗಳು ರೂ. 15,78,000-00 ಲಕ್ಷಕ್ಕೆ ಹಾವೇರಿ ಜಿಲ್ಲೆ ಜಿಲ್ಲಾಧಿಕಾರಿಗಳು ರೂ. 1,05,92,000-00 ಲಕ್ಷಕ್ಕೆ, ಕಾರವಾರ ಜಿಲ್ಲೆ ಜಿಲ್ಲಾಧಿಕಾರಿಗಳು, ರೂ. 2,70,01,000-00 ಲಕ್ಷಕ್ಕೆ ಕೊಪ್ಪಳ ಜಿಲ್ಲೆ ಜಿಲ್ಲಾಧಿಕಾರಿಗಳು ರೂ. 8,59,634-00 ಲಕ್ಷಕ್ಕೆ, ರಾಯಚೂರು ಜಿಲ್ಲೆ ಜಿಲ್ಲಾಧಿಕಾರಿಗಳು ರೂ. 13,05,000-00 ಲಕ್ಷಕ್ಕೆ, ಬಳ್ಳಾರಿ ಜಿಲ್ಲೆ ಜಿಲ್ಲಾಧಿಕಾರಿಗಳು ರೂ. 3,50,76,000-00 ಲಕ್ಷಕ್ಕೆ ಬೀದರ್ ಜಿಲ್ಲೆ ಜಿಲ್ಲಾಧಿಕಾರಿಗಳು ರೂ. 4,92,000-00 ಲಕ್ಷಕ್ಕೆ ಮೈಸೂರು ಜಿಲ್ಲೆ ಜಿಲ್ಲಾಧಿಕಾರಿಗಳು ರೂ. 31,01,216-00 ಲಕ್ಷಕ್ಕೆ, ಮಂಡ್ಯ ಜಿಲ್ಲೆ ಜಿಲ್ಲಾಧಿಕಾರಿಗಳು ರೂ. 46,75,396-00 ಲಕ್ಷಕ್ಕೆ, ಚಾಮರಾಜನಗರ ಜಿಲ್ಲೆ ಜಿಲ್ಲಾಧಿಕಾರಿಗಳು ರೂ. 12,27,000-00 ಲಕ್ಷಕ್ಕೆ, ಹಾಸನ ಜಿಲ್ಲೆ ಜಿಲ್ಲಾಧಿಕಾರಿಗಳು, ರೂ. 6,37,109-00 ಲಕ್ಷಕ್ಕೆ, ಚಿಕ್ಕಮಗಳೂರು ಜಿಲ್ಲಾ ಜಿಲ್ಲಾಧಿಕಾರಿಗಳು ರೂ. 4,17,026.00 ಲಕ್ಷಕ್ಕೆ ಕೊಡಗು ಜಿಲ್ಲಾ ಜಿಲ್ಲಾಧಿಕಾರಿಗಳು ರೂ. 1,55,1720-00 ಲಕ್ಷಕ್ಕೆ ಹಾಗೂ ದಕ್ಷಿಣ ಕನ್ನಡ ಜಿಲ್ಲಾ ಜಿಲ್ಲಾಧಿಕಾರಿಗಳು ರೂ. 47.69.585 ಲಕ್ಷಕ್ಕೆ ಶಿವಮೊಗ್ಗ ಜಿಲ್ಲೆ ಜಿಲ್ಲಾಧಿಕಾರಿಗಳು ರೂ. 86,86,025-00 ಲಕ್ಷಕ್ಕೆ, ಕೋಲಾರ ಜಿಲ್ಲೆ ಜಿಲ್ಲಾಧಿಕಾರಿಗಳು ರೂ. 5,68,000-00 ಲಕ್ಷಕ್ಕೆ ಬೇಡಿಕೆ ಸಲ್ಲಿಸಿದ್ದು ಅದನ್ನು ಪರಿಶೀಲಿಸಿ ಸರ್ಕಾರವು ಅನುದಾನವನ್ನು ಬಿಡುಗಡೆ ಮಾಡಬೇಕಾದ ಅವಶ್ಯಕತೆಯನ್ನು ಮನಗಂಡು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 26 ಎಲ್ಆರ್‌ಎಂ 2007, ದಿನಾಂಕ: 05/10/2007**

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಅಡಿಯಲ್ಲಿ ಭೂಮಿಯನ್ನು ಕಳೆದುಕೊಂಡ ಮಾಜಿ ಭೂ ಮಾಲೀಕರಿಗೆ ಪರಿಹಾರವನ್ನು ಪಾವತಿಸಲು 2007-08ನೇ ಸಾಲಿಗೆ ಈ ಕೆಳಕಂಡ ಜಿಲ್ಲೆಗಳ ಹೆಸರಿನ ಎದುರಿಗೆ ಸೂಚಿಸಿರುವ ಮೊತ್ತವನ್ನು ಲೆಕ್ಕ ಶೀರ್ಷಿಕೆ 4515-00-103-1-100 (ಯೋಜನೇತರ) ಅಡಿಯಲ್ಲಿ ಒಟ್ಟು 1,20,00,000-00 (ಲಕ್ಷಗಳಲ್ಲಿ) ರೂ ಪೂರಕ ಅಂದಾಜು 1ರಲ್ಲಿ ಮಂಜೂರು ಮಾಡಲಾಗಿದೆ.

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಮಂಜೂರು ಮಾಡಲಾದ ಅನುದಾನ (ರೂ. ಗಳಲ್ಲಿ) |
|---|---|---|
| 1. | ಬೆಳಗಾವಿ ಜಿಲ್ಲೆ | 14,00,000 |
| 2. | ಬಾಗಲಕೋಟೆ ಜಿಲ್ಲೆ | 5,00,000 |
| 3. | ಬಿಜಾಪುರ ಜಿಲ್ಲೆ | 2,00,000 |
| 4. | ಧಾರವಾಡ ಜಿಲ್ಲೆ | 10,00,000 |
| 5. | ಗದಗ ಜಿಲ್ಲೆ | 2,00,000 |
| 6. | ಹಾವೇರಿ ಜಿಲ್ಲೆ | 10,00,000 |
| 7. | ಕಾರವಾರ ಜಿಲ್ಲೆ (ಉ.ಕ.) | 15,00,000 |
| 8. | ಕೊಪ್ಪಳ ಜಿಲ್ಲೆ | 2,00,000 |
| 9. | ರಾಯಚೂರು ಜಿಲ್ಲೆ | 3,00,000 |
| 10. | ಬಳ್ಳಾರಿ ಜಿಲ್ಲೆ | 15,00,000 |
| 11. | ಬೀದರ್ ಜಿಲ್ಲೆ | 2,00,000 |
| 12. | ಮೈಸೂರು ಜಿಲ್ಲೆ | 5,00,000 |
| 13. | ಮಂಡ್ಯ ಜಿಲ್ಲೆ | 5,00,000 |
| 14. | ಚಾಮರಾಜನಗರ ಜಿಲ್ಲೆ | 3,00,000 |
| 15. | ಹಾಸನ ಜಿಲ್ಲೆ | 3,00,000 |

| | | |
|---|---|---|
| 16. | ಚಿಕ್ಕಮಗಳೂರು ಜಿಲ್ಲೆ | 1,00,000 |
| 17. | ಕೊಡಗು ಜಿಲ್ಲೆ | 1,00,000 |
| 18. | ದಕ್ಷಿಣ ಕನ್ನಡ ಜಿಲ್ಲೆ | 15,00,000 |
| 19. | ಶಿವಮೊಗ್ಗ ಜಿಲ್ಲೆ | 5,00,000 |
| 20. | ಕೋಲಾರ ಜಿಲ್ಲೆ | 2,00,000 |
| | **ಒಟ್ಟು** | **1,20,00,000** |

ಈ ಮೇಲಿನ ಆದೇಶದಲ್ಲಿ ಮಂಜೂರಾದ ಅನುದಾನಕ್ಕೆ ಉಪಯೋಗಿತ ಪ್ರಮಾಣ ಪತ್ರವನ್ನು (ಯುಟಿಲೈಸೇಷನ್ ಸರ್ಟಿಫಿಕೇಟ್) ಈ ಎಲ್ಲಾ ಸಂಬಂಧಿತ ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 01, ಟಿಎಫ್‌ಪಿ, 2003, ದಿನಾಂಕ: 12/06/2003ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರದತ್ತವಾಗಿ ನೀಡಿರುವ ಆದೇಶದನ್ವಯ ಈ ಆದೇಶ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1829

**ಬಿ. ಚಿಕ್ಕರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ, (ಭೂ ಸುಧಾರಣೆ.)

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ರಾಮನಗರ ಪಟ್ಟಣ ರಾಜೀವಗಾಂಧಿ ವಿಶ್ವವಿದ್ಯಾಲಯಕ್ಕೆ ಕುಡಿಯುವ ನೀರು ಸೌಕರ್ಯ ಒದಗಿಸುವ ಬಗ್ಗೆ ಅಂದಾಜು ರೂ. 187.00 ಲಕ್ಷಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1 ಅಧ್ಯಕ್ಷರು ಮತ್ತು ವ್ಯ.ನಿ. ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರು ರವರ ಪತ್ರ ಸಂಖ್ಯೆ: ಕಜಮಂ/ಮುಅ/ಉಮುಅ–1/ಸಅ–5/2007–08/871 ದಿ: 22–6–2007.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ರಾಮನಗರ ಪಟ್ಟಣ ರಾಜೀವ ಗಾಂಧಿ ವಿಶ್ವವಿದ್ಯಾಲಯಕ್ಕೆ ಕುಡಿಯುವ ನೀರು ಸೌಕರ್ಯ ಒದಗಿಸುವ ಬಗ್ಗೆ ಅಂದಾಜು ರೂ. 187.00 ಲಕ್ಷಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಲು ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ಬೆಂಗಳೂರು ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಈ ಯೋಜನೆಯನ್ನು ರಾಮನಗರ ಪಟ್ಟಣದ ನೀರು ಸರಬರಾಜು ವ್ಯವಸ್ಥೆ ಅಭಿವೃದ್ಧಿಪಡಿಸುವ ಯೋಜನೆಯಡಿ ರಾಮನಗರದಲ್ಲಿ ಸ್ಥಾಪಿಸಲು ಉದ್ದೇಶಿಸಿರುವ ರಾಜೀವ್ ಗಾಂಧಿ ವಿಶ್ವವಿದ್ಯಾಲಯಕ್ಕೆ ಕುಡಿಯುವ ನೀರು ಸೌಕರ್ಯ ಕಲ್ಪಿಸುವ ಕಾಮಗಾರಿಯನ್ನು ರೂಪಿಸಲಾಗಿದೆ. ರಾಮನಗರ–ಚನ್ನಪಟ್ಟಣ ನೀರು ಸರಬರಾಜು ಯೋಜನೆಯಡಿ ಅಳವಡಿಸಿರುವ 450 ಎಂ.ಎಂ. ವ್ಯಾಸದ ಪಿ.ಎಸ್.ಸಿ. ಏರು ಕೊಳವೆ ಮಾರ್ಗದಿಂದ ಐಜೂರು ಸರ್ಕಲ್ ಬಳಿ ಕೊಳವೆ ಟ್ಯಾಪ್ ಮಾಡಿ ನೀರು ಒದಗಿಸಲು ಉದ್ದೇಶಿಸಲಾಗಿದೆ. ನೀರಿನ ಸೌಕರ್ಯಕ್ಕಾಗಿ ಸುಮಾರು250 ಎಂ.ಎಂ. ವ್ಯಾಸದ 4090 ಮೀ., ಡಿ.ಐ. ಕೊಳವೆ ಮಾರ್ಗವನ್ನು ಐಜೂರು ಸರ್ಕಲ್ ಬಳಿ ಟ್ಯಾಪಿಂಗ್ ಪಾಯಿಂಟ್‌ನಿಂದ ವಿಶ್ವ ವಿದ್ಯಾಲಯದವರೆಗೆ ಅಳವಡಿಸಲು ಉದ್ದೇಶಿಸಲಾಗಿದೆ, ವಿಶ್ವ ವಿದ್ಯಾಲಯದ ಆವರಣದಲ್ಲಿ 50,000 ಲೀಟರ್ ಸಾಮರ್ಥ್ಯದ ಸಂಪ್ ನಿರ್ಮಿಸಲು ಹಾಗೂ 5.00 ಲಕ್ಷ ಲೀಟರ್ ಸಾಮರ್ಥ್ಯದ ಮೇಲ್ಮಟ್ಟದ ಜಲಸಂಗ್ರಹಾಗಾರ ನಿರ್ಮಿಸಲು ಉದ್ದೇಶಿಸಿ, ಯೋಜನೆಯನ್ನು ತಯಾರಿಸಲಾಗಿದೆ.

ಈ ಯೋಜನೆಯನ್ನು ರಾಮನಗರ ನಗರ ನೀರು ಸರಬರಾಜು ಶೀರ್ಷಿಕೆಯಡಿ ಅಂದಾಜು ಮೊತ್ತ ರೂ. 187.00 ಲಕ್ಷಗಳಲ್ಲಿ ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ಕೈಗೊಳ್ಳಲು ಉದ್ದೇಶಿಸಲಾಗಿದೆ.

| | | |
|---|---|---|
| ಸರ್ಕಾರದ ಅನುದಾನ ಶೇ. 50 ರಷ್ಟು | – | ರೂ. 93.50 ಲಕ್ಷಗಳು. |
| ಆರ್ಥಿಕ ಸಂಸ್ಥೆಗಳಿಂದ ಸಾಲ ಶೇ. 50 ರಷ್ಟು | – | ರೂ. 93.50 ಲಕ್ಷಗಳು |
| ಒಟ್ಟು | – | ರೂ. 187.00 ಲಕ್ಷಗಳು |

2007–08ನೇ ಸಾಲಿನ ಮಂಡಳಿಯ ಅನುಮೋದಿತ ಕ್ರಿಯಾ ಯೋಜನೆಯಲ್ಲಿ ಈ ಯೋಜನೆಗೆ ರೂ. 62.00 ಲಕ್ಷಗಳನ್ನು ಅನುವು ಮಾಡಿದೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 29 ಯುಡಬ್ಲ್ಯೂಎಸ್ 2007 ಬೆಂಗಳೂರು, ದಿನಾಂಕ: 21–8–2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ರಾಮನಗರ ಪಟ್ಟಣ ರಾಜೀವ್‌ಗಾಂಧಿ ವಿಶ್ವವಿದ್ಯಾಲಯಕ್ಕೆ ಕುಡಿಯುವ ನೀರು ಸೌಕರ್ಯ ಒದಗಿಸುವ ಬಗ್ಗೆ ಅಂದಾಜು ರೂ. 187.00 ಲಕ್ಷಗಳಿಗೆ (ರೂ. ನೂರ ಎಂಬತ್ತೇಳು ಲಕ್ಷಗಳು ಮಾತ್ರ) ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ನಗರ ನೀರು ಸರಬರಾಜು ಯೋಜನೆ ಅಡಿಯಲ್ಲಿ ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗೊಳಪಟ್ಟು ಆಡಳಿತಾತ್ಮಕ ಮಂಜೂರಾತಿಯನ್ನು ನೀಡಿದೆ.

1. ಸದರಿ ಯೋಜನೆಯನ್ನು ನಿಗಧಿತ ವೇಳೆಯಲ್ಲಿ ಪೂರ್ಣಗೊಳಿಸುವುದು.
2. ಸದರಿ ಕಾಮಗಾರಿಯನ್ನು ಕೈಗೊಳ್ಳುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ನಿಯಮ 2000ನ್ನು ಪಾಲಿಸುವುದು.
3. ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡಕೂಡದು.

ಈ ಆದೇಶವನ್ನು ಸರ್ಕಾರದ ಆಧೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002 ದಿನಾಂಕ: 20.01.2003ರಲ್ಲಿ ಸರ್ಕಾರದ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1685

**ಬಿ.ಜಿ. ವಾಲಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಕೆ.ಎಸ್. ಹೊಸಮನಿ, ಹಿಂದಿನ ತಹಶೀಲ್ದಾರ್, ಗಂಗಾವತಿ ತಾಲ್ಲೂಕು, ಪ್ರಸ್ತುತ ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಕೊಪ್ಪಳ ಇವರ ವಿರುದ್ಧ ಉದ್ದೇಶಿಸಲಾಗಿದ್ದ ಇಲಾಖಾ ವಿಚಾರಣೆಯನ್ನು ಕೈಬಿಡುವ ಬಗ್ಗೆ.

**ಓದಲಾಗಿದೆ:**
1 ಸರ್ಕಾರಿ ಆದೇಶ ಸಂಖ್ಯೆ: ಕಂಇ 21 ಎಡಿಇ 2007, ದಿನಾಂಕ: 4-6-3007.
2 ಸರ್ಕಾರಿ ಆದೇಶ ಸಂಖ್ಯೆ: ಕಂಇ 21 ಎಡಿಇ 2007, ದಿನಾಂಕ: 13-7-2007
3. ಜಿಲ್ಲಾಧಿಕಾರಿಗಳು ಕೊಪ್ಪಳ ಜಿಲ್ಲೆ ಇವರ ದಿನಾಂಕ: 23-7-2007.

**ಪ್ರಸ್ತಾವನೆ:**

ಶ್ರೀ ಕೆ.ಎಸ್. ಹೊಸಮನಿ, ಹಿಂದಿನ ತಹಶೀಲ್ದಾರ್, ಗಂಗಾವತಿ ತಾಲ್ಲೂಕು, ಕೊಪ್ಪಳ ಜಿಲ್ಲೆ ಇವರು ಗಂಗಾವತಿ ನಗರದಲ್ಲಿದ್ದ ಸ್ವಾಮಿ ಅಯ್ಯಪ್ಪ ದೇವಸ್ಥಾನದ ತಾತ್ಕಾಲಿಕ ಕಟ್ಟಡವನ್ನು ಯುಗಾದಿ ದಿನವಾದ ದಿನಾಂಕ: 19-03-2007 ರಂದು ಪೋಲೀಸ್ ಸಹಕಾರದಿಂದ ಒಡೆದುಹಾಕಿದ್ದು, ಸಾರ್ವಜನಿಕರ ಶಾಂತಿಗೆ ಭಂಗ ತಂದಿರುವ ಕಾರಣ ಇವರನ್ನು ಮೇಲೆ ಓದಲಾದ ಕ್ರ.ಸಂ. (1)ರ ಆದೇಶದಲ್ಲಿ ಇಲಾಖಾ ವಿಚಾರಣೆ ಬಾಕಿಯಿಟ್ಟು ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು. ನಂತರದಲ್ಲಿ, ಮೇಲೆ ಓದಲಾದ ಕ್ರ.ಸಂ. (2)ರ ಆದೇಶದಲ್ಲಿ ಇಲಾಖಾ ವಿಚಾರಣೆ ಬಾಕಿಯಿಟ್ಟು, ಅಮಾನತ್ತಿನಿಂದ ತೆರವುಗೊಳಿಸಲಾಗಿತ್ತು. ಈಗ ಕ್ರ.ಸಂ. (3)ರ ಜಿಲ್ಲಾಧಿಕಾರಿಗಳು, ಕೊಪ್ಪಳ ಇವರ ವರದಿಯಲ್ಲಿ ಶ್ರೀ ಕೆ.ಎಸ್. ಹೊಸಮನಿ, ತಹಶೀಲ್ದಾರ್ ಇವರು ಕಾನೂನು ಪ್ರಕಾರ ಸರಿಯಾದ ಕ್ರಮ ತೆಗೆದುಕೊಂಡಿರುವುದಾಗಿ ತಿಳಿಸಿ ಸದರಿ ಪ್ರಕರಣದ ವಿಚಾರಣೆಯನ್ನು ಕೈಬಿಟ್ಟು, ಮುಕ್ತಾಯಗೊಳಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸರ್ಕಾರವು ಈ ಬಗ್ಗೆ ಪರಿಶೀಲಿಸಿ, ಜಿಲ್ಲಾಧಿಕಾರಿಗಳ ವರದಿಯನ್ನು ಒಪ್ಪಿ ಶ್ರೀ ಕೆ.ಎಸ್. ಹೊಸಮನಿ, ಹಿಂದಿನ ತಹಶೀಲ್ದಾರ್, ಗಂಗಾವತಿ ಇವರ ವಿರುದ್ಧ ಹೂಡಲು ಉದ್ದೇಶಿಸಲಾಗಿದ್ದ, ಇಲಾಖಾ ವಿಚಾರಣೆಯನ್ನು ಕೈಬಿಟ್ಟು ಅಮಾನತ್ತಿನ ಅವಧಿಯನ್ನು ಸಕ್ರಮಗೊಳಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 21 ಎಡಿಇ 2007, ದಿನಾಂಕ: 04-10-2007**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನಲೆಯಲ್ಲಿ ಸರ್ಕಾರವು ಶ್ರೀ ಕೆ.ಎಸ್. ಹೊಸಮನಿ, ಹಿಂದಿನ ತಹಶೀಲ್ದಾರ್, ಗಂಗಾವತಿ ತಾಲ್ಲೂಕು, ಪ್ರಸ್ತುತ ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಕೊಪ್ಪಳ ಇವರ ವಿರುದ್ಧ ಹೂಡಲು ಉದ್ದೇಶಿಸಲಾಗಿದ್ದ, ಇಲಾಖಾ ವಿಚಾರಣೆಯನ್ನು ಕೈಬಿಟ್ಟು, ಆದೇಶಿಸಿದೆ. ಹಾಗೂ ಸದರಿಯವರು ಅಮಾನತ್ತಿನಲ್ಲಿ ಕಳೆದ ದಿನಾಂಕ: 7-6-2007 ರಿಂದ 16-7-2007ರ ವರೆಗಿನ ಅವಧಿಯನ್ನು ಕೆ.ಸಿ.ಎಸ್.ಆರ್. ನಿಯಮಾವಳಿಯ ನಿಯಮ 100(1)(ಬಿ) ರನ್ವಯ ಕರ್ತವ್ಯದ ಅವಧಿ ಎಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1814

**ಎಸ್.ಕೆ. ತಗ್ಗಿನಮನಿ**

ಸರ್ಕಾರದ ಉಪ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇ ಮತ್ತು ವಿ.ನಿ.)

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ಸಹಾಯಕ ನೋಂದಣಿ ಮಹಾಪರಿವೀಕ್ಷಕರು (ಗಣಕಯಂತ್ರ) ಹುದ್ದೆ ಸೃಜಿಸುವ ಬಗ್ಗೆ

**ಓದಲಾಗಿದೆ:**
1 ಸರ್ಕಾರದ ಆದೇಶ ಸಂಖ್ಯೆ: ಕಂಇ 13 ಮುನೋಸೇ (1) 2005, ದಿನಾಂಕ: 19.01.2006.
2 ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 55 ಮುನೋಸೇ (1) 2004, ದಿನಾಂಕ: 19.01.2006.

3. ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ: ಸಿಬ್ಬಂದಿ/1–77/04–05 ದಿನಾಂಕ: 19.01.2007.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ: 19.01.2006ರ ಸರ್ಕಾರದ ಆದೇಶದಲ್ಲಿ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರ ಕೇಂದ್ರ ಕಛೇರಿಯಲ್ಲಿರುವ ಕೇಂದ್ರ ಸ್ಥಾನ ಸಹಾಯಕರು (ಆಡಿಟ್) ಹುದ್ದೆಯನ್ನು (ವೇತನ ಶ್ರೇಣಿ ರೂ. 7,400–13,120 ಗ್ರೂಪ್ ಎ ಕಿರಿಯ ವೇತನ ಶ್ರೇಣಿ) ತಾತ್ಕಾಲಿಕವಾಗಿ ಒಂದು ವರ್ಷದ ಅವಧಿಗೆ ಮಾತ್ರ ಗ್ರೂಪ್ ಎ ಹಿರಿಯ ವೇತನ ಶ್ರೇಣಿ ಹುದ್ದೆಗೆ (ರೂ. 9,580–14,200) ಮೇಲ್ದರ್ಜೆಗೇರಿಸಿ ಸಹಾಯಕ ನೋಂದಣಿ ಮಹಾಪರಿವೀಕ್ಷಕರು (ಗಣಕೀಕರಣ) ಎಂದು ಮರುಪದನಾಮೀಕರಿಸಿ ಆದೇಶಿಸಿದೆ.

ಮೇಲೆ ಓದಲಾದ (2)ರ ದಿನಾಂಕ: 19.01.2006ರ ಅಧಿಸೂಚನೆಯಲ್ಲಿ ಶ್ರೀ ಎಸ್.ಎಂ. ಬಾವಿಕಟ್ಟೆ, ಕೇಂದ್ರ ಸ್ಥಾನ ಸಹಾಯಕರು ಇವರಿಗೆ ಜಿಲ್ಲಾ ನೋಂದಣಾಧಿಕಾರಿಗಳ ಹುದ್ದೆಗೆ ಮುಂಬಡ್ತಿ ನೀಡಿ ಮೇಲೆ ಓದಲಾದ (1)ರ ದಿನಾಂಕ: 19.01.20066ರ ಆದೇಶದಲ್ಲಿ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಕೇಂದ್ರ ಕಛೇರಿಯಲ್ಲಿ ತಾತ್ಕಾಲಿಕವಾಗಿ ಒಂದು ವರ್ಷದ ಅವಧಿಗೆ ಮಾತ್ರ ಗ್ರೂಪ್–ಎ ಹಿರಿಯ ವೇತನ ಶ್ರೇಣಿ ಹುದ್ದೆಗೆ ಮೇಲ್ದರ್ಜೆಗೇರಿಸಿ ಸಹಾಯಕ ನೋಂದಣಿ ಮಹಾಪರಿವೀಕ್ಷಕರು (ಗಣಕೀಕರಣ) ಎಂದು ಮರುಪದನಾಮೀಕರಿಸಿದ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಿದೆ.

ಮೇಲೆ ಓದಲಾದ (3)ರ ದಿನಾಂಕ: 19.01.2007ರ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಅಯುಕ್ತರವರ ಪತ್ರದಲ್ಲಿ ಮೇಲೆ (1)ರಲ್ಲಿ ಓದಲಾದ ಆದೇಶದ ಪ್ರಕಾರ ಉನ್ನತೀಕರಿಸಿದ ಸಹಾಯಕ ನೋಂದಣಿ ಮಹಾಪರಿವೀಕ್ಷಕರು (ಗಣಕೀಕರಣ) ಹುದ್ದೆಯ ಒಂದು ವರ್ಷದ ಅವಧಿಯು ದಿನಾಂಕ: 19.01.2007ರಂದು ಅಂತ್ಯಗೊಳ್ಳುತ್ತದೆ. ಇಲಾಖೆಯಲ್ಲಿ BOT ಆಧಾರದ ಮೇರೆಗೆ ಸಂಪೂರ್ಣ ಗಣಕೀಕರಣ ಜಾರಿಯಾಗಿದ್ದು, ಈ ಗಣಕೀಕರಣದ ಪ್ರಕ್ರಿಯೆಯು ನಿರಂತರವಾಗಿ ನಡೆಯುವುದು ಅವಶ್ಯವಿರುವುದರಿಂದ ಒಂದು ವರ್ಷದ ಅವಧಿಗೆ ಸೃಜಿಸಿದ ಸಹಾಯಕ ನೋಂದಣಿ ಮಹಾಪರಿವೀಕ್ಷಕರು (ಗಣಕೀಕರಣ) ಹುದ್ದೆಯನ್ನು ಖಾಯಂ ಆಗಿ ಸೃಜಿಸುವಂತೆ ಕೋರಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 16 ಮುನೋಸೇ (1) 2007, ಬೆಂಗಳೂರು, ದಿನಾಂಕ: 30.08.2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಕೇಂದ್ರ ಕಛೇರಿಯಲ್ಲಿನ ಕೇಂದ್ರ ಸ್ಥಾನ ಸಹಾಯಕರು (ಆಡಿಟ್) ಹುದ್ದೆಯನ್ನು ಗ್ರೂಪ್ ಎ ಕಿರಿಯ ವೇತನ ಶ್ರೇಣಿಯಿಂದ ಗ್ರೂಪ್ ಎ ಹಿರಿಯ ವೇತನ ಶ್ರೇಣಿಗೆ (ರೂ. 9,580–14,200) ಪುನಃ ದಿನಾಂಕ: 20.01.2007 ರಿಂದ ಒಂದು ವರ್ಷದ ಅವಧಿಗೆ ಉನ್ನತೀಕರಿಸಿ ತಾತ್ಕಾಲಿಕವಾಗಿ ಸಹಾಯಕ ನೋಂದಣಿ ಮಹಾಪರಿವೀಕ್ಷಕರು (ಗಣಕೀಕರಣ) ಎಂದು ಮರುಪದನಾಮೀಕರಿಸಿ ಶ್ರೀ ಎಸ್.ಎಂ. ಭಾವಿಕಟ್ಟೆ, ಸಹಾಯಕ ನೋಂದಣಿ ಮಹಾಪರಿವೀಕ್ಷಕರು (ಗಣಕೀಕರಣ) ಇವರನ್ನು ಪುನಃ ದಿನಾಂಕ: 20.01.207 ರಿಂದ 1 ವರ್ಷದ ಅವಧಿಗೆ ಮುಂದುವರೆಸಲು ಸರ್ಕಾರವು ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ದಿನಾಂಕ: 18.08.2007ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1614

**ಎಂ.ಎಫ್. ಯರಗೊಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

**ವಿಷಯ:** ಶ್ರೀ ಹೆಚ್.ಎಸ್. ನಾಗರಾಳ, ಭೂದಾಖಲೆಗಳ ಉಪ ನಿರ್ದೇಶಕರು, ಇವರ ವಿರುದ್ಧ ಇಲಾಖಾ ವಿಚಾರಣೆ – ದಂಡನೆ ವಿಧಿಸಿ ಆದೇಶ ಹೊರಡಿಸುವ ಬಗ್ಗೆ

**ಓದಲಾಗಿದೆ:**
1 ಸರ್ಕಾರದ ಆದೇಶ ಸಂ.ಕಂಇ 320 ಎಫ್.ಎಲ್.ಆರ್. 94 ದಿ: 27–1–1996.
2 ಸರ್ಕಾರದ ಆದೇಶ ಸಂ.ಕಂಇ 17 ಭೂದಾಸೇ (1) 96 ದಿ: 29–1–1997.
3. ವಿಚಾರಣಾ ವರದಿ ಸಂ.ಸಿಬ್ಬಂದಿ.ಶಿಸ್ತು.75/96–97 ದಿ: 30–8–97.

**ಪ್ರಸ್ತಾವನೆ:**

ಶ್ರೀ ಹೆಚ್.ಎಸ್. ನಾಗರಾಳ, ಭೂದಾಖಲೆಗಳ ಉಪ ನಿರ್ದೇಶಕರು ಇವರು ಈ ಹಿಂದೆ ಭೂದಾಖಲೆಗಳ ಸಹಾಯಕರಾಗಿ, ನಿರ್ದೇಶಕರಾಗಿ ಬಿಜಾಪುರದಲ್ಲಿ ಕರ್ತವ್ಯ ನಿರ್ವಹಿಸುತ್ತಿದಾಗ, ಸಿಟಿ ಸರ್ವೆ ನಂ. 1138 ರಲ್ಲಿ ವಾರ್ಸಾ ಪ್ರಕಾರ ದಿ: 7–4–92ರಂದು ತಾವೇ ದೃಢೀಕರಿಸಿದ ಎಂಟ್ರಿಯನ್ನು ಅರ್ಜಿದಾರರು ಮೇಲಾಧಿಕಾರಿಗಳಿಗೆ ಅಪೀಲು ಸಲ್ಲಿಸುವಂತೆ ಹಿಂಬರಹ ನೀಡದೆ ದಿ: 13–10–92ರಂದು ರದ್ದುಪಡಿಸಿರುವ ಕ್ರಮದ ದುರ್ನಡತೆಗಾಗಿ ಸರ್ಕಾರವು ನೀಡಿದ ಷೋ–ಕಾಸ್–ನೋಟೀಸ್‌ಗೆ ಆಪಾದಿತ ಅಧಿಕಾರಿಯವರು ನೀಡಿದ ಲಿಖಿತ ಹೇಳಿಕೆಯನ್ನು ಪರಿಶೀಲಿಸಿ ಆಪಾದಿತ ಅಧಿಕಾರಿಯವರು ತಮ್ಮ ಮೇಲಿನ ಆರೋಪವನ್ನು ಒಪ್ಪಿಕೊಂಡಿದ್ದರಿಂದ, ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶ ದಿ: 27–1–96ರಲ್ಲಿ

ಅಧಿಕಾರಿಯವರ ಒಂದು ವಾರ್ಷಿಕ ವೇತನ ಬಡ್ತಿಯನ್ನು 3 ವರ್ಷಗಳ ಕಾಲ ಸ್ಥಗಿತಗೊಳಿಸುವ ದಂಡನೆ ವಿಧಿಸಲಾಗಿತ್ತು. ಸದರಿ ಆದೇಶದ ವಿರುದ್ಧ ಆಪಾದಿತ ಅಧಿಕಾರಿಯು ಕೆ.ಎ.ಟಿ.ಯಲ್ಲಿ ಸಲ್ಲಿಸಿದ ಅರ್ಜಿ ಸಂ. 3239/96 ಕ್ಕೆ ಕೆ.ಎ.ಟಿ.ಯು ದಿ: 31–7–96ರಂದು ಈ ಕೆಳಗಿನಂತೆ ಆದೇಶ ನೀಡಿದೆ, ಹಾಗೂ ಅಧಿಕಾರಿಗೆ ದಂಡನೆ ವಿಧಿಸಿದ ಆದೇಶವನ್ನು ರದ್ದುಗೊಳಿಸಿದೆ. ನ್ಯಾಯಮಂಡಳಿಯ ಆದೇಶದ ಕಂಡಿಕೆ–6 ಈ ಕೆಳಗಿನಂತೆ ಇದೆ:–

"6. In the instant case, the delinquent has not admitted the charges and in the absence of the admission the authorities ought to have proceeded and held an inquiry as comtemplated under Rule 11 which has not been done so in the instant case. As such, the impugned order is hereby quashed. Government pleader justifies the action taken by the authorities concerned for having proceeded on the ground that the Applicant having categorically admitted the charges levelled against him which on fact is not so.

"7. However, it is open for the authorities to proceed with matter in accordance with law."

ಮೇಲ್ಕಂಡ ಕಾರಣಗಳ ಹಿನ್ನಲೆಯಲ್ಲಿ ಕೆ.ಎ.ಟಿ.ಯ ತೀರ್ಪಿನನುಸಾರ ಆಪಾದಿತ ಅಧಿಕಾರಿಯವರಿಗೆ ವಿಧಿಸಿದ್ದ ದಂಡನೆಯನ್ನು ಕೈಬಿಟ್ಟು ವಿಚಾರಣಾ ಕ್ರಮವು ಯಾವ ಹಂತದಲ್ಲಿ ತಾಂತ್ರಿಕ ದೋಷವಾಗಿದೆಯೋ, ಅಲ್ಲಿಂದ ವಿಚಾರಣೆಯನ್ನು ಮುಂದುವರೆಸಲು ತೀರ್ಮಾನಿಸಿ, ಆಪಾದಿತರಿಗೆ ವಿಧಿಸಿದ್ದ ದಂಡನೆ ಆದೇಶ ಸಂ.ಆರ್.ಡಿ. 320 ಎಫ್.ಎಲ್.ಆರ್. 94 ದಿ: 27–1–96ನ್ನು ಮೇಲೆ (2)ರಲ್ಲಿ ಓದಲಾದ ದಿನಾಂಕ: 29–1–1997ರ ಸರ್ಕಾರಿ ಆದೇಶದಲ್ಲಿ ಸರ್ಕಾರವು ಹಿಂತೆಗೆದುಕೊಂಡಿದೆ. ಹಾಗೂ ಆಪಾದಿತ ಅಧಿಕಾರಿಯವರು ತಮ್ಮ ಲಿಖಿತ ಹೇಳಿಕೆ ನೀಡಿದ ಹಂತದ ತರುವಾಯದಿಂದ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿ ನಿಯಮ–11ರನ್ವಯ ಇಲಾಖಾ ವಿಚಾರಣೆ ನಡೆಸಲು ಸರ್ಕಾರವು ಆದೇಶಿಸಿದೆ. ಸದರಿ ಪ್ರಕರಣದಲ್ಲಿ ವಿಚಾರಣೆ ನಡೆಸಲು ಬೆಂಗಳೂರ ವಿಭಾಗದ ಭೂದಾಖಲೆಗಳ ಜಂಟಿ ನಿರ್ದೇಶಕರುರವರನ್ನು ವಿಚಾರಣಾಧಿಕಾರಿಯನ್ನಾಗಿಯೂ ಹಾಗೂ ಭೂದಾಖಲೆಗಳ ಉಪ ನಿರ್ದೇಶಕರು ನಗರಮಾಪನ ಕೇಂದ್ರ ಕಛೇರಿ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿಯೂ ನೇಮಕ ಮಾಡಲಾಗಿತ್ತು.

ವಿಚಾರಣೆ ನಡೆಸಿದ ವಿಚಾರಣಾಧಿಕಾಗಳು ಮೇಲೆ (3)ರಲ್ಲಿ ಓದಲಾದ ದಿನಾಂಕ: 30–8–97ರ ವಿಚಾರಣಾ ವರದಿಯನ್ನು ಸಲ್ಲಿಸಿ, ಶ್ರೀ ಹೆಚ್.ಎಸ್. ನಾಗರಾಳ, ಭೂ.ಉ.ನಿ. ವಿರುದ್ಧ ಮಾಡಿರುವ ಆರೋಪ ವಿಚಾರಣಾ ವರದಿಯ ಪ್ರಕಾರ ಪೂರ್ಣವಾಗಿ ಸಾಬೀತಾಗಿರುತ್ತದೆ. ಅಂದರೆ ಆರೋಪಿತ ಅಧಿಕಾರಿಗಳು ಭೂದಾಖಲೆಗಳ ಸಹಾಯಕ ನಿರ್ದೇಶಕರಾಗಿ ನಗರಮಾಪನ ಬಿಜಾಪುರ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದಾಗ ಬಿಜಾಪುರ ಸಿ.ಎಸ್. ನಂ. 1138ನ್ನು ಇದರ ಮಾಲೀಕರಾದ ಶ್ರೀ ವಿ.ವಿ. ಜೇವರ್ಗಿಯವರು ಮೃತರಾದ ನಂತರ ಎಲ್ಲಾ ವಾರಸುದಾರರಿಗೆ ಜಂಟಿ ಖಾತೆಯನ್ನು ಮಾಡಿ ಮ್ಯುಟೇಷನ್‌ನ್ನು ಒಪ್ಪಿಕೊಂಡು ಆಸ್ತಿ ಕಾರ್ಡಿನಲ್ಲಿ ದಿ: 7–4–92 ರಂದು ದೃಢೀಕರಿಸಿರುತ್ತಾರೆ. ವಾರಸುದಾರರಲ್ಲಿ ಒಬ್ಬರಾದ ಶ್ರೀ ಅಶೋಕ್ ವಿ. ಜೇವರ್ಗಿಯವರು ದಿ: 13–4–92 ಕ್ಕೆ ಅರ್ಜಿ ಕೊಟ್ಟು ಎಲ್ಲಾ ವಾರಸುದಾರರನ್ನು ಜಂಟಿಯಾಗಿ ಖಾತೆ ಮಾಡಿರುವುದು ತಪ್ಪೆಂದೂ, ಮೃತ್ಯು ಪತ್ರದ ಪ್ರಕಾರ ತಾನೊಬ್ಬನೆ ವಾರಸುದಾರನೆಂದು ಪರಿಗಣಿಸಬೇಕೆಂದು ಅರ್ಜಿ ಕೊಟ್ಟಿದ್ದಾರೆ. ಈ ಅರ್ಜಿಯನ್ನು ಆರೋಪಿ ಅಧಿಕಾರಿಗಳು ಪರಿಗಣಿಸಿಲ್ಲ. ಆದರೆ ಶ್ರೀ ಅಶೋಕ್ ವಿ. ಜೇವರ್ಗಿಯವರು ದಿ: 8–7–92ಕ್ಕೆ ಇನ್ನೊಂದು ಅರ್ಜಿಯನ್ನು ಸಲ್ಲಿಸಲಾಗಿ ಅದನ್ನು ಗಣನೆಗೆ ತೆಗೆದುಕೊಂಡು ಉಭಯ ಪಕ್ಷದವರಿಗೆ ನೋಟೀಸನ್ನು ಕೊಟ್ಟು ವಿಚಾರಣೆ ನಡೆಸಿ ದಿ: 13–10–92ರಂದು ಅರ್ಜಿದಾರರಾದ ಶ್ರೀ ಅಶೋಕ್ ವಿ. ಜೇವರ್ಗಿಯವರನ್ನು ಏಕಮಾತ್ರ ವಾರಸುದಾರರಾಗಿ ಘೋಷಿಸಿ ಆದೇಶ ಮಾಡಿದ್ದಾರೆ. ಈ ಅದೇಶವನ್ನು ಕರ್ನಾಟಕ ಭೂಕಂದಾಯ ನಿಯಮ67 ಮತ್ತು 69ರ ಅಡಿಯಲ್ಲಿ ದತ್ತವಾದ ಅಧಿಕಾರದಂತೆ ಮಾಡಿದ್ದೇನೆಂದು ಆದೇಶದಲ್ಲಿ ತಿಳಿಸಿದ್ದಾರೆ.

ಕರ್ನಾಟಕ ಭೂಕಂದಾಯ ನಿಯಮ 67 ವಿವಾದಿತ ಮ್ಯುಟೇಷನ್ ಪ್ರಕರಣಗಳಿಗೆ ಸಂಬಂಧಿಸಿದೆ, ಯಾವುದಾದರೂ ಮ್ಯುಟೇಷನನ್ನು ಅಂಗೀಕರಿಸುವ ಮುನ್ನಾ, ಮ್ಯುಟೇಷನ್‌ಗಾಗಿ ನೋಟೀಸನ್ನು ಹೊರಡಿಸಿ 30 ದಿನಗಳ ಒಳಗಾಗಿ ಬಂದ ಆಕ್ಷೇಪಣೆಗಳನ್ನು ನಿಯಮ 67ರ ಅಡಿಯಲ್ಲಿ ವಿವಾದಿತ ಪ್ರಕರಣಗಳೆಂದು ಪರಿಗಣಿಸಿ, ಉಭಯತ್ರರರಿಗೆ ನೋಟೀಸನ್ನು ಕೊಟ್ಟು ವಿಚಾರಣೆ ನಡೆಸಿ ನಂತರ ಮ್ಯುಟೇಷನ್‌ನ್ನು ಒಪ್ಪಿಕೊಳ್ಳುವ ಅಧಿಕಾರವನ್ನು ಈ ನಿಯಮದಲ್ಲಿ ಕೊಡಲಾಗಿದೆ. ಹಾಗೆಯೇ ನಿಯಮ 69ರಲ್ಲಿ ನಿಯಮ 67ರ ಅಡಿಯಲ್ಲಿ ಮಾಡಲಾದ ಆದೇಶದ ವಿರುದ್ಧ ಮೇಲಾಧಿಕಾರಿಗಳಿಗೆ ಮಾಡಬಹುದಾದ ಮೇಲ್ಮನವಿಯ ಬಗ್ಗೆ ವಿವರಣೆ ಇದೆ ಸದರಿ ಪ್ರಕರಣಗಳಲ್ಲಿ 7–4–92ಕ್ಕೆ ಮ್ಯುಟೇಷನ್‌ನ್ನು ಅಂಗೀಕರಿಸಿ ಆರೋಪಿ ನೌಕರರು ಆಸ್ತಿ ಕಾರ್ಡಿನಲ್ಲಿ ಯಾವುದೇ ತಕರಾರು ಇಲ್ಲವೆಂದು ಭಾವಿಸಿ ಎಲ್ಲ ವಾರಸುದಾರರ ಹೆಸರುಗಳನ್ನು ನಮೂದಿಸಿ ದೃಢೀಕರಿಸಿದ್ದಾರೆ. ದಿ: 13–4–92 ರಂದು ವಾರಸುದಾರರಲ್ಲಿ ಒಬ್ಬರಾದ ಶ್ರೀ ಅಶೋಕ್ ವಿ. ಜೇವರ್ಗಿಯವರು ಕೊಟ್ಟ ಮನವಿಯನ್ನು ಆರೋಪಿತ ಅಧಿಕಾರಿಗಳು ಪರಿಗಣಿಸಿಲ್ಲ. ಆದರೆ ಶ್ರೀ ಅಶೋಕ್ ವಿ. ಜೇವರ್ಗಿಯವರು ದಿ: 8–7–92 ರಂದು ಕೊಟ್ಟ ಅರ್ಜಿಯನ್ನು ತಕರಾರು ಅರ್ಜಿಯೆಂದು ಪರಿಗಣಿಸಿ ನಿಯಮ 67ರ ಅಡಿಯಲ್ಲಿ ಇದನ್ನು ದಾಖಲು ಮಾಡಿ ವಿಚಾರಣೆ

ಮಾಡಿದ್ದಾರೆ. ಮೊದಲನೆಯದಾಗಿ ದಿ: 7–4–92 ರಲ್ಲಿ ಮಾಡಲಾದ ದೃಢೀಕರಣವನ್ನು ತಾವೇ ಪುನರ್ ವಿಮರ್ಶಿಸಿರುವುದು ಸರಿಯಾದ ಕ್ರಮವಲ್ಲ. ಶ್ರೀ ಅಶೋಕ್ ವಿ. ಜೇವರ್ಗಿಯವರು 13–4–92ರ ಅರ್ಜಿಯನ್ನು ಪರಿಗಣಿಸದೆ ನಂತರ ಬಂದ ಅರ್ಜಿಯನ್ನು ಗಣನೆಗೆ ತೆಗೆದುಕೊಂಡಿರುವುದು ಸರಿಯಾದುದಲ್ಲ. ಅಲ್ಲದೆ ದಿ: 7–4–92 ರಲ್ಲಿ ಮಾಡಲಾದ ದೃಢೀಕರಣದ ವಿರುದ್ಧ 3 ತಿಂಗಳ ನಂತರ ದಿ: 8–7–92ರಂದು ಬಂದ ಅರ್ಜಿಯನ್ನು ನಿಯಮ 67ರ ಅಡಿಯಲ್ಲಿ ತಕರಾರು ಎಂದು ಪರಿಗಣಿಸಿರುವುದು ಕಾನೂನು ಬಾಹಿರವಾಗಿದೆ. ಸಂಬಂಧಪಡದ ನಿಯಮ 69ನ್ನು ನಮೂದಿಸಿರುವುದು ಅನಾವಶ್ಯಕವಾಗಿದೆ.

ಆರೋಪಿತ ಅಧಿಕಾರಿಗಳು ತಮ್ಮ ಹೇಳಿಕೆಯಲ್ಲಿ ಕರ್ನಾಟಕ ಭೂಕಂದಾಯ ಅಧಿನಿಯಮ ಕಲಂ 25, ಮತ್ತು 133ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರದಂತೆ ನ್ಯಾಯವನ್ನು ಒದಗಿಸುವ ಸಲುವಾಗಿ ತಾವೇ ಆದೇಶವನ್ನು ವಿಮರ್ಶಿಸಿ ಆದೇಶ ಮಾಡಿರುತ್ತಾರೆಂದು ವಿಚಾರಣೆ ಕಾಲದಲ್ಲಿ ತಿಳಿಸಿರುತ್ತಾರೆ. ಕಲಂ 25ನ್ನು ಪರಿಶೀಲಿಸಿದಾಗ ಅದರಡಿಯಲ್ಲಿ ಯಾವುದೇ ರೆವಿನ್ಯೂ ನ್ಯಾಯಾಲಯಕ್ಕೆ ಇಲಾಖೆಯಲ್ಲಿ ನಡೆದ ಅನ್ಯಾಯಗಳನ್ನು ಸರಿಪಡಿಸಲು ಅಧಿಕಾರವನ್ನು ನೀಡಲಾಗಿದೆ. ಆದರೆ ತಮ್ಮ ಆದೇಶವನ್ನು ತಾವೇ ವಿಮರ್ಶಿಸುವ ಅಧಿಕಾರವನ್ನು ಕಲಂ 25 ಯಾವುದೇ ರೆವಿನ್ಯೂ ನ್ಯಾಯಾಲಯಕ್ಕೆ ನೀಡಿಲ್ಲ. ಕಲಂ 133ನ್ನು ಪರಿಶೀಲಿಸಲಾಗಿ ನಗರಮಾಪನ ದಾಖಲೆಗಳಲ್ಲಿ ಮಾಡಲಾದ ಎಂಟ್ರಿಯು ತಪ್ಪೆಂದು ಸಾಬೀತು ಆಗುವವರೆಗೆ ಸರಿ ಇದೆಯೆಂದು ಪರಿಗಣಿಸಬೇಕೆಂಬ ವಿವರವನ್ನು ನೀಡಲಾಗಿದೆ. ಈ ಕಲಂಗೂ ಮತ್ತು ಆರೋಪಿತ ಅಧಿಕಾರಿಗಳು ಮಾಡಲಾದ ಕಾನೂನು ಬಾಹಿರ ಆದೇಶಕ್ಕೂ ಯಾವ ಸಂಬಂಧವು ಇಲ್ಲ.

ಆರೋಪಿತ ಅಧಿಕಾರಿ ತಾವೇ ಮಾಡಿರುವ ಆದೇಶವನ್ನು ರದ್ದುಪಡಿಸಿ, ಮಾಡಲಾದ ಎಂಟ್ರಿಯೂ ಸಂಪೂರ್ಣವಾಗಿ ಕಾನೂನು ಬಾಹಿರವಾಗಿರುತ್ತದೆ. ಅಂದರೆ ಶ್ರೀ ಹೆಚ್.ಎಸ್. ನಾಗರಾಳ ಉಪ ನಿರ್ದೇಶಕರು ಇವರ ವಿರುದ್ಧ ಮಾಡಿರುವ ಆರೋಪಗಳು ಸಾಬೀತಾಗಿರುತ್ತದೆ.

ಮೇಲ್ಕಂಡ ವಿವರಗಳನ್ನು ಪರಿಶೀಲಿಸಿ, ಸರ್ಕಾರವು ವಿಚಾರಣಾ ವರದಿಯನ್ನು ಒಪ್ಪಿಕೊಂಡು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8 (iv–ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 56 ಭೂದಾಸೇ (1) 2007, ಬೆಂಗಳೂರು, ದಿನಾಂಕ: 25–08–2007**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಹೆಚ್.ಎಸ್. ನಾಗರಾಳ, ಉಪ ನಿರ್ದೇಶಕರು, ಭೂದಾಖಲೆಗಳ ಇಲಾಖೆ ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8 (iv–ಎ) ರನ್ವಯ

ಅ) ಅವರ ವೇತನ ಶ್ರೇಣಿ ರೂ. 7400–13120 ರಲ್ಲಿ ಹಾಲಿ ಪಡೆಯುತ್ತಿರುವ ರೂ. 9320 ರಿಂದ 2 ಹಂತ ಕೆಳಗೆ ಇಳಿಸುವ ಅಂದರೆ 8800/– ಕ್ಕೆ ಸಂಚಿತ ಪರಿಣಾಮ ಬೀರುವಂತೆ ಕೆಳಹಂತಕ್ಕೆ ಇಳಿಸುತ್ತದೆ.

ಆ) ಶ್ರೀ ಹೆಚ್.ಎಸ್. ನಾಗರಾಳ ರವರ ಮುಂಬಡ್ತಿಯನ್ನು ಅವರ ಮುಂದಿನ ವಾರ್ಷಿಕ ಬಡ್ತಿ ಗಳಿಸುವವರೆಗೆ ತಡೆಹಿಡಿಯುತ್ತದೆ.

ಇ) ಈ ದಂಡನೆಯಿಂದ ಅವರ ವಾರ್ಷಿಕ ಬಡ್ತಿಯ ದಿನಾಂಕ ಮುಂದೂಡಲ್ಪಡುವುದಿಲ್ಲ ಎಂದು ತತ್‌ಕ್ಷಣದಿಂದ ಜಾರಿಗೆ ಬರುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1557

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಮಾಪನ)

**ವಿಷಯ:** ಶ್ರೀಮತಿ ಕೆ.ಹೆಚ್. ಭಾಗ್ಯವತಮ್ಮ, ಹಿಂದಿನ ತಹಶೀಲ್ದಾರ್, ಚನ್ನಪಟ್ಟಣ ತಾಲ್ಲೂಕು, ರಾಮನಗರ ಜಿಲ್ಲೆ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸಿರುವುದನ್ನು ವಿಖಂಡಗೊಳಿಸಿ ಸೇವೆಗೆ ಪುನರ್ ಸ್ಥಾಪಿಸುವ ಬಗ್ಗೆ.

**ಓದಲಾಗಿದೆ:** 1 ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 11 ಎಡಿಇ 2007, ದಿನಾಂಕ: 24–3–2007

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 24–3–2007ರ ಸರ್ಕಾರದ ಆದೇಶದಲ್ಲಿ ಶ್ರೀಮತಿ ಕೆ.ಹೆಚ್. ಭಾಗ್ಯವತಮ್ಮ ಹಿಂದಿನ ತಹಶೀಲ್ದಾರ್, ಚನ್ನಪಟ್ಟಣ ತಾಲ್ಲೂಕು, ರಾಮನಗರ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಇವರು ರೈತರೊಬ್ಬರಿಂದ ಜಮೀನಿನ ವಿವಾದದ ಬಗ್ಗೆ ಇರುವ ಪ್ರಕರಣದಲ್ಲಿ ರೈತರಿಗೆ ಅನುಕೂಲ ಮಾಡಿಕೊಡಲು ಅಕ್ರಮ ಸಂಭಾವನೆ ರೂ. 10,000/– ಪಡೆಯುತ್ತಿರುವ ದೃಶ್ಯವು ಟಿವಿ.9 ಚಾನಲ್‌ನಲ್ಲಿ ದಿನಾಂಕ: 24–3–2007ರಂದು ಬಿತ್ತರಗೊಂಡಿರುತ್ತದೆ. ಇವರ ಅಕ್ರಮ ಸಂಭಾವನೆ ಪಡೆಯುತ್ತಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ಸರ್ಕಾರವು ಇವರ ದುರ್ನಡತೆ ಆಪಾದನೆಗೆ ಇಲಾಖಾ ವಿಚಾರಣೆಯನ್ನು ಬಾಕಿಯಿರಿಸಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು

ಮೇಲ್ಮನವಿ) ನಿಯಮಗಳ ನಿಯಮ 10 (1)(ಡಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು.

ಸರ್ಕಾರವು ಈ ವಿಷಯವನ್ನು ಪುನರ್ ಅವಲೋಕಿಸಿ, ಇವರನ್ನು ನಿಲಂಬನೆಯಲ್ಲಿಟ್ಟು, 6 ತಿಂಗಳು ಮೀರಿದ್ದರಿಂದ, ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ ಈ ಕೂಡಲೇ ಜಾರಿಗೆ ಬರುವಂತೆ ಅಮಾನತ್ತನ್ನು ವಿಖಂಡನೆಗೊಳಿಸಿ, ಸೇವೆಗೆ ಪುನರ್ ನೇಮಿಸಲು ನಿರ್ಧರಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 11 ಎಡಿಇ 2007, ಬೆಂಗಳೂರು, ದಿನಾಂಕ: 24-10-2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಸರ್ಕಾರವು ಶ್ರೀಮತಿ ಕೆ.ಹೆಚ್. ಭಾಗ್ಯವತಮ್ಮ, ಹಿಂದಿನ ತಹಶೀಲ್ದಾರ್, ಚನ್ನಪಟ್ಟಣ, ರಾಮನಗರ ಜಿಲ್ಲೆ ಇವರನ್ನು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ, ನಿಯಮ 10(5) (ಸಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಇವರ ಅಮಾನತ್ತನ್ನು ವಿಖಂಡನೆಗೊಳಿಸಿ ಕಾವೇರಿ ಜಲಭಾಗ್ಯ ನಿಗಮ ನಿಯಮಿತ, ಬೆಂಗಳೂರು ಇಲ್ಲಿ ಸಾರ್ವಜನಿಕ ಸಂಪರ್ಕಾಧಿಕಾರಿ ಹುದ್ದೆಗೆ ಶ್ರೀ ಮಂಜಾಚಾರ್, ತಹಶೀಲ್ದಾರ್ ಇವರು ದಿನಾಂಕ: 31-10-2007 ರಂದು ವಯೋ ನಿವೃತ್ತಿಯಿಂದ ತೆರವಾಗುವ ಜಾಗಕ್ಕೆ ನಿಯೋಜಿಸಿ ನೇಮಿಸಲು ಇವರ ಸೇವೆಯನ್ನು ಜಲಸಂಪನ್ಮೂಲ ಇಲಾಖೆಯ ವಶಕ್ಕೆ ನೀಡಿ ಆದೇಶಿಸಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1947

**ಬಿ.ವಿ. ಚೌಕಿಮಠ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು-3)

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಶ್ರೀ ಹೆಚ್. ಸುರೇಶ್, ಕಿರಿಯ ನಗರ ಯೋಜಕರು, ಇವರು ಖಾಯಂ ಪೂರ್ವ ಸೇವಾವಧಿಯನ್ನು ತೃಪ್ತಿಕರವಾಗಿ ಪೂರೈಸಿದ್ದಾರೆಂದು ಘೋಷಿಸುವ ಬಗ್ಗೆ ಆದೇಶ.

**ಓದಲಾಗಿದೆ:** ನಿರ್ದೇಶಕರು ನಗರ ಯೋಜನಾ ಇಲಾಖೆ ಇವರ ಪತ್ರ ಸಂಖ್ಯೆ: ನಯೋ:ಸಿ (6):741: ಖಾಪೂಘೋ: 2007, ದಿನಾಂಕ: 18-09-2007.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಪತ್ರದಲ್ಲಿ ನಿರ್ದೇಶಕರು ನಗರ ಯೋಜನಾ ಇಲಾಖೆ, ಬೆಂಗಳೂರು ಇವರು ನೇರ ನೇಮಕಾತಿ ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಯಾಗಿ ಸರ್ಕಾರಿ ಅಧಿಸೂಚನೆ ಸಂಖ್ಯೆ: ನಆಇ 145 ನಯೋಸೇ 2004, ದಿನಾಂಕ: 11-04-2004 ರನ್ವಯ ಸರ್ಕಾರದಿಂದ ನೇಮಕಾತಿಯನ್ನು ಹೊಂದಿದ ಶ್ರೀ ಹೆಚ್. ಸುರೇಶ್, ಕಿರಿಯ ನಗರ ಯೋಜಕರು ಇವರು ತಮ್ಮ ಖಾಯಂ ಪೂರ್ವಾವಧಿ ಸೇವೆಯನ್ನು ತೃಪ್ತಿಕರವಾಗಿ ಪೂರೈಸಿದ್ದಾರೆಂದು ಘೋಷಿಸುವ ಬಗ್ಗೆ ಪ್ರಸ್ತಾವನೆಯನ್ನು ಕಳುಹಿಸಿ, ಅವರು ಖಾಯಂ ಪೂರ್ವವಧಿ, ಸೇವೆಯನ್ನು ತೃಪ್ತಿಕರವಾಗಿ ಪೂರೈಸಿದ್ದು ಅವರು ತಮ್ಮ ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳನ್ನು ಪಾಸು ಮಾಡಿರುವುದರಿಂದ ದಿನಾಂಕ: 09-06-2007 ರಂದು ಖಾಯಂ ಪೂರ್ವಾವಧಿ ಸೇವೆಯನ್ನು ತೃಪ್ತಿಕರವಾಗಿ ಪೂರೈಸಿದ್ದಾರೆಂದು ಘೋಷಿಸಲು ಸರ್ಕಾರವನ್ನು ಕೋರಿರುವರು, ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ನಅಇ 119 ನಯೋಸೇ 2007, ಬೆಂಗಳೂರು, ದಿನಾಂಕ: 12-10-2007**

ಕರ್ನಾಟಕ ಸರ್ಕಾರಿ ಸೇವಾ (ಖಾಯಂಪೂರ್ವ) ನಿಯಮಾವಳಿ 1977ರ ನಿಯಮ 5(1)(ಎ)ರ ಪ್ರದತ್ತವಾಗಿರುವ ಅಧಿಕಾರವನ್ನು ಬಳಸಿ ಶ್ರೀ ಹೆಚ್. ಸುರೇಶ್, ಕಿರಿಯ ನಗರ ಯೋಜಕರು ಇವರು ದಿನಾಂಕ: 09-06-2007 ರಂದು ಖಾಯಂ ಪೂರ್ವ ಪರೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿದ್ದಾರೆಂದು ಘೋಷಿಸಲಾಗಿದೆ.

| ಕ್ರಮ ಸಂಖ್ಯೆ | ಪರೀಕ್ಷಾರ್ಥಿಯಾಗಿದ್ದ ಕಿರಿಯ ನಗರ ಯೋಜಕರ ಹೆಸರು | ಕಿರಿಯ ನಗರ ಯೋಜನಕರ ಹುದ್ದೆಗೆ ಇಲಾಖೆಯಲ್ಲಿ ಸೇರಿದ ದಿನಾಂಕ | ಖಾಯಂ ಪೂರ್ವಾವಧಿಯನ್ನು ಮುಕ್ತಾಯಗೊಳಿಸಿರುವ ದಿನಾಂಕ |
|---|---|---|---|
| 1 | ಶ್ರೀ ಹೆಚ್. ಸುರೇಶ್ | 15.04.2005 | 09.06.2007 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1864

**ಎಸ್.ಎನ್. ಕೃಷ್ಣಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**ಶಿಕ್ಷಣ ಸಚಿವಾಲಯ**

**ವಿಷಯ:** ಆರ್.ಐ.ಡಿ.ಎಫ್-11 ಯೋಜನೆಯಡಿ ಸರ್ಕಾರಿ ಪದವಿ ಪೂರ್ವ ಕಾಲೇಜುಗಳಿಗೆ ತರಗತಿ ಕೊಠಡಿಗಳನ್ನು ನಿರ್ಮಾಣ ಮಾಡುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ: ಪಪೂಶಿಇ/ಆರ್.ಐ.ಡಿ.ಎಫ್-11/ಕಾಮಗಾರಿ/ಅನು.ಬಿ/2007-08/ ದಿನಾಂಕ: 19-07-2007:

**ಪ್ರಸ್ತಾವನೆ:**

(1) ಮೇಲೆ ಓದಲಾದ ಪತ್ರದಲ್ಲಿ ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರುರವರು, ಆರ್.ಐ.ಡಿ.ಎಫ್-11ರ ಯೋಜನೆಯಡಿ ಕರ್ನಾಟಕದಲ್ಲಿ ಒಟ್ಟು 422 ಸರ್ಕಾರಿ ಪದವಿ ಪೂರ್ವ ಕಾಲೇಜುಗಳನ್ನು ನಿರ್ಮಿಸಲು 2007-08ನೇ ಸಾಲಿಗೆ ಲೆಕ್ಕಶೀರ್ಷಿಕೆ 4202-01-203-01-04-132-ಬಂಡವಾಳ ವೆಚ್ಚಗಳು [ಯೋಜನೆ] ಅಡಿ ಒದಗಿಸಲಾಗಿರುವ 10.00 ಕೋಟಿ ರೂಗಳನ್ನು [ರೂಪಾಯಿ ಹತ್ತು ಕೋಟಿಗಳು ಮಾತ್ರ] 3ನೇ ಕಂತಾಗಿ ಬಿಡುಗಡೆ ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

(2) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ: 325 ಯೋಸಕ 2007 ಬೆಂಗಳೂರು ದಿನಾಂಕ: 24-08-2007**

**[ಇಡಿ: 125 : ಸ್ವೀಮರ(ಯುನಿಕ್) 2007, ದಿನಾಂಕ: 24-08-2007]**

(3) ಆರ್.ಐ.ಡಿ.ಎಫ್-11ರ ಯೋಜನೆಯಡಿ ಕರ್ನಾಟಕದಲ್ಲಿ ಸರ್ಕಾರಿ ಪದವಿ ಪೂರ್ವ ಕಾಲೇಜುಗಳಿಗೆ ನಿರ್ಮಾಣ ಮಾಡಲು ಉದ್ದೇಶಿಸಿರುವ ಕೊಠಡಿಗಳಿಗೆ 3 ನೇ ಕಂತಾಗಿ 2007-08ನೇ ಸಾಲಿಗೆ ಲೆಕ್ಕಶೀರ್ಷಿಕೆ: 4202-01-203-01-04-132 ಬಂಡವಾಳ ವೆಚ್ಚಗಳು [ಯೋಜನೆ] 1000.00 ಲಕ್ಷರೂಗಳನ್ನು [ರೂಪಾಯಿ ಒಂದು ಸಾವಿರ ಲಕ್ಷಗಳು ಮಾತ್ರ] ಅನುಬಂಧದಲ್ಲಿ ತೋರಿಸಿರುವ ಜಿಲ್ಲೆಗಳಿಗೆ ಬಿಡುಗಡೆ ಮಾಡಲು ಈ ಕೆಳಕಂಡ ಷರತ್ತುಗಳನ್ನು ವಿಧಿಸಿ ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಬಿಡುಗಡೆ ಮಾಡಲಾಗಿದೆ.

**ಷರತ್ತುಗಳು:-**

- ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.
- ಕಾಮಗಾರಿಗಳ ಪ್ರಗತಿಯನ್ನು ಆಧರಿಸಿ ಹಾಗೂ ಬಳಕೆ ಪ್ರಮಾಣ ಪತ್ರವನ್ನು ಪಡೆದು ಅನುದಾನವನ್ನು ಹಂತ ಹಂತವಾಗಿ ಬಿಡುಗಡೆ ಮಾಡ ತಕ್ಕದ್ದು.

(4) ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಆ.ಇ: 15: ಬಿಪಿಎ / 2007/ ದಿನಾಂಕ: 31-07-2007ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಶ್ರೀಕಂಠೇಶ್ವರ**

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ

ಸರ್ಕಾರದ ಸಹ ಕಾರ್ಯದರ್ಶಿ (ಯೋಜನೆ)

ಶಿಕ್ಷಣ ಇಲಾಖೆ

ಸರ್ಕಾರದ ಆದೇಶ ಸಂಖ್ಯೆ ಇಡಿ 325 ಯೋಸಕ 2007 ದಿನಾಂಕ: 24-08-2007

(ಸ್ವೀಮರ:ಇಡಿ:125: (ಯುನಿಕ್ 2007), ದಿನಾಂಕ: 24-08-2007)ಕ್ಕೆ ಅನುಬಂಧ

ರೂ. ಲಕ್ಷಗಳಲ್ಲಿ

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಯೋಜನೆಯ ಒಟ್ಟು ಮೊತ್ತ | ಬಿಡುಗಡೆ ಮಾಡುತ್ತಿರುವ ಮೊತ್ತ |
|---|---|---|---|
| 1 | 2 | 3 | 4 |
| 01. | ಬೆಂಗಳೂರು ನಗರ | 45.04 | 15.00 |
| 02. | ಬೆಂಗಳೂರು ಗ್ರಾಮಾಂತರ | 125.28 | 40.00 |
| 03. | ಬಳ್ಳಾರಿ | 92.60 | 30.00 |
| 04. | ಬೆಳಗಾಂ | 80.20 | 28.00 |
| 05. | ಬಾಗಲಕೋಟೆ | 68.36 | 23.00 |
| 06. | ಬಿಜಾಪುರ | 67.89 | 22.90 |
| 07. | ಬೀದರ್ | 74.72 | 25.00 |
| 08. | ದಾವಣಗೆರೆ | 102.74 | 34.00 |
| 09. | ಚಿತ್ರದುರ್ಗ | 128.02 | 40.00 |
| 10. | ಚಿಕ್ಕಮಗಳೂರು | 83.44 | 28.00 |
| 11. | ಗದಗ | 88.96 | 28.00 |

| | | | |
|---|---|---|---|
| 12. | ಹಾವೇರಿ | 74.16 | 24.99 |
| 13. | ಧಾರವಾಡ | 43.28 | 13.70 |
| 14. | ಗುಲ್ಬರ್ಗಾ | 313.43 | 103.54 |
| 15. | ಹಾಸನ | 170.76 | 56.00 |
| 16. | ಕೋಲಾರ | 158.72 | 52.00 |
| 17. | ಚಾಮರಾಜನಗರ | 71.76 | 56.00 |
| 18. | ಮೈಸೂರು | 185.80 | 60.00 |
| 19. | ಮಂಡ್ಯ | 177.04 | 58.00 |
| 20. | ಉತ್ತರ ಕನ್ನಡ | 124.84 | 40.87 |
| 21. | ಕೊಪ್ಪಳ | 63.92 | 20.00 |
| 22. | ರಾಯಚೂರು | 99.16 | 30.00 |
| 23. | ದಕ್ಷಿಣ ಕನ್ನಡ | 113.24 | 37.00 |
| 24. | ಉಡುಪಿ | 102.76 | 30.00 |
| 25. | ಶಿವಮೊಗ್ಗ | 111.48 | 36.00 |
| 26. | ತುಮಕೂರು | 175.4 | 57.00 |
| 27. | ಕೊಡಗು | 35.76 | 11.00 |
| **ಒಟ್ಟು ಮೊತ್ತ** | | **2978.80** | **1000.00** |

**ಕೆ. ಶ್ರೀಕಂಠೇಶ್ವರ**

ಪಿ.ಆರ್.1692

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ (ಯೋಜನೆ)
ಶಿಕ್ಷಣ ಇಲಾಖೆ

**ವಿಷಯ:** ಸವಣೂರು ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಹೆಸರನ್ನು ದಾನಿಗಳ ಹೆಸರಿನಲ್ಲಿ ನಾಮಕರಣ ಮಾಡುವ ಬಗ್ಗೆ.

**ಓದಲಾಗಿದೆ:** 1 ಸರ್ಕಾರದ ಆದೇಶ ಸಂಖ್ಯೆ: ಇಡಿ: 51 ಯೋಯೋಕ 89 ದಿನಾಂಕ: 11-09-1989
2 ಆಯುಕ್ತರು, ಕಾಲೇಜು ಶಿಕ್ಷಣ ಶಿಕ್ಷಣ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ ಕಾ.ಶಿ.ಇ 119 ಯೋಜನೆ 97-98 ದಿನಾಂಕ: 03-07-2007

**ಪ್ರಸ್ತಾವನೆ:**

(1) ಮೇಲೆ ಓದಲಾದ (1), ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ರಾಜ್ಯ ಸರ್ಕಾರಿ ವಿದ್ಯಾ ಸಂಸ್ಥೆಗಳಿಗೆ, ದಾನಕೊಟ್ಟ ಗಣ್ಯ ವ್ಯಕ್ತಿಗಳ ನಾಮಕರಣ ಮಾಡುವ ಬಗ್ಗೆ ಆದೇಶ ಹೊರಡಿಸಲಾಗಿದೆ.

(2) ಮೇಲೆ ಓದಲಾದ (2) ರ ಪತ್ರದಲ್ಲಿ ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ರವರು, ಹಾವೇರಿ ಜಿಲ್ಲೆ ಸವಣೂರು ಸರ್ಕಾರಿ ಪ್ರಥಮ ದರ್ಜೆ ಕಾಲೇಜಿಗೆ ಕಟ್ಟಡ ನಿರ್ಮಾಣಕ್ಕಾಗಿ ಸವಣೂರು ನಗರ ವ್ಯಾಪ್ತಿಯಲ್ಲಿ ಸರ್ವೆ ಸಂಖ್ಯೆ 2/5 ರಲ್ಲಿ 4.39 ಎಕರೆ ಜಮೀನನ್ನು ಸವಣೂರಿನ ಮಾನ್ಯ ಶಾಸಕರಾದ ಶ್ರೀ ರಾಜಶೇಖರ ಗುರುಸಿದ್ಧಪ್ಪ ಸಿಂಧೂರ ಹಾಗೂ ಶ್ರೀ ಬಸವರಾಜು ಗುರುಸಿದ್ಧಪ್ಪ ಸಿಂಧೂರ ಇವರುಗಳು ದಾನವಾಗಿ ನೀಡಿದ್ದು, ಅವರ ಅಪೇಕ್ಷೆಯಂತೆ ಸದರಿ ಜಮೀನನ್ನು ದಾನವಾಗಿ ಪಡೆಯಲು, ಸದರಿ ಜಾಗದಲ್ಲಿ ಕಾಲೇಜು ಕಟ್ಟಡ ನಿರ್ಮಾಣ ಮಾಡಲು ಹಾಗೂ ಸದರಿ ಕಾಲೇಜಿಗೆ **"ಶ್ರೀಮತಿ ಲಲಿತಾದೇವಿ ಗುರುಸಿದ್ಧಪ್ಪ ಸಿಂಧೂರ"** ಎಂದು ನಾಮಕರಣ ಮಾಡುವ ಬಗ್ಗೆ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

(3) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ: 366 :ಯೋಸಕ 2007 ಬೆಂಗಳೂರು, ದಿ.30-08-2007**

**[ಇಡಿ: 130 : ಸ್ವೀಮರ(ಯುನಿಕ್) 2007, ದಿನಾಂಕ 30-08-2007]**

(4) ಹಾವೇರಿ ಜಿಲ್ಲೆ ಸವಣೂರು ಸರ್ಕಾರಿ ಪ್ರಥಮ ದರ್ಜೆ ಕಾಲೇಜಿಗೆ 4.39ಎಕರೆ ಜಮೀನನ್ನು ದಾನವಾಗಿ ನೀಡಿರುವ ಶ್ರೀ ರಾಜಶೇಖರ ಗುರುಸಿದ್ಧಪ್ಪ ಸಿಂಧೂರ ಹಾಗೂ ಶ್ರೀ ಬಸವರಾಜು ಗುರುಸಿದ್ಧಪ್ಪ ಸಿಂಧೂರರವರುಗಳ ಅಪೇಕ್ಷೆಯಂತೆ ಸದರಿ ಜಾಗವನ್ನು ಇಲಾಖೆಯ ವಶಕ್ಕೆ ಪಡೆಯಲು ಮತ್ತು ಸದರಿ ಜಾಗದಲ್ಲಿ ವಿದ್ಯಾರ್ಥಿಗಳಿಗೆ ಅನಾನುಕೂಲವಾಗದಂತೆ ಕಟ್ಟಡವನ್ನು ನಿರ್ಮಿಸಲು ಸದರಿ ಕಾಲೇಜಿಗೆ **"ಶ್ರೀಮತಿ ಲಲಿತಾದೇವಿ ಗುರುಸಿದ್ಧಪ್ಪ ಸಿಂಧೂರ"** ಎಂದು ನಾಮಕರಣ ಮಾಡಲು, ಸರ್ಕಾರವು ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರುರವರಿಗೆ ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1689

**ಕೆ. ಶ್ರೀಕಂಠೇಶ್ವರ**

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಸಹ ಕಾರ್ಯದರ್ಶಿ (ಯೋಜನೆ)
ಶಿಕ್ಷಣ ಇಲಾಖೆ

**ವಿಷಯ:** ಸವದತ್ತಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಹೆಸರನ್ನು ದಾನಿಗಳ ಹೆಸರಿನಲ್ಲಿ ನಾಮಕರಣ ಮಾಡುವ

ಬಗ್ಗೆ.

**ಓದಲಾಗಿದೆ:** 1 ಸರ್ಕಾರದ ಆದೇಶ ಸಂಖ್ಯೆ: ಇಡಿ: 51 ಯೋಯೋಕ 89 ದಿನಾಂಕ: 11-09-1989

2 ಆಯುಕ್ತರು, ಕಾಲೇಜು ಶಿಕ್ಷಣ ಶಿಕ್ಷಣ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ ಕಾ.ಶಿ.ಇ 14 ಯೋಜನೆ 2007-98 ದಿನಾಂಕ: 07-08-2007

**ಪ್ರಸ್ತಾವನೆ:**

(1) ಮೇಲೆ ಓದಲಾದ (1), ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ರಾಜ್ಯ ಸರ್ಕಾರಿ ವಿದ್ಯಾ ಸಂಸ್ಥೆಗಳಿಗೆ, ದಾನಕೊಟ್ಟ ಗಣ್ಯ ವ್ಯಕ್ತಿಗಳ ನಾಮಕರಣ ಮಾಡುವ ಬಗ್ಗೆ ಆದೇಶ ಹೊರಡಿಸಲಾಗಿದೆ.

(2) ಮೇಲೆ ಓದಲಾದ (2) ರ ಪತ್ರದಲ್ಲಿ ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ರವರು, ಬೆಳಗಾಂ ಜಿಲ್ಲೆ ಸವದತ್ತಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿಗೆ ಕಟ್ಟಡ ನಿರ್ಮಾಣಕ್ಕಾಗಿ ಸವದತ್ತಿ ನಗರ ವ್ಯಾಪ್ತಿಯಲ್ಲಿ ಸರ್ವೆ ಸಂಖ್ಯೆ 108/2 ರಲ್ಲಿ 2 ಎಕರೆ 4 ಗುಂಟೆ ಜಮೀನನ್ನು ಸವದತ್ತಿಯ ಮಾನ್ಯ ಶಾಸಕರಾದ ಶ್ರೀ ವಿಶ್ವನಾಥ ಕರಿಬಸಪ್ಪ ಮಾಮನಿ ಇವರು ದಾನವಾಗಿ ನೀಡಿದ್ದು, ಅವರ ಅಪೇಕ್ಷೆಯಂತೆ ಸದರಿ ಕಾಲೇಜಿಗೆ **"ಶ್ರಿ ಕರಬಸಪ್ಪ ಮಲ್ಲಿಕಾರ್ಜುನಪ್ಪ ಮಾಮನಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜು"** ಎಂದು ನಾಮಕರಣ ಮಾಡುವ ಬಗ್ಗೆ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

(3) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ: 362 :ಯೋಸಕ 2007 ಬೆಂಗಳೂರು, ದಿ.30-08-2007**

[ಇಡಿ: 131 : ಸ್ವೀಮರ(ಯುನಿಕ್) 2007, ದಿನಾಂಕ 30-08-2007]

(4) ಬೆಳಗಾವಿ ಜಿಲ್ಲೆ ಸವದತ್ತಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿಗೆ 2 ಎಕರೆ 4 ಗುಂಟೆ ಜಮೀನನ್ನು ದಾನವಾಗಿ ನೀಡಿರುವ ಸವದತ್ತಿ ಶಾಸಕರಾದ ಮಾನ್ಯ ಶ್ರೀ ಕರಿಬಸಪ್ಪ ಮಾಮನಿ ರವರ ಅಪೇಕ್ಷೆಯಂತೆ ಸದರಿ ಕಾಲೇಜಿಗೆ **"ಶ್ರಿ ಕರಬಸಪ್ಪ ಮಲ್ಲಿಕಾರ್ಜುನಪ್ಪ ಮಾಮನಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜು"** ಎಂದು ನಾಮಕರಣ ಮಾಡಲು, ಸರ್ಕಾರವು ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರುರವರಿಗೆ ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1691

**ಕೆ. ಶ್ರೀಕಂಠೇಶ್ವರ**

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ

ಸರ್ಕಾರದ ಸಹ ಕಾರ್ಯದರ್ಶಿ (ಯೋಜನೆ)

ಶಿಕ್ಷಣ ಇಲಾಖೆ

**ವಿಷಯ:** ಕೆ.ಕೆ.ಕೊಪ್ಪ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಹೆಸರನ್ನು ದಾನಿಗಳ ಹೆಸರಿನಲ್ಲಿ ನಾಮಕರಣ ಮಾಡುವ ಬಗ್ಗೆ.

**ಓದಲಾಗಿದೆ:** 1 ಸರ್ಕಾರದ ಆದೇಶ ಸಂಖ್ಯೆ: ಇಡಿ: 51 ಯೋಯೋಕ 89 ದಿನಾಂಕ: 11-09-1989

2 ಆಯುಕ್ತರು, ಕಾಲೇಜು ಶಿಕ್ಷಣ ಶಿಕ್ಷಣ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ ಕಾ.ಶಿ.ಇ 18 ಯೋಜನೆ 2007-98 ದಿನಾಂಕ: 20-07-2007

**ಪ್ರಸ್ತಾವನೆ:**

(1) ಮೇಲೆ ಓದಲಾದ (1), ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ರಾಜ್ಯ ಸರ್ಕಾರಿ ವಿದ್ಯಾ ಸಂಸ್ಥೆಗಳಿಗೆ, ದಾನಕೊಟ್ಟ ಗಣ್ಯ ವ್ಯಕ್ತಿಗಳ ನಾಮಕರಣ ಮಾಡುವ ಬಗ್ಗೆ ಆದೇಶ ಹೊರಡಿಸಲಾಗಿದೆ.

(2) ಮೇಲೆ ಓದಲಾದ (2) ರ ಪತ್ರದಲ್ಲಿ ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ರವರು, ಬೆಳಗಾಂ ಜಿಲ್ಲೆ ಕೆ.ಕೆ.ಕೊಪ್ಪ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿಗೆ ಕಟ್ಟಡ ನಿರ್ಮಾಣಕ್ಕಾಗಿ 3 ಎಕರೆ 20 ಗುಂಟೆ ಜಮೀನನ್ನು ಶ್ರೀಮತಿ ಸೋಮವ್ವ ಚೆನ್ನಬಸಪ್ಪ ಅಂಗಡಿಯವರು ಇವರು ದಾನವಾಗಿ ನೀಡಿದ್ದು, ಅವರ ಅಪೇಕ್ಷೆಯಂತೆ ಸದರಿ ಕಾಲೇಜಿಗೆ **"ಶ್ರೀಮತಿ ಸೋಮವ್ವ ಚೆನ್ನಬಸಪ್ಪ ಅಂಗಡಿ"** ಎಂದು ನಾಮಕರಣ ಮಾಡುವ ಬಗ್ಗೆ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

(3) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ: 362 :ಯೋಸಕ 2007 ಬೆಂಗಳೂರು, ದಿ.30-08-2007**

[ಇಡಿ: 129 : ಸ್ವೀಮರ(ಯುನಿಕ್) 2007, ದಿನಾಂಕ 30-08-2007]

(4) ಬೆಳಗಾವಿ ಜಿಲ್ಲೆ ಕೆ.ಕೆ.ಕೊಪ್ಪ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿಗೆ 3 ಎಕರೆ 20 ಗುಂಟೆ ಜಮೀನನ್ನು ದಾನವಾಗಿ ನೀಡಿರುವ ಶ್ರೀಮತಿ ಸೋಮವ್ವ ಚೆನ್ನಬಸಪ್ಪ ಅಂಗಡಿರವರ ಅಪೇಕ್ಷೆಯಂತೆ ಸದರಿ ಕಾಲೇಜಿಗೆ **"ಶ್ರೀಮತಿ ಸೋಮವ್ವ ಚೆನ್ನಬಸಪ್ಪ ಅಂಗಡಿ"** ಎಂದು ನಾಮಕರಣ ಮಾಡಲು, ಸರ್ಕಾರವು ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರುರವರಿಗೆ ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1690

**ಕೆ. ಶ್ರೀಕಂಠೇಶ್ವರ**

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ

ಸರ್ಕಾರದ ಸಹ ಕಾರ್ಯದರ್ಶಿ (ಯೋಜನೆ)

ಶಿಕ್ಷಣ ಇಲಾಖೆ

**ವಿಷಯ:** ಕಾಲೇಜು ಶಿಕ್ಷಣ ಇಲಾಖೆಯ ಆಯುಕ್ತರ ಆಪ್ತ ಶಾಖೆಗೆ ಫೋಟೋ ಕಾಪಿಯರ್ ಯಂತ್ರ

ಖರೀದಿಸದ ಸಂಬಂಧ "ವ್ಯಾಟ್" ವ್ಯತ್ಯಾಸದ ತೆರಿಗೆ ಮೊತ್ತ ಪಾವತಿಸುವ ಬಗ್ಗೆ.

**ಓದಲಾಗಿದೆ:** 1 ಸರ್ಕಾರದ ಆದೇಶ ಸಂಖ್ಯೆ: ಇಡಿ: 193 ಯೋಯೋಕ 2007 ದಿನಾಂಕ: 31-05-2007.
2 ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ ರವರ ಟಿಪ್ಪಣಿ ಸಂಖ್ಯೆ ಕಾ.ಶಿ. ಇ/ ಮಾ.ತ.ವಿ/ 1/5/ 2007-08/ ದಿನಾಂಕ: 20-07-2007

**ಪ್ರಸ್ತಾವನೆ:**

(1) ಮೇಲೆ ಓದಲಾದ (1) ರ ಸರ್ಕಾರದ ಆದೇಶದಲ್ಲಿ ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ ಇವರ ಆಪ್ತ ಶಾಖೆಗೆ ಫೋಟೋ ಕಾಪಿಯರ್ ಯಂತ್ರಗಳನ್ನು ಡಿ.ಜಿ.ಎಸ್.ಅಂಡ್ ರೇಟ್ ಕಾಂಟ್ರಾಕ್ಟ್ ಅಡಿಯಲ್ಲಿ ಖರೀದಿಸಲು 58,000.00 ರೂಗಳನ್ನು ಬಿಡುಗಡೆ ಮಾಡಲಾಗಿದೆ.

(2) ಮೇಲೆ ಓದಲಾದ (2) ರ ಪತ್ರದಲ್ಲಿ ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ರವರು ಸರ್ಕಾರದ ಆದೇಶ ಸಂಖ್ಯೆ ಇಡಿ : 193 : ಯೋಯೋಕ 2007 ದಿನಾಂಕ:-31-05-2007 ರ ಪ್ರಕಾರ ಅವರ ಆಪ್ತ ಶಾಖೆಗೆ ಫೋಟೋ ಕಾಪಿಯರ್ ಯಂತ್ರ ಖರೀದಿಸಿದ್ದು, ಡಿ.ಜಿ.ಎಸ್. ಅಂಡ್ ರೇಟ್ ಕಾಂಟ್ರಾಕ್ಟ್‌ನ ಪತ್ರದಲ್ಲಿ ಹಾಳೆ ಸಂಖ್ಯೆ 20 ರಲ್ಲಿ [ಟ್ಯಾಕ್ಸ್‌ಅಪ್ಲಿಕಬಲ್] ಎಂದು ನಮೂದಾಗಿರುವ ಕಾರಣ ಸದರಿ ಸಾಮಗ್ರಿಯ ದರ 58,000.00 ರೂಗಳ ಮೊತ್ತಕ್ಕೆ 12.50% ರಷ್ಟು ಮೌಲ್ಯ ವರ್ಧಿತ ತೆರಿಗೆ [VAT]" ವ್ಯತ್ಯಾಸದ ತೆರಿಗೆ ಮೊತ್ತ ಲೆಕ್ಕ ಹಾಕುವುದರೊಂದಿಗೆ ಖರೀದಿಗೆ ತಗುಲಿದ ಮೊತ್ತವು 62,250/-[ಒಟ್ಟು ಅರವತ್ತೈದು ಸಾವಿರದ ಇನ್ನೂರಾ ಐವತ್ತು ರೂಪಾಯಿಗಳು ಮಾತ್ರ] ವಾಗಿರುವ ಕಾರಣ ವ್ಯತ್ಯಾಸದ ತೆರಿಗೆ ಮೊತ್ತ 7250/-[ಏಳು ಸಾವಿರದ ಇನ್ನೂರಾ ಐವತ್ತು ರೂಪಾಯಿಗಳು ಮಾತ್ರ]ನ್ನು ಅನುಮೋದಿಸುವಂತೆ ಕೋರಿರುತ್ತಾರೆ.

(3) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ: 286 :ಯೋಯೋಕ 2007 ಬೆಂಗಳೂರು, ದಿ.13-09-2007**
**[ಇಡಿ: 142 : ಸ್ವೀಮರ(ಯುನಿಕ್) 2007, ದಿನಾಂಕ 13-09-2007]**

(4) ಸರ್ಕಾರದ ಆದೇಶ ಸಂಖ್ಯೆ ಇಡಿ : 193 : ಯೋಯೋಕ 2007 ದಿನಾಂಕ:-31-05-2007 ರ ಪ್ರಕಾರ ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ ಅವರ ಆಪ್ತ ಶಾಖೆಗೆ ಫೋಟೋ ಕಾಪಿಯರ್ ಯಂತ್ರ ಖರೀದಿಸಿದ್ದು, ಡಿ.ಜಿ.ಎಸ್. ಅಂಡ್ ರೇಟ್ ಕಾಂಟ್ರಾಕ್ಟ್‌ನ ಪತ್ರದಲ್ಲಿ ಹಾಳೆ ಸಂಖ್ಯೆ 20 ರಲ್ಲಿ [ಟ್ಯಾಕ್ಸ್ ಅಪ್ಲಿಕಬಲ್] ಎಂದು ನಮೂದಾಗಿರುವ ಕಾರಣ ಸದರಿ ಸಾಮಗ್ರಿಯ ದರ 58,000.00 ರೂಗಳ ಮೊತ್ತಕ್ಕೆ 12.50% ರಷ್ಟು ಮೌಲ್ಯ ವರ್ಧಿತ ತೆರಿಗೆ [VAT]" ವ್ಯತ್ಯಾಸದ ತೆರಿಗೆ ಮೊತ್ತ 7250/- [ಏಳು ಸಾವಿರದ ಇನ್ನೂರಾ ಐವತ್ತು ರೂಪಾಯಿಗಳು ಮಾತ್ರ]ನ್ನು 2007-08ನೇ ಸಾಲಿಗೆ ಲೆಕ್ಕಶೀರ್ಷಿಕೆ 2202-03-001-0-01-059 (ಯೋಜನೆ)ಯಡಿಯಲ್ಲಿ ಒದಗಿಸಿರುವ ಅನುದಾನದ ಮಿತಿಯೊಳಗೇ ಭರಿಸಲು ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಿದೆ.

ಸದರಿ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ ಶಿಇ 667 ಐಎಫ್(ಬಿಎ) 2007: ದಿನಾಂಕ: 25-08-2007 ರಲ್ಲಿನ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1696

**ಕೆ. ಶ್ರೀಕಂಠೇಶ್ವರ**
ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಸಹ ಕಾರ್ಯದರ್ಶಿ (ಯೋಜನೆ)
ಶಿಕ್ಷಣ ಇಲಾಖೆ

**ವಿಷಯ:** ಖಾಯಂ ಹಣ ಮಂಜೂರಾತಿ ಬಗ್ಗೆ.

**ಓದಲಾಗಿದೆ:** 1 AG-DEP-II-D6-05-06/87, dated 18-11-2005.
2 ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ: ಕಾಶಿಇ-01-ಹಪಾವಿ-ಖಾಮುಂ-2006-07/ದಿನಾಂಕ 25-11-2007

**ಪ್ರಸ್ತಾವನೆ:-**

(1) ಮೇಲೆ ಓದಲಾದ (1) ರ ಪತ್ರದಲ್ಲಿ ಕಾಲೇಜು ಶಿಕ್ಷಣ ಇಲಾಖೆಯ ಕೇಂದ್ರ ಕಛೇರಿಗೆ ಖಾಯಂ ಮುಂಗಡ ರೂ.150/-ಗಳನ್ನು ಮಹಾಲೇಖಪಾಲರು ಮಂಜೂರಾತಿ ನೀಡಿರುವುದಾಗಿ ಆಯುಕ್ತರು, ಅವರ ಮೇಲೆ(2) ರಲ್ಲಿ ಓದಲಾದ ಪತ್ರದಲ್ಲಿ ತಿಳಿಸಿ, ಇತ್ತೀಚಿನ ದಿನಗಳ ವೆಚ್ಚವನ್ನು ಪರಿಗಣಿಸಿದಾಗ ಈ ಮುಂಗಡ ಬಹಳ ಕಡಿಮೆಯಾಗಿದ್ದು, ಈ ವಿಷಯ ಕುರಿತು ಮಹಾಲೇಖಪಾಲರಿಗೆ ಪತ್ರ ಬರೆಯಲಾಗಿ ಕಳೆದ ಐದು ವರ್ಷದ ಸರಾಸರಿ ಸಣ್ಣ ಪುಟ್ಟ ಸಾದಿಲ್ವಾರು ವೆಚ್ಚಗಳನ್ನು ಗಮನಿಸಿದಾಗ ಈ ಕಛೇರಿಗೆ ರೂ.3250/-ಗಳ ಖಾಯಂ ಮುಂಗಡ ಮಂಜೂರಾತಿ ನೀಡಬಹುದೆಂದೂ ಸಹ ಮಹಾಲೇಖಪಾಲರು ತಿಳಿಸಿರುವುದಾಗಿ ಹೇಳುತ್ತಾ, ಈ ಖಾಯಂ ಮುಂಗಡ ಹಣವನ್ನು ಖಜಾನೆಯಿಂದ ಪಡೆಯಲು ಮಹಾಲೇಖಪಾಲರಿಂದ ಆತರೈಸೇಷನ್ ಅನುಮತಿ ಪತ್ರ ಪಡೆಯಬೇಕಾಗಿದ್ದು, ಈ ಪತ್ರ ಪಡೆಯಲು ಖಾಯಂ ಮುಂಗಡ ರೂ.3250/-ಗಳಿಗೆ ಸಕ್ಷಮ ಪ್ರಾಧಿಕಾರದಿಂದ ಅನುಮತಿ ಬೇಕಾಗಿರುವುದರಿಂದ ಸರ್ಕಾರದ ಆದೇಶ ಕೋರಿರುತ್ತಾರೆ.

(2) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ: 12 :ಯೋಯೋಕ 2007 ಬೆಂಗಳೂರು, ದಿ.31-08-2007**

[ಇಡಿ: 133 : ಸ್ವೀಮರ(ಯುನಿಕ್) 2007, ದಿನಾಂಕ 31-08-2007]

(3) ಕಾಲೇಜು ಶಿಕ್ಷಣ ಇಲಾಖೆಯ ಕೇಂದ್ರ ಕಛೇರಿಯ ಖಾಯಂ ಮುಂಗಡವನ್ನು ಹಾಲಿ ಇರುವ 150/-ರೂಗಳಿಂದ 3250/-ರೂಗಳಿಗೆ ಹೆಚ್ಚಿಸಲು ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಿದೆ.

(4) ಸದರಿ ಆದೇಶವನ್ನು ಆಂತರಿಕ ಆರ್ಥಿಕ ಶಾಖೆ ಶಿಕ್ಷಣ ಇಲಾಖೆ ಮತ್ತು ಆರ್ಥಿಕ ಇಲಾಖೆಗಳು ಕ್ರಮವಾಗಿ ತಮ್ಮ ಅನಧಿಕೃತ ಟಿಪ್ಪಣಿ ಸಂಖ್ಯೆ ಶಿಇ: 79: ಐಎಫ್(ಬಿಎ): 2007 ದಿನಾಂಕ: 28-02-2007 ಮತ್ತು ಆ.ಇ:248: ವೆ-8/07/ ದಿನಾಂಕ:31-07-2007ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1697

**ಕೆ. ಶ್ರೀಕಂಠೇಶ್ವರ**

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ

ಸರ್ಕಾರದ ಸಹ ಕಾರ್ಯದರ್ಶಿ (ಯೋಜನೆ)

ಶಿಕ್ಷಣ ಇಲಾಖೆ

**ವಿಷಯ:** 2007-08ನೇ ಸಾಲಿನಲ್ಲಿ ಕೊಡಗು ಜಿಲ್ಲೆ ಕುಶಾಲನಗರದಲ್ಲಿ ಪ್ರಾರಂಭಿಸಲಾಗಿರುವ ನೂತನ ಸರ್ಕಾರಿ ಇಂಜಿನಿಯರಿಂಗ್ ಕಾಲೇಜು ಕಟ್ಟಡದ ನಿರ್ಮಾಣ ಕಾಮಗಾರಿಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಮಂಜೂರಾತಿ ನೀಡುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಇಡಿ: 175 ಯೋಯೋಕ 2007 ದಿನಾಂಕ: 01-06-2007
2. ಸರ್ಕಾರದ ಆದೇಶ ಸಂಖ್ಯೆ ಇಡಿ 189 ಯೋಸಕ 2007 ದಿನಾಂಕ: 08-06-2007.
3. ಸರ್ಕಾರದ ಆದೇಶ ಸಂಖ್ಯೆ: ಇಡಿ: 175 ಯೋಯೋಕ 2007 ದಿನಾಂಕ: 13-07-2007
4. ಸರ್ಕಾರದ ಆದೇಶ ಸಂಖ್ಯೆ: ಇಡಿ: 175 ಯೋಯೋಕ 2007 ದಿನಾಂಕ: 21-08-2007
5. ಸರ್ಕಾರದ ಆದೇಶ ಸಂಖ್ಯೆ ಇಡಿ 60 ಟಿಇಸಿ 2007, ದಿನಾಂಕ: 06-07-2007
6. ಸರ್ಕಾರದ ಕಾರ್ಯದರ್ಶಿಗಳು, ಲೋಕೋಪಯೋಗಿ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ ಲೋಇ:122:ಬಿಇಡಿ 2007 ದಿನಾಂಕ 22-08-2007

**ಪ್ರಸ್ತಾವನೆ:**

(1) ಮೇಲೆ ಓದಲಾದ (1), (2), (3) ಮತ್ತು (4) ರ ಸರ್ಕಾರದ ಆದೇಶಗಳಲ್ಲಿ ಕ್ರಮವಾಗಿ 2007-08ನೇ ಸಾಲಿನಲ್ಲಿ ಕೆ.ಆರ್.ಪೇಟೆ, ಹಾಸನ, ಚಾಮರಾಜನಗರ ನೂತನವಾಗಿ ಪ್ರಾರಂಭಿಸಲಾದ ಇಂಜಿನಿಯರಿಂಗ್ ಕಾಲೇಜುಗಳ, ಬೆಂಗಳೂರಿನ ಎಸ್.ಕೆ.ಎಸ್.ಜೆ.ಟಿ ಕಟ್ಟಡಗಳ ನಿರ್ಮಾಣದ ಅಂದಾಜು ಪಟ್ಟಿಗಳಿಗೆ ಹಾಗೂ ರಾಮನಗರ, ಬಳ್ಳಾರಿಜಿಲ್ಲೆ ಹೂವಿನಹಡಗಲಿಯಲ್ಲಿ ನೂತನವಾಗಿ ಪ್ರಾರಂಭಿಸಲಾದ ಇಂಜಿನಿಯರಿಂಗ್ ಕಾಲೇಜು ಕಟ್ಟಡ ನಿರ್ಮಾಣಕ್ಕೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

(2) ಮೇಲೆ ಓದಲಾದ (5) ರ ಸರ್ಕಾರದ ಆದೇಶದಲ್ಲಿ ಕೊಡಗು ಜಿಲ್ಲೆ ಕುಶಾಲ ನಗರದಲ್ಲಿ ಹೊಸ ಇಂಜಿನಿಯರಿಂಗ್ ಕಾಲೇಜನ್ನು 2007-08 ನೇ ಸಾಲಿಗೆ ಪ್ರಾರಂಭಿಸಲು ಮಂಜೂರಾತಿ ನೀಡಲಾಗಿದೆ.

(3) ಮೇಲೆ ಓದಲಾದ (6) ರ ಪತ್ರದಲ್ಲಿ ಕೊಡಗು ಜಿಲ್ಲೆ, ಕುಶಾಲನಗರದಲ್ಲಿ ನೂತನವಾಗಿ ಪ್ರಾರಂಭಿಸಲಾದ ಇಂಜಿನಿಯರಿಂಗ್ ಕಾಲೇಜಿನ ಕಟ್ಟಡ ನಿರ್ಮಾಣ ಕಾಮಗಾರಿಯ 30.00 ಕೋಟಿ ರೂಗಳ [ಮೂವತ್ತು ಕೋಟಿ ರೂಪಾಯಿಗಳು ಮಾತ್ರ] ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಸರ್ಕಾರದ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ, ಬೆಂಗಳೂರುರವರು ಶಿಕ್ಷಣ ಇಲಾಖೆಯನ್ನು ಕೋರಿರುತ್ತಾರೆ.

(4) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ: 175 :ಯೋಯೋಕ 2007 ಬೆಂಗಳೂರು, ದಿ.22-08-2007**

**[ಇಡಿ: 123 : ಸ್ವೀಮರ(ಯುನಿಕ್) 2007, ದಿನಾಂಕ 22-08-2007]**

(5) 2007-08ನೇ ಸಾಲಿಗೆ ಕೊಡಗು ಜಿಲ್ಲೆ ಕುಶಾಲನಗರದಲ್ಲಿ ಪ್ರಾರಂಭಿಸಲಾದ ಹೊಸಸರ್ಕಾರಿ ಇಂಜಿನಿಯರಿಂಗ್ ಕಾಲೇಜಿಗೆ ಕಟ್ಟಡ ನಿರ್ಮಾಣ ಕಾಮಗಾರಿಗೆ ಸಂಬಂಧಿಸಿದಂತೆ 2007-08ನೇ ಸಾಲಿಗೆ ಲೆಕ್ಕಶೀರ್ಷಿಕೆ 4202-02-104-1-03-386ರಡಿ ಅನುದಾನವನ್ನು ಒದಗಿಸಿರುವುದರಿಂದ 30.00 ಕೋಟಿ ರೂಗಳ [ಮೂವತ್ತು ಕೋಟಿ ರೂಪಾಯಿಗಳು ಮಾತ್ರ] ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಲು ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಿದೆ.

(6) 2007-08ನೇ ಸಾಲಿಗೆ ಲೆಕ್ಕಶೀರ್ಷಿಕೆ:4202-02-104-1-03-386 [ಯೋಜನೆ] ಯಡಿಯಲ್ಲಿ 50.00 ಕೋಟಿ ರೂಗಳನ್ನು ಒದಗಿಸಿದ್ದು, ಅದರ ಮಿತಿಯೊಳಗೆ ಮೇಲ್ಕಂಡ ಅಂದಾಜಿನ ಶೇ.30ರಷ್ಟು ವೆಚ್ಚ ಭರಿಸಿ ಸದರಿ ಕಾಲೇಜಿನ ಕಟ್ಟಡ ನಿರ್ಮಾಣ ಕಾಮಗಾರಿಯನ್ನು ಪ್ರಾರಂಭಿಸಲು ಅನುಮತಿ ನೀಡಲಾಗಿದೆ.

(7) ಪ್ರತಿ ಮಾಹೆಯೂ ಎಂ.ಎಂ.ಆರ್ ವರದಿಯಲ್ಲಿ ಕಾಮಗಾರಿಯ ಭೌತಿಕ ಮತ್ತು ಆರ್ಥಿಕ ಪ್ರಗತಿ ವರದಿಯನ್ನು ತಪ್ಪದೇ ಸಲ್ಲಿಸತಕ್ಕದ್ದು. ಕಾಮಗಾರಿಯ ಗುಣಮಟ್ಟದ ಬಗ್ಗೆ ಇಲಾಖೆಯ ಜವಾಬ್ದಾರಿಯುತ ಅಧಿಕಾರಿಗಳು ಆಗಿಂದ್ದಾಗ್ಗೆ ಪರಿಶೀಲನೆ ನಡೆಸಲು ಆದೇಶಿಸಲಾಗಿದೆ.

(8) ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ ಸಂಖ್ಯೆ ಆಇ 684 ವೆಚ್ಚ-8/ 2007 ದಿನಾಂಕ: 21-08-2007ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1565

**ಕೆ. ಶ್ರೀಕಂಠೇಶ್ವರ**
ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಸಹ ಕಾರ್ಯದರ್ಶಿ (ಯೋಜನೆ)
ಶಿಕ್ಷಣ ಇಲಾಖೆ

**ವಿಷಯ:** ವೈದ್ಯನಾಥನ್ ಸಮಿತಿ ಶಿಫಾರಸ್ಸುಗಳನ್ವಯ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿ ದೈಹಿಕ ಶಿಕ್ಷಣ ಮತ್ತು ಯೋಗ ಶಿಕ್ಷಣವನ್ನು ಅನುಷ್ಠಾನಗೊಳಿಸುವ ಬಗ್ಗೆ.

**ಓದಲಾಗಿದೆ:** 1 ದಿನಾಂಕ 27-04-2007ರಂದು ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು.

2 ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ರವರ ಪತ್ರ ಸಂಖ್ಯೆ:ದೈಶಿ 5 ಸಿಪಿಐ 07 ಇತರೆ /07 ದಿನಾಂಕ: 13-02-2007

**ಪ್ರಸ್ತಾವನೆ:**

(1) ಮೇಲೆ ಓದಲಾದ (1),ರ 27-04-2007ರಂದು ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆದ ಹೊಸ ಯೋಜನಾ ಮಂಜೂರಾತಿ ಸಭೆಯ ನಡವಳಿಯಲ್ಲಿ 2007-08 ನೇ ಸಾಲಿನಿಂದ ವೈದ್ಯನಾಥನ್ ಸಮಿತಿ ಶಿಫಾರಸ್ಸುಗಳನ್ವಯ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿ ದೈಹಿಕ ಶಿಕ್ಷಣ ಮತ್ತು ಯೋಗ ಶಿಕ್ಷಣವನ್ನು ಅನುಷ್ಠಾನಗೊಳಿಸುವ ಬಗ್ಗೆ ಚರ್ಚಿಸಿ ಇದು ಹೊಸ ಕಾರ್ಯಕ್ರಮವಾದ್ದರಿಂದ ಕಡತದ ಮೇಲೆ ಆರ್ಥಿಕ ಇಲಾಖೆಗಳ ಸಹಮತಿಯನ್ನು ಪಡೆಯಲು ಸೂಚಿಸಿತು.

(2) ಮೇಲೆ ಓದಲಾದ (2) ರ ಪತ್ರದಲ್ಲಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರುರವರು, ವೈದ್ಯನಾಥನ್ ಸಮಿತಿ ಶಿಫಾರಸ್ಸುಗಳನ್ವಯ ರಾಜ್ಯದ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಲ್ಲಿ ದೈಹಿಕ ಶಿಕ್ಷಣ ಮತ್ತು ಯೋಗ ಶಿಕ್ಷಣವನ್ನು ಜಾರಿಗೊಳಿಸಲು ಪ್ರಸ್ತಾಪಿಸಲಾಗಿದ್ದು, ಪ್ರಥಮ ಹಂತದಲ್ಲಿ ರಾಜ್ಯದ ಹಿಂದುಳಿದ ಶೈಕ್ಷಣಿಕ ತಾಲ್ಲೂಕುಗಳಲ್ಲಿ ಸದರಿ ಯೋಜನೆಯನ್ನು ಜಾರಿಗೊಳಿಸಲು ಪ್ರಸ್ತಾಪಿಸಿ, ಇದಕ್ಕಾಗಿ 2007-08ನೇ ಸಾಲಿಗೆ ಲೆಕ್ಕಶೀರ್ಷಿಕೆ 2202-80-800-0-24-059(ಯೋಜನೆ)ಯಡಿ 200.00ಲಕ್ಷ ರೂಗಳನ್ನು ಒದಗಿಸಲಾಗಿದೆ ಎಂದು ತಿಳಿಸುತ್ತಾ ಸದರಿ ಮೊತ್ತವನ್ನು ಈ ಕೆಳಕಂಡಂತೆ ಬಳಸಿ ಕೊಳ್ಳಲು ಸರ್ಕಾರದ ಅನುಮೋದನೆಯನ್ನು ಕೋರಿರುತ್ತಾರೆ.

1. ಶೈಕ್ಷಣಿಕವಾಗಿ ಹಿಂದುಳಿದ 50 ತಾಲ್ಲೂಕುಗಳ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿ ಕ್ರೀಡಾ ಸಾಮಗ್ರಿ ಮತ್ತು ಕಾರ್ಯಾಗಾರ ಮತ್ತು ಸ್ಪರ್ಧೆಗಳನ್ನು ಏರ್ಪಡಿಸಲು [ಪ್ರತಿ ತಾಲ್ಲೂಕಿಗೆ 3.00 ಲಕ್ಷ ರೂಗಳಂತೆ] 150.00ಲಕ್ಷರೂಗಳು
2. ಹುದ್ದೆಗಳನ್ನು ಮೇಲ್ದರ್ಜೆಗೇರಿಸುವುದು

| ಕ್ರ.ಸಂ | ಹಾಲಿ ಇರುವ ಹುದ್ದೆ | ಒಟ್ಟು ಹುದ್ದೆ | ಮೇಲ್ದರ್ಜೆಗೇರಿಸಲು ಪ್ರಸ್ತಾಪಿಸಿರುವುದು | ಮೊತ್ತ [ಲಕ್ಷರೂಗಳಲ್ಲಿ] |
|---|---|---|---|---|
| 1. | ಉಪನಿರ್ದೇಶಕರು[ದೈಹಿಕ ಶಿಕ್ಷಣ] [18150-26925] | 1 | ಜಂಟಿ ನಿರ್ದೇಶಕರು [ದೈಹಿಕ ಶಿಕ್ಷಣ] [20025-28275] | 0.065 |
| 2. | ವಿಭಾಗೀಯ ದೈಹಿಕ ಶಿಕ್ಷಣ ಅಧೀಕ್ಷಕರು [14050-25050] | 4 | ವಿಭಾಗೀಯ ಉಪ ನಿರ್ದೇಶಕರು, [ದೈಹಿಕ ಶಿಕ್ಷಣ] [18150-26925] | 0.23 |
| 3. | ಜಿಲ್ಲಾ ಅಧೀಕ್ಷಕರು[ಪ್ರಾಥಮಿಕ ಶಿಕ್ಷಣ] [11400-21600] | 32 | ಜಿಲ್ಲಾ ಅಧಿಕಾರಿಗಳು, ಕ್ರೀಡೆ ಮತ್ತು ದೈಹಿಕ ಶಿಕ್ಷಣ [14050-25050] | 1.48 |
| 4. | ತಾಲ್ಲೂಕು ದೈಹಿಕ ಶಿಕ್ಷಣ ಸಮನ್ವಯಾಧಿಕಾರಿಗಳು [8825-16000] | 202 | ತಾಲ್ಲೂಕು ಕ್ರೀಡೆ ಮತ್ತು ದೈಹಿಕ ಶಿಕ್ಷಣಾಧಿಕಾರಿಗಳು [11400-21600] | 6.79 |

| | | | | |
|---|---|---|---|---|
| | | | ಒಟ್ಟು | 8.565 |

3. ಹೊಸ ಹುದ್ದೆಗಳನ್ನು ಸೃಜಿಸುವುದು

| ಕ್ರ.ಸಂ | ಸೃಜಿಸಬೇಕಾದ ಹೊಸ ಹುದ್ದೆಗಳ ವಿವರ | ಮೊತ್ತ[ಲಕ್ಷರೂಗಳಲ್ಲಿ] |
|---|---|---|
| 1. | ಕಿರಿಯ ಎ ದರ್ಜೆ ಅಧಿಕಾರಿಗಳ ಹುದ್ದೆಗಳ ಸೃಜನೆ [ಆಯುಕ್ತರು, ಸಾ.ಶಿ.ಇ ಕಛೇರಿ, ಕರ್ನಾಟಕ ಸೆಕೆಂಡರಿ ಶಿಕ್ಷಣ ಪರೀಕ್ಷಾ ಮಂಡಳಿ, ಮತ್ತು ಸಂಶೋಧನೆ ಮತ್ತು ತರಬೇತಿ ಇಲಾಖೆಗಳಲ್ಲಿ ತಲಾ ಒಂದು ಹುದ್ದೆಗಳು] [16000 X 3 X 6 ತಿಂಗಳು] | 2.88 |
| 2. | ಶೈಕ್ಷಣಿಕವಾಗಿ ಅತ್ಯಂತ ಹಿಂದುಳಿದಿರುವ ತಾಲ್ಲೂಕು ಗಳಲ್ಲಿ 500ಕ್ಕಿಂತ ಹೆಚ್ಚು ವಿದ್ಯಾರ್ಥಿಗಳಿರುವ ಸರ್ಕಾರಿ ಪ್ರೌಢ ಶಾಲೆಗಳಲ್ಲಿ ಗ್ರೇಡ್-1 ದರ್ಜೆಯ 39 ದೈಹಿಕ ಶಿಕ್ಷಕರ ಹುದ್ದೆಗಳನ್ನು ಸೃಜಿಸಲು [12000 X 39 X 6 ತಿಂಗಳು] | 28.08 |
| 3. | ಶೈಕ್ಷಣಿಕವಾಗಿ ಅತ್ಯಂತ ಹಿಂದುಳಿದಿರುವ ತಾಲ್ಲೂಕು ಗಳಲ್ಲಿ 500ಕ್ಕಿಂತ ಹೆಚ್ಚು ವಿದ್ಯಾರ್ಥಿಗಳಿರುವ ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ 15 ದೈಹಿಕ ಶಿಕ್ಷಣ ಉಪನ್ಯಾಸಕರ ಹುದ್ದೆಗಳನ್ನು ಸೃಜಿಸಲು [15000 X 15 X 6 ತಿಂಗಳು] | 13.50 |

(3) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ: 95:ಯೋಯೋಕ 2007 ಬೆಂಗಳೂರು, ದಿ.30-08-2007**

**[ಇಡಿ: 134 : ಸ್ವೀಮರ(ಯುನಿಕ್) 2007, ದಿನಾಂಕ 30-08-2007]**

(4) 2007-08ನೇ ಸಾಲಿಗೆ ಲೆಕ್ಕಶೀರ್ಷಿಕೆ: 2202-80-800-0-24-059 (ಯೋಜನೆ)ಯಡಿ ಒದಗಿಸಲಾದ 200.00 ಲಕ್ಷ ರೂಗಳ [ಇನ್ನೂರು ಲಕ್ಷ ರೂಪಾಯಿಗಳು ಮಾತ್ರ] ಮಿತಿಯೊಳಗೆ ವೈದ್ಯನಾಥನ್ ಸಮಿತಿ ಶಿಫಾರಸ್ಸುಗಳನ್ವಯ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿ ದೈಹಿಕ ಶಿಕ್ಷಣ ಮತ್ತು ಯೋಗಶಿಕ್ಷಣವನ್ನು ಅನುಷ್ಠಾನಗೊಳಿಸಲು ಈ ಕೆಳಕಂಡ ಷರತ್ತುಗಳನ್ನು ವಿಧಿಸಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಿದೆ.

- ದೈಹಿಕ ಶಿಕ್ಷಣ ಶಿಕ್ಷಕರುಗಳಿಗೆ ಸೇವಾ ನಿರತ ತರಬೇತಿ ನೀಡಿ ಅವರುಗಳೇ ಯೋಗ ಶಿಕ್ಷಣವನ್ನು ಶಾಲೆಗಳಲ್ಲಿ ನೀಡತಕ್ಕದ್ದು.
- ಇದಕ್ಕಾಗಿ ಯಾವುದೇ ಹೆಚ್ಚುವರಿ ಅನುದಾನವನ್ನು ಕೋರಬಾರದು.
- ಇದಕ್ಕೆ ಒದಗಿಸಲಾದ ಮೊತ್ತವನ್ನು ಈ ಕೆಳಕಂಡಂತೆ ಬಳಸಿಕೊಳ್ಳಲು ಅನುಮೋದಿಸಲಾಗಿದೆ.

ಅ. ಶೈಕ್ಷಣಿಕವಾಗಿ ಹಿಂದುಳಿದ 50 ತಾಲ್ಲೂಕುಗಳ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿ ಕ್ರೀಡಾ ಸಾಮಗ್ರಿ ಮತ್ತು ಕಾರ್ಯಾಗಾರ ಮತ್ತು ಸ್ಪರ್ಧೆಗಳನ್ನು ಏರ್ಪಡಿಸಲು [ಪ್ರತಿ ತಾಲ್ಲೂಕಿಗೆ 3.00 ಲಕ್ಷ ರೂಗಳಂತೆ] 147.00ಲಕ್ಷರೂಗಳು

ಆ. ಕೆಳಕಂಡ ಹುದ್ದೆಗಳನ್ನು ಮೇಲ್ದರ್ಜೆಗೇರಿಸಲು ಆದೇಶಿಸಿದೆ.

| ಕ್ರ.ಸಂ | ಹಾಲಿ ಇರುವ ಹುದ್ದೆ | ಒಟ್ಟು ಹುದ್ದೆ | ಮೇಲ್ದರ್ಜೆಗೇರಿಸಲು ಪ್ರಸ್ತಾಪಿಸಿರುವುದು | ಮೊತ್ತ [ಲಕ್ಷರೂಗಳಲ್ಲಿ] |
|---|---|---|---|---|
| 1. | ಉಪನಿರ್ದೇಶಕರು [ದೈಹಿಕಶಿಕ್ಷಣ] [18150-26925] | 1 | ಜಂಟಿ ನಿರ್ದೇಶಕರು [ದೈಹಿಕ ಶಿಕ್ಷಣ] [20025-28275] | 0.065 |
| 2. | ವಿಭಾಗೀಯ ದೈಹಿಕ ಶಿಕ್ಷಣ ಅಧೀಕ್ಷಕರು [14050-25050] | 4 | ವಿಭಾಗೀಯ ಉಪನಿರ್ದೇಶಕರು, [ದೈಹಿಕಶಿಕ್ಷಣ] [18150-26925] | 0.23 |
| 3. | ಜಿಲ್ಲಾ ಅಧೀಕ್ಷಕರು [ಪ್ರಾಥಮಿಕ ಶಿಕ್ಷಣ] [11400-21600] | 32 | ಜಿಲ್ಲಾ ಅಧಿಕಾರಿಗಳು, ಕ್ರೀಡೆ ಮತ್ತು ದೈಹಿಕ ಶಿಕ್ಷಣ [14050-25050] | 1.48 |
| 4. | ತಾಲ್ಲೂಕು ದೈಹಿಕ ಶಿಕ್ಷಣ ಸಮನ್ವಯಾಧಿಕಾರಿಗಳು [8825-16000] | 202 | ತಾಲ್ಲೂಕು ಕ್ರೀಡೆ ಮತ್ತು ದೈಹಿಕ ಶಿಕ್ಷಣಾಧಿಕಾರಿಗಳು [11400-21600] | 6.765 |

| | | | | |
|---|---|---|---|---|
| | | | ಒಟ್ಟು | 8.54 |

ಇ. ಈ ಕೆಳಕಂಡ ಹುದ್ದೆಗಳನ್ನು ಸೃಜಿಸಲು ಆದೇಶಿಸಿದೆ.

| ಕ್ರ.ಸಂ | ಸೃಜಿಸಬೇಕಾದ ಹೊಸ ಹುದ್ದೆಗಳ ವಿವರ | ಮೊತ್ತ [ಲಕ್ಷರೂಗಳಲ್ಲಿ] |
|---|---|---|
| 1. | ಕಿರಿಯ ಎ ದರ್ಜೆ ಅಧಿಕಾರಿಗಳ ಹುದ್ದೆಗಳ ಸೃಜನೆ [ಆಯುಕ್ತರು, ಸಾ.ಶಿ.ಇ ಕಛೇರಿ, ಕರ್ನಾಟಕ ಸೆಕೆಂಡರಿ ಶಿಕ್ಷಣ ಪರೀಕ್ಷಾ ಮಂಡಳಿ, ಮತ್ತು ಸಂಶೋಧನೆ ಮತ್ತು ತರಬೇತಿ ಇಲಾಖೆಗಳಲ್ಲಿ ತಲಾ ಒಂದು ಹುದ್ದೆಗಳು] [16000 x 3 x 6 ತಿಂಗಳು] | 2.88 |
| 2. | ಶೈಕ್ಷಣಿಕವಾಗಿ ಅತ್ಯಂತ ಹಿಂದುಳಿದಿರುವ ತಾಲ್ಲೂಕುಗಳಲ್ಲಿ 500ಕ್ಕಿಂತ ಹೆಚ್ಚು ವಿದ್ಯಾರ್ಥಿಗಳಿರುವ ಸರ್ಕಾರಿ ಪ್ರೌಢ ಶಾಲೆಗಳಲ್ಲಿ ಗ್ರೇಡ್-1 ದರ್ಜೆಯ 39 ದೈಹಿಕ ಶಿಕ್ಷಕರ ಹುದ್ದೆಗಳನ್ನು ಸೃಜಿಸಲು [12000 x 39 x 6 ತಿಂಗಳು] | 28.08 |
| 3. | ಶೈಕ್ಷಣಿಕವಾಗಿ ಅತ್ಯಂತ ಹಿಂದುಳಿದಿರುವ ತಾಲ್ಲೂಕುಗಳಲ್ಲಿ 500ಕ್ಕಿಂತ ಹೆಚ್ಚು ವಿದ್ಯಾರ್ಥಿಗಳಿರುವ ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ 15 ದೈಹಿಕ ಶಿಕ್ಷಣ ಉಪನ್ಯಾಸಕರ ಹುದ್ದೆಗಳನ್ನು ಸೃಜಿಸಲು [15000 x 15 x 6 ತಿಂಗಳು] | 13.50 |
| **ಒಟ್ಟು ಮೊತ್ತ** | | **44.46** |

ಮೇಲೆ ಮೇಲ್ದರ್ಜೆಗೇರಿಸಿದ ಮತ್ತು ಹೊಸದಾಗಿ ಸೃಜಿಸಿದ ಹುದ್ದೆಗಳನ್ನು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಮತ್ತು ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆರವರು ನಿಯಮಾನುಸಾರ ಭರ್ತಿ ಮಾಡತಕ್ಕದ್ದು.

ಸದರಿ ಆದೇಶವನ್ನು ಯೋಜನಾ ಇಲಾಖೆ ಮತ್ತು ಆರ್ಥಿಕ ಇಲಾಖೆಗಳು ಕ್ರಮವಾಗಿ ತಮ್ಮ ಅನಧಿಕೃತ ಟಿಪ್ಪಣಿ ಸಂಖ್ಯೆ ಯೋಇ: 70: ಜಶ: 2007 ದಿನಾಂಕ: 07-06-207 ಮತ್ತು ಆ.ಇ: 627: ವೆ-8/07/ ದಿನಾಂಕ: 10-08-2007ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1693

**ಕೆ. ಶ್ರೀಕಂಠೇಶ್ವರ**
ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಸಹ ಕಾರ್ಯದರ್ಶಿ (ಯೋಜನೆ)
ಶಿಕ್ಷಣ ಇಲಾಖೆ

**ವಿಷಯ:** 2007-08ನೇ ಸಾಲಿಗೆ ಮುಂದುವರೆದ ಯೋಜನೆಗಳಲ್ಲಿ ಕಾಲೇಜು ಶಿಕ್ಷಣ ಇಲಾಖೆಯಲ್ಲಿ ಬೋಧಕ ಮತ್ತು ಬೋಧಕೇತರ ಹುದ್ದೆಗಳನ್ನು ಸೃಜಿಸುವ ಬಗ್ಗೆ

**ಓದಲಾಗಿದೆ:** 1 ಸರ್ಕಾರದ ಆದೇಶ ಸಂಖ್ಯೆ: ಇಡಿ: 144 ಯೋಯೋಕ 2007 ದಿನಾಂಕ: 27-04-2007.

2 ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ರವರ ಟಿಪ್ಪಣಿ ಸಂಖ್ಯೆ ಕಾ.ಶಿ. ಇ/-ಯೋಜನೆ-56-06-07.

**ಪ್ರಸ್ತಾವನೆ:**

(1) ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಮುಂದುವರಿಕೆ ಕಾರ್ಯಕ್ರಮಗಳ ಹೆಚ್ಚುವರಿ ಘಟಕಗಳ ಕಾರ್ಯಕ್ರಮಗಳಡಿ ಸ್ನಾತಕೋತ್ತರ ಕೋರ್ಸ್‌ಗಳಿಗೆ ಸಂಬಂಧಿಸಿದಂತೆ 393 ಹುದ್ದೆಗಳಿಗೆ ಮಂಜೂರಾತಿ ನೀಡಲಾಗಿದೆ.

(2) ಮೇಲೆ ಓದಲಾದ (2)ರ ಟಿಪ್ಪಣಿಯಲ್ಲಿ ಅಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರುರವರು, 2007-08ನೇ ಸಾಲಿಗೆ ಸರ್ಕಾರದ ಆದೇಶ ಸಂಖ್ಯೆ ಇಡಿ: 231: ಯುಎನ್‌ಇ:2006, ದಿನಾಂಕ: 23-01-2007ರಲ್ಲಿ ಕಾಲೇಜು ಶಿಕ್ಷಣ ಇಲಾಖಾ ವ್ಯಾಪ್ತಿಯ 28 ಕಾಲೇಜುಗಳಿಗೆ 64 ಸ್ನಾತಕೋತ್ತರ ಕೋರ್ಸ್‌ಗಳು ಮಂಜೂರಾಗಿದ್ದು, ಅದಕ್ಕೆ ಸಂಬಂಧಿಸಿದಂತೆ 180 ಉಪನ್ಯಾಸಕರು ಹಾಗೂ 84 ಬೋಧಕೇತರ ಹುದ್ದೆಗಳಿಗೆ ಮಂಜೂರಾತಿ ಆದೇಶ ನೀಡುವಂತೆ ಕೋರಿರುತ್ತಾರೆ.

(3) ಸದರಿ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ: 144 :ಯೋಯೋಕ 2007 (ಭಾಗ) ಬೆಂಗಳೂರು, ದಿ.04-09-2007**
**[ಇಡಿ: 135 : ಸ್ಪೀಮರ (ಯುನಿಕ್) 2007, ದಿನಾಂಕ 04-09-2007]**

(4) ಕಾಲೇಜು ಶಿಕ್ಷಣ ಇಲಾಖಾ ವ್ಯಾಪ್ತಿಯ 28 ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಿಗೆ ಮಂಜೂರಾಗಿರುವ 64 ಸ್ನಾತಕೋತ್ತರ ಕೋರ್ಸ್‌ಗಳಿಗೆ ಸಂಬಂಧಿಸಿದಂತೆ, 2007–08ನೇ ಸಾಲಿಗೆ ಲೆಕ್ಕಶೀರ್ಷಿಕೆ 2202–03–103–2–01 (ಯೋಜನೆ)ಯಡಿ ಒದಗಿಸಲಾಗಿರುವ ಅನುದಾನದ ಮಿತಿಯಲ್ಲಿಯೇ ಅಗತ್ಯವಿರುವ 180 (ಒಂದು ನೂರಾ ಎಂಭತ್ತು ಮಾತ್ರ) ಉಪನ್ಯಾಸಕರ ಹುದ್ದೆಗಳನ್ನು ಸೃಜಿಸಲು ಹಾಗೂ ನಿಯಮಾನುಸಾರ ಭರ್ತಿ ಮಾಡಲು ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ ಬೆಂಗಳೂರುರವರಿಗೆ ಅನುಮತಿ ನೀಡಲಾಗಿದೆ.

(5) ಸದರಿ ಆದೇಶವನ್ನು ಆರ್ಥಿಕ ಇಲಾಖೆ ಮತ್ತು ಯೋಜನಾ ಇಲಾಖೆಗಳು ತಮ್ಮ ಅನಧಿಕೃತ ಟಿಪ್ಪಣಿ ಸಂಖ್ಯೆ: ಆ.ಇ.: 571:ವೆಚ್ಚ–8,2007, ದಿನಾಂಕ: 07–07–2007ರಲ್ಲಿ ಹಾಗೂ ಸಂಖ್ಯೆ: ಯೋಇ:138:ಜಶ:2007, ದಿನಾಂಕ: 30–08–2007ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1695

**ಕೆ. ಶ್ರೀಕಂಠೇಶ್ವರ**

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ

ಸರ್ಕಾರದ ಸಹ ಕಾರ್ಯದರ್ಶಿ (ಯೋಜನೆ)

ಶಿಕ್ಷಣ ಇಲಾಖೆ

**ವಿಷಯ:** ಕೊಪ್ಪಳ ಜಿಲ್ಲೆ ಯಲ್ಬುರ್ಗಾ ಪ್ರಥಮ ದರ್ಜೆ ಕಾಲೇಜಿನ ಕೊಠಡಿಗಳನ್ನು ಶ್ರೀ ಸಂಸ್ಥಾನ ಹಿರೇಮಠ ವಿದ್ಯಾವರ್ಧಕ ಸಂಘ ಇವರಿಗೆ ಬಾಡಿಗೆ ಆಧಾರದ ಮೇಲೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1 ಸರ್ಕಾರದ ಆದೇಶ ಸಂಖ್ಯೆ: ಇಡಿ: 648 ಯೋಸಕ 2003 ದಿನಾಂಕ: 23–12–2003.
2 ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ ಕಾ.ಶಿ.ಇ–46–ಯೋಜನೆ–87–88/ ದಿನಾಂಕ 23–08–2007.

**ಪ್ರಸ್ತಾವನೆ:**

(1) ಮೇಲೆ ಓದಲಾದ (1)ರ ಸರ್ಕಾರದ ಪತ್ರದಲ್ಲಿ ಕೊಪ್ಪಳ ಜಿಲ್ಲೆ ಯಲ್ಬುರ್ಗಾ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಕೊಠಡಿಗಳನ್ನು ಶ್ರೀ ಸಂಸ್ಥಾನ ಹಿರೇಮಠ ವಿದ್ಯಾವರ್ಧಕ ಸಂಘ ಇವರಿಗೆ ಮಾಸಿಕ ಬಾಡಿಗೆ ರೂ. 7,710.00 ಆಧಾರದ ಮೇಲೆ ನೀಡಲು ಅನುಮತಿ ನೀಡಲಾಗಿತ್ತು.

(2) ಮೇಲೆ ಓದಲಾದ (2)ರ ಪತ್ರದಲ್ಲಿ ಅಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರುರವರು ಮೇಲ್ಕಂಡ ಸಂಸ್ಥೆಗೆ ನೀಡಿದ್ದ ಬಾಡಿಗೆ ಅವಧಿಯು ದಿನಾಂಕ: 19–12–2006ಕ್ಕೆ ಪೂರ್ಣಗೊಂಡಿದ್ದು, ಜೂನ್ 2007ರ ವರೆಗೆ ಒಟ್ಟು 2,77,560/–ಗಳನ್ನು ಬಾಡಿಗೆ ನೀಡಿರುವುದಾಗಿ ತಿಳಿಸಿ ಅಧ್ಯಕ್ಷರು, ಶ್ರೀ ಸಂಸ್ಥಾನ ಹಿರೇಮಠ ವಿದ್ಯಾವರ್ಧಕ ಸಂಘ ಇವರ ಕೋರಿಕೆಯಂತೆ ಈ ಅವಧಿಯನ್ನು ದಿನಾಂಕ: 31–12–2007ರವರೆಗೆ ಹಿಂದೆ ನಿಗಧಿಪಡಿಸಿದ್ದ ಷರತ್ತುಗಳ ಆಧಾರದ ಮೇಲೆ ಮುಂದುವರೆಸುವ ಬಗ್ಗೆ ಸರ್ಕಾರವನ್ನು ಕೋರಿರುತ್ತಾರೆ.

(3) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ: 356 :ಯೋಸಕ 2007 ಬೆಂಗಳೂರು, ದಿ. 28–08–2007**

**[ಇಡಿ: 128 : ಸ್ಕೀಮರ (ಯುನಿಕ್) 2007, ದಿನಾಂಕ 28–08–2007]**

(4) ಕೊಪ್ಪಳ ಜಿಲ್ಲೆ ಯಲ್ಬುರ್ಗಾ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಕೊಠಡಿಗಳನ್ನು ಶ್ರೀ ಸಂಸ್ಥಾನ ಹಿರೇಮಠ ವಿದ್ಯಾವರ್ಧಕ ಸಂಘ ಇವರಿಗೆ ಮಾಸಿಕ ಬಾಡಿಗೆ ರೂ. 7,710.00 ಆಧಾರದ ಮೇಲೆ ನೀಡಿದ್ದ ಅವಧಿಯನ್ನು ದಿನಾಂಕ: 31–12–2007 ರವರೆಗೆ ಈ ಕೆಳಕಂಡ ಷರತ್ತುಗಳನ್ನು ವಿಧಿಸಿ ಮುಂದುವರೆಸಲು ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ ಬೆಂಗಳೂರುರವರಿಗೆ ಅನುಮತಿ ನೀಡಿದೆ.

**ಷರತ್ತುಗಳು:–**

- ಬಾಡಿಗೆಗೆ ನೀಡುವ ಕೊಠಡಿಗಳು ವಿದ್ಯುತ್ ಹಾಗೂ ನೀರಿನ ಸಂಪರ್ಕಕ್ಕೆ ಪ್ರತ್ಯೇಕ ವಿದ್ಯುತ್ ಮೀಟರ್‌ಗಳನ್ನು ಅಳವಡಿಸಿಕೊಂಡು ಪ್ರತಿ ಮಾಹೆ ಬರುವ ಬಿಲ್ಲುಗಳನ್ನು ಸಂಸ್ಥೆಯವರೇ ಭರಿಸತಕ್ಕದ್ದು.
- ಕಾಲೇಜಿನ ವಿದ್ಯಾರ್ಥಿಗಳಿಗೆ ಯಾವುದೇ ತೊಂದರೆಯಾಗದಂತೆ ಎಚ್ಚರಿಕೆ ವಹಿಸತಕ್ಕದ್ದು.
- 1–08–2007ರಿಂದ ಅನ್ವಯವಾಗುವಂತೆ ಲೋಕೋಪಯೋಗಿ ಇಲಾಖೆಯು ನಿಗಧಿಪಡಿಸುವ ಹೊಸದರಗಳಲ್ಲಿ ಬಾಡಿಗೆ ನಿಗಧಿಪಡಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1586

**ಕೆ. ಶ್ರೀಕಂಠೇಶ್ವರ**

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ

ಸರ್ಕಾರದ ಸಹ ಕಾರ್ಯದರ್ಶಿ (ಯೋಜನೆ)

ಶಿಕ್ಷಣ ಇಲಾಖೆ

**ವಿಷಯ:** 2007–08ನೇ ಸಾಲಿನಲ್ಲಿ ಬಳ್ಳಾರಿ ಜಿಲ್ಲೆ ಹೂವಿನ ಹಡಗಲಿಯಲ್ಲಿ ಪ್ರಾರಂಭಿಸಲಾಗಿರುವ ನೂತನ

ಸರ್ಕಾರಿ ಇಂಜಿನಿಯರಿಂಗ್ ಕಾಲೇಜು ಕಟ್ಟಡದ ನಿರ್ಮಾಣ ಕಾಮಗಾರಿಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಮಂಜೂರಾತಿ ನೀಡುವ ಕುರಿತು.

**ಓದಲಾಗಿದೆ:**
1 ಸರ್ಕಾರದ ಆದೇಶ ಸಂಖ್ಯೆ: ಇಡಿ: 175 ಯೋಯೋಕ 2007 ದಿನಾಂಕ: 01-06-2007.
2 ಸರ್ಕಾರದ ಆದೇಶ ಸಂಖ್ಯೆ: ಇಡಿ 189 ಯೋಸಕ 2007 ದಿನಾಂಕ: 08-06-2007.
3. ಸರ್ಕಾರದ ಆದೇಶ ಸಂಖ್ಯೆ: ಇಡಿ: 175 ಯೋಯೋಕ 2007 ದಿನಾಂಕ: 13-07-2007.
4. ಸರ್ಕಾರದ ಆದೇಶ ಸಂಖ್ಯೆ: ಇಡಿ ಟಿಇಸಿ 2007, ದಿನಾಂಕ: 12-07-2007.
5. ಮುಖ್ಯ ಅಭಿಯಂತರರು, ಸಂಪರ್ಕ ಮತ್ತು ಕಟ್ಟಡ (ಉತ್ತರ) ಧಾರವಾಡ ರವರ ಪತ್ರ ಸಂಖ್ಯೆ: ಮುಇಂ (ಉ): ತಾಸ-:ಸ ಆ-1: ಹವಿ 07-08 ದಿನಾಂಕ: 23-07-2007.

**ಪ್ರಸ್ತಾವನೆ:**

(1) ಮೇಲೆ ಓದಲಾದ (1), (2) ಮತ್ತು (3)ರ ಸರ್ಕಾರದ ಆದೇಶಗಳಲ್ಲಿ ಕ್ರಮವಾಗಿ 2007-08ನೇ ಸಾಲಿನಲ್ಲಿ ಕೆ.ಆರ್. ಪೇಟೆ, ಹಾಸನ, ಚಾಮರಾಜನಗರ ನೂತನವಾಗಿ ಪ್ರಾರಂಭಿಸಲಾದ ಇಂಜಿನಿಯರಿಂಗ್ ಕಾಲೇಜುಗಳ, ಬೆಂಗಳೂರಿನ ಎಸ್.ಕೆ.ಎಸ್.ಜೆ.ಟಿ ಕಟ್ಟಡಗಳ ನಿರ್ಮಾಣದ ಅಂದಾಜು ಪಟ್ಟಿಗಳಿಗೆ ಹಾಗೂ ರಾಮನಗರಗಳಲ್ಲಿ ನೂತನವಾಗಿ ಪ್ರಾರಂಭಿಸಲಾದ ಇಂಜಿನಿಯರಿಂಗ್ ಕಾಲೇಜು ಕಟ್ಟಡ ನಿರ್ಮಾಣಕ್ಕೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ. ಮೇಲೆ ಓದಲಾದ (4)ರ ಸರ್ಕಾರದ ಆದೇಶದಲ್ಲಿ ಬಳ್ಳಾರಿ ಜಿಲ್ಲೆ ಹೂವಿನ ಹಡಗಲಿಯಲ್ಲಿ ಹೊಸ ಇಂಜಿನಿಯರಿಂಗ್ ಕಾಲೇಜನ್ನು 2007-08ನೇ ಸಾಲಿಗೆ ಪ್ರಾರಂಭಿಸಲು ಮಂಜೂರಾತಿ ನೀಡಲಾಗಿದೆ. ಮೇಲೆ ಓದಲಾದ (5)ರ ಪತ್ರದಲ್ಲಿ ಬಳ್ಳಾರಿ ಜಿಲ್ಲೆ, ಹೂವಿನ ಹಡಗಲಿಯಲ್ಲಿ ನೂತನವಾಗಿ ಪ್ರಾರಂಭಿಸಲಾದ ಇಂಜಿನಿಯರಿಂಗ್ ಕಾಲೇಜಿನ ಕಟ್ಟಡ ನಿರ್ಮಾಣ ಕಾಮಗಾರಿಯ 30.00 ಕೋಟಿ ರೂ.ಗಳ (ಮೂವತ್ತು ಕೋಟಿಗಳು ಮಾತ್ರ) ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಮುಖ್ಯ ಅಭಿಯಂತರರು, ಸಂಪರ್ಕ ಮತ್ತು ಕಟ್ಟಡ (ಉತ್ತರ), ಧಾರವಾಡರವರು ಸರ್ಕಾರದ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ, ಬೆಂಗಳೂರುರವರ ಮೂಲಕ ಶಿಕ್ಷಣ ಇಲಾಖೆಯನ್ನು ಕೋರಿರುತ್ತಾರೆ.

(2) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ: 175 :ಯೋಯೋಕ 2007 ಬೆಂಗಳೂರು, ದಿ.21-08-2007**

**[ಇಡಿ: 119 : ಸ್ಕೀಮರ (ಯುನಿಕ್) 2007, ದಿನಾಂಕ 18-08-2007]**

(3) 2007-08ನೇ ಸಾಲಿಗೆ ಬಳ್ಳಾರಿ ಜಿಲ್ಲೆ ಹೂವಿನ ಹಡಗಲಿಯಲ್ಲಿ ಪ್ರಾರಂಭಿಸಲಾದ ಹೊಸ ಸರ್ಕಾರಿ ಇಂಜಿನಿಯರಿಂಗ್ ಕಾಲೇಜಿಗೆ ಕಟ್ಟಡ ನಿರ್ಮಾಣ ಕಾಮಗಾರಿಗೆ ಸಂಬಂಧಿಸಿದಂತೆ 2007-08ನೇ ಸಾಲಿಗೆ ಲೆಕ್ಕಶೀರ್ಷಿಕೆ 4202-02-104-1-03-386ರಡಿ ಅನುದಾನವನ್ನು ಒದಗಿಸಿರುವುದರಿಂದ 30.00 ಕೋಟಿ ರೂಗಳ (ಮೂವತ್ತು ಕೋಟಿ ರೂಪಾಯಿಗಳು ಮಾತ್ರ) ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಲು ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಿದೆ.

(4) 2007-08ನೇ ಸಾಲಿಗೆ ಲೆಕ್ಕ ಶೀರ್ಷಿಕೆ: 4202-02-104-1-03-386 (ಯೋಜನೆ) ಯಡಿಯಲ್ಲಿ 50.00 ಕೋಟಿ ರೂಗಳನ್ನು ಒದಗಿಸಿದ್ದು, ಅದರ ಮಿತಿಯೊಳಗೆ ಮೇಲ್ಕಂಡ ಅಂದಾಜಿನ ಶೇ 30ರಷ್ಟು ವೆಚ್ಚ ಭರಿಸಿ ಸದರಿ ಕಾಲೇಜಿನ ಕಟ್ಟಡ ನಿರ್ಮಾಣ ಕಾಮಗಾರಿಯನ್ನು ಪ್ರಾರಂಭಿಸಲು ಅನುಮತಿ ನೀಡಲಾಗಿದೆ.

(5) ಪ್ರತಿ ಮಾಹೆಯೂ ಎಂ.ಎಂ.ಆರ್. ವರದಿಯಲ್ಲಿ ಕಾಮಗಾರಿಯ ಭೌತಿಕ ಮತ್ತು ಆರ್ಥಿಕ ಪ್ರಗತಿ ವರದಿಯನ್ನು ತಪ್ಪದೇ ಸಲ್ಲಿಸತಕ್ಕದ್ದು. ಕಾಮಗಾರಿಯ ಗುಣಮಟ್ಟದ ಬಗ್ಗೆ ಇಲಾಖೆಯ ಜವಾಬ್ದಾರಿಯುತ ಅಧಿಕಾರಿಗಳು ಆಗಿಂದ್ದಾಗ್ಗೆ ಪರಿಶೀಲನೆ ನಡೆಸಲು ಆದೇಶಿಸಲಾಗಿದೆ.

(6) ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ. ಸಂಖ್ಯೆ ಲೋಇ 246 ಆಕೋ-3/2007 ದಿನಾಂಕ 17-05-2007ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1566

**ಕೆ. ಶ್ರೀಕಂಠೇಶ್ವರ**
ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಸಹ ಕಾರ್ಯದರ್ಶಿ (ಯೋಜನೆ)
ಶಿಕ್ಷಣ ಇಲಾಖೆ

**ವಿಷಯ:** ಸರ್ಕಾರಿ ಪ್ರಥಮದರ್ಜೆ ಕಾಲೇಜು ಕಟ್ಟಡಗಳ ಕಾಮಗಾರಿಗಳಿಗೆ ಆಡಳಿತಾತ್ಮಕ ಮಂಜೂರಾತಿ ನೀಡುವ ಕುರಿತು.

**ಓದಲಾಗಿದೆ:** ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ: ಕಾಶಿಇ-59/ ಯೋಜನೆ/2006-07/ ದಿ: 02.3.2007.

**ಪ್ರಸ್ತಾವನೆ:**

(1) ಮೇಲೆ (1)ರಲ್ಲಿ ಓದಲಾದ ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರದಲ್ಲಿ ಮಂಡ್ಯ ಜಿಲ್ಲೆಯ ಪಾಂಡವಪುರ, ಧಾರವಾಡ ಜಿಲ್ಲೆಯ ಕಲಘಟಗಿ, ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ತಾಲ್ಲೂಕಿನ ಉದಯಪುರ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆ ರಾಮನಗರ ತಾಲ್ಲೂಕು ಬಿಡದಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಕಟ್ಟಡ ನಿರ್ಮಾಣದ ಅಂದಾಜು ಪಟ್ಟಿ ಮತ್ತು ನಕ್ಷೆಯನ್ನು (ಕ್ರಮವಾಗಿ 60.00 ಲಕ್ಷ ರೂ. 75.00 ಲಕ್ಷ ರೂ. 125.00 ಲಕ್ಷ ರೂ ಮತ್ತು 100.00 ಲಕ್ಷ ರೂ.ಗಳಿಗೆ) ಸಲ್ಲಿಸಿ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಕೋರಿರುತ್ತಾರೆ. 2007-08ನೇ ಸಾಲಿಗೆ ಮೇಲ್ಕಂಡ ಕಾಮಗಾರಿಗಳಿಗೆ ಅಪೆಂಡಿಕ್ಸ್-ಇ ನಲ್ಲಿ ಶೇ. 30ರಷ್ಟು ಅನುದಾನ ಒದಗಿಸಲಾಗಿದೆ.

(2) ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ: 359 :ಯೋಸಕ 2007 ಬೆಂಗಳೂರು ದಿ.21-08-2007**

**[ಇಡಿ: 121 : ಸ್ವೀಮರ (ಯುನಿಕ್) 2007, ದಿನಾಂಕ 21-8-2007]**

2007-08ನೇ ಸಾಲಿಗೆ ಅಪೆಂಡಿಕ್ಸ್-ಇನಡಿ ಒದಗಿಸಲಾಗಿರುವ ಈ ಕೆಳಕಂಡ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಿಗೆ ಅವುಗಳ ಮುಂದೆ ತೋರಿಸಿರುವ ಅಂದಾಜು ಮೊತ್ತಕ್ಕೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಲು ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಿದೆ.

| ಕ್ರಮ ಸಂಖ್ಯೆ | ಕಾಮಗಾರಿಯ ವಿವರ | ಅಂದಾಜು ಮೊತ್ತ | 2007-08ನೇ ಸಾಲಿಗೆ ಒದಗಿಸಲಾದ ಮೊತ್ತ |
|---|---|---|---|
| 1. | ಮಂಡ್ಯ ಜಿಲ್ಲೆ ಪಾಂಡವಪುರ ಸ.ಪ್ರ.ದ ಕಾಲೇಜು ಕಟ್ಟಡ ನಿರ್ಮಾಣ | 60.00 | 18.00 |
| 2. | ಧಾರವಾಡ ಜಿಲ್ಲೆ ಕಲಘಟಗಿ ಸ.ಪ್ರ.ದ ಕಾಲೇಜು ಕಟ್ಟಡ ನಿರ್ಮಾಣ | 75.00 | 22.50 |
| 3. | ಹಾಸನ ಜಿ, ಚನ್ನರಾಯಪಟ್ಟಣ ತಾ: ಉದಯಪುರ ಸ.ಪ್ರ.ದ ಕಾಲೇಜು ಕಟ್ಟಡ ನಿರ್ಮಾಣ | 125.00 | 37.50 |
| 4. | ಬೆಂ.ಗ್ರಾ. ಜಿಲ್ಲೆ ರಾಮನಗರ ತಾ. ಬಿಡದಿ ಸ.ಪ್ರ.ದ ಕಾಲೇಜು ಕಟ್ಟಡ ನಿರ್ಮಾಣ | 100.00 | 30.00 |

2007-08ನೇ ಸಾಲಿಗೆ ಅಪೆಂಡಿಕ್ಸ್-ಇನಲ್ಲಿ ಸದರಿ ಕಾಲೇಜುಗಳ ಕಟ್ಟಡ ನಿರ್ಮಾಣಕ್ಕೆ ಒದಗಿಸಿಕೊಂಡಿರುವ ಮೊತ್ತಕ್ಕೆ ಸೀಮಿತಗೊಳಿಸಿ ಕಾಮಗಾರಿಯನ್ನು ಪ್ರಾರಂಭಿಸಲು ಅನುಮತಿ ನೀಡಲಾಗಿದೆ.

ಪ್ರತಿ ಮಾಹೆಯೂ ಎಂ.ಎಂ.ಆರ್. ವರದಿಯಲ್ಲಿ ಕಾಮಗಾರಿಯ ಭೌತಿಕ ಮತ್ತು ಆರ್ಥಿಕ ಪ್ರಗತಿ ವರದಿಯನ್ನು ತಪ್ಪದೇ ಸಲ್ಲಿಸತಕ್ಕದ್ದು. ಕಾಮಗಾರಿಯ ಗುಣಮಟ್ಟದ ಬಗ್ಗೆ ಇಲಾಖೆಯ ಜವಾಬ್ದಾರಿಯುತ ಅಧಿಕಾರಿಗಳು ಆಗಿಂದ್ದಾಗ್ಗೆ ಪರಿಶೀಲನೆ ನಡೆಸಲು ಅದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1567

**ಕೆ. ಶ್ರೀಕಂಠೇಶ್ವರ**

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ

ಸರ್ಕಾರದ ಸಹ ಕಾರ್ಯದರ್ಶಿ (ಯೋಜನೆ)

ಶಿಕ್ಷಣ ಇಲಾಖೆ

**ವಿಷಯ:** 2007-08ನೇ ಸಾಲಿಗೆ ಸಿ.ಎಂ.ಡಿ.ಆರ್ ಸಂಸ್ಥೆ ಧಾರವಾಡ ಇವರಿಗೆ ರೂ. 5.00 ಲಕ್ಷಗಳನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಸಿ.ಎಂ.ಡಿ.ಆರ್ ಧಾರವಾಡ ರವರ ಪತ್ರ ಸಂಖ್ಯೆ ಸಿ.ಎಂ.ಡಿ.ಆರ್./ಡಿ/398/07 ದಿನಾಂಕ: 28-06-2007.

**ಪ್ರಸ್ತಾವನೆ:**

(1) ಮೇಲೆ ಓದಲಾದ ನಿರ್ದೇಶಕರು, ಸಿ.ಎಂ.ಡಿ.ಆರ್. ಸಂಸ್ಥೆ, ಧಾರವಾಡ ರವರ ಪತ್ರದಲ್ಲಿ 2007-08ನೇ ಸಾಲಿಗೆ ಸದರಿ ಸಂಸ್ಥೆಯ ಅಭಿವೃದ್ಧಿ ಮತ್ತು ಸುವ್ಯವಸ್ಥೆಗಾಗಿ ಒದಗಿಸಿರುವ ಅನುದಾನವನ್ನು ಬಿಡುಗಡೆ ಮಾಡಬೇಕೆಂದು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

(2) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ: 84 :ಯೋಯೋಕ 2007 ಬೆಂಗಳೂರು, ದಿ.24-08-2007**

**[ಇಡಿ: 124 : ಸ್ವೀಮರ (ಯುನಿಕ್) 2007, ದಿನಾಂಕ 24-08-2007]**

(3) ಧಾರವಾಡದ ಸಿ.ಎಂ.ಡಿ.ಆರ್. ಸಂಸ್ಥೆಯ ಅಭಿವೃದ್ಧಿ ಮತ್ತು ಸುವ್ಯವಸ್ಥೆಗಾಗಿ 2007-08ನೇ ಸಾಲಿಗೆ ಲೆಕ್ಕಶೀರ್ಷಿಕೆ 2202-03-112-0-11-059ರಡಿ ಒದಗಿಸಿರುವ 5.00 ಲಕ್ಷ ರೂ.ಗಳನ್ನು (ಐದು ಲಕ್ಷ ರೂಪಾಯಿಗಳು ಮಾತ್ರ) ಬಳಕೆ ಪ್ರಮಾಣ ಪತ್ರವನ್ನು ಒದಗಿಸಿರುವ ಷರತ್ತನ್ನು ವಿಧಿಸಿ ನಿರ್ದೇಶಕರು, ಸಿ.ಎಂ.ಡಿ.ಆರ್. ಸಂಸ್ಥೆ, ಧಾರವಾಡ ಇವರಿಗೆ

ಬಿಡುಗಡೆ ಮಾಡಲು ಹಾಗೂ ಸಂಸ್ಥೆಯವರು ಸಲ್ಲಿಸುವ ಬಿಲ್ಲುಗಳಿಗೆ ಮೇಲು ಸಹಿ ಮಾಡುವ ಅಧಿಕಾರವನ್ನು ಉಪ ಕಾರ್ಯದರ್ಶಿ (ವಿಶ್ವ ವಿದ್ಯಾಲಯ) ಶಿಕ್ಷಣ ಇಲಾಖೆ ರವರಿಗೆ ನೀಡಲಾಗಿದೆ.

(4) ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ. ಸಂಖ್ಯೆ ಆಇ 174 ವೆಚ್ಚ-8/2007 ದಿನಾಂಕ: 21-06-2007ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1694

**ಕೆ. ಶ್ರೀಕಂಠೇಶ್ವರ**

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ

ಸರ್ಕಾರದ ಸಹ ಕಾರ್ಯದರ್ಶಿ (ಯೋಜನೆ)

ಶಿಕ್ಷಣ ಇಲಾಖೆ

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಎಸ್.ಎನ್. ಶೆಲ್ವನಾರಾಯಣ, ವಿಶಿಷ್ಠಾದ್ವೈತ ಪಂಡಿತರು, ಶ್ರೀ ಉಮಾಕಾಂತ ಭಟ್, ಪ್ರಾಚೀನ ನ್ಯಾಯ ಪಂಡಿತರು ಮತ್ತು ಶ್ರೀ ಕೈಂಕರ್ಯರಂಗರಾಜನ್, ದಿವ್ಯ ಪ್ರಬಂಧ ಉಪಾದ್ಯಾಯರು ಸರ್ಕಾರಿ ಸಂಸ್ಕೃತ ಕಾಲೇಜು, ಮೇಲುಕೋಟೆ ಇವರುಗಳಿಗೆ ಸ್ವಯಂ ಚಾಲಿತ ವೇತನ ಶ್ರೇಣಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1 ದಿನಾಂಕ: 11-01-1998 ಮತ್ತು 13.04.1999 ಸಂಖ್ಯೆ: ಕಂಇ 90 ಮುಸೇವಿ 1997ರ ಸರ್ಕಾರಿ ಆದೇಶಗಳು.
2 ದಿನಾಂಕ: 16-11-2003, 08-04-2004, 12-08-2005 ಮತ್ತು 14-09-2006 ಸಂಖ್ಯೆ: ಸಿಬ್ಬಂದಿ.2.ಸಿಆರ್.671/2003-04ರ ಧಾರ್ಮಿಕ ದತ್ತಿ ಆಯುಕ್ತರ ಪತ್ರಗಳು.
3. ದಿನಾಂಕ: 30-05-2006 ಸಂಖ್ಯೆ: ಸಿಬ್ಬಂದಿ.2.ಸಿಆರ್.671/2003-04ರ ಧಾರ್ಮಿಕ ದತ್ತಿ ಆಯುಕ್ತರ ಪತ್ರ.

**ಪ್ರಸ್ತಾವನೆ:**

ಮೇಲೆ (2) ಮತ್ತು (3)ರಲ್ಲಿ ಓದಲಾದ ಧಾರ್ಮಿಕ ದತ್ತಿ ಆಯುಕ್ತರು ಪತ್ರಗಳಲ್ಲಿ ಶ್ರೀ ಎಸ್.ಎನ್. ಶೆಲ್ವನಾರಾಯಣ, ವಿಶಿಷ್ಠಾದ್ವೈತ ಪಂಡಿತರು, ಶ್ರೀ ಉಮಾಕಾಂತ ಭಟ್, ಪ್ರಾಚೀನ ನ್ಯಾಯ ಪಂಡಿತರು ಮತ್ತು ಶ್ರೀ ಕೈಂಕರ್ಯ ರಂಗರಾಜನ್, ದಿವ್ಯ ಪ್ರಬಂಧ ಪಂಡಿತರು ಸರ್ಕಾರಿ ಸಂಸ್ಕೃತ ಕಾಲೇಜು, ಮೇಲುಕೋಟೆ ಇವರುಗಳಿಗೆ ಸ್ವಯಂ ಚಾಲಿತ ವೇತನ ಶ್ರೇಣಿ ಮಂಜೂರು ಮಾಡುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಶ್ರೀ ಎಸ್.ಎನ್. ಶೆಲ್ವನಾರಾಯಣರವರು ದಿನಾಂಕ: 14-10-1984ರಂದು ವಿಶಿಷ್ಠದ್ವೈತ ಪಂಡಿತರಾಗಿ, ಶ್ರೀ ಉಮಾಕಾಂತಭಟ್‌ರವರು ಪ್ರಾಚೀನ ನ್ಯಾಯ ಪಂಡಿತರು ದಿನಾಂಕ: 20-10-1984ರಂದು ಮತ್ತು ಶ್ರೀ ಕೈಂಕರ್ಯ ರಂಗರಾಜನ್‌ರವರು ದಿನಾಂಕ: 04-07-1985 ದಿವ್ಯ ಪ್ರಬಂಧ ಉಪಾಧ್ಯಾಯರು ಸಂಸ್ಕೃತ ಕಾಲೇಜು, ಮೇಲುಕೋಟೆಯಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಶ್ರೀ ಶೆಲ್ವನಾರಾಯಣರವರು ದಿನಾಂಕ: 14-10-1994ಕ್ಕೆ, ಶ್ರೀ ಉಮಾಕಾಂತಭಟ್‌ರವರು ದಿನಾಂಕ: 26-10-1994ಕ್ಕೆ ಮತ್ತು ಶ್ರೀ ಕೈಂಕರ್ಯ ರಂಗರಾಜನ್ ದಿನಾಂಕ: 04-07-195ಕ್ಕೆ ಕ್ರಮವಾಗಿ 10 ವರ್ಷಗಳ ಸೇವೆಯನ್ನು ಪೂರ್ಣಗೊಳಿಸಿದ್ದು, Karnataka Civil Services (TBA) Rules 1983 ರನ್ವಯ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ಸದರಿಯವರುಗಳಿಗೆ 10 ವರ್ಷಗಳ ಆಯ್ಕೆ ಕಾಲಿಕ ವೇತನ ಶ್ರೇಣಿ ಮಂಜೂರು ಮಾಡಲಾಗಿರುತ್ತದೆ.

ಶ್ರೀ ಎಸ್.ಎನ್. ಶೆಲ್ವನಾರಾಯಣರವರು ದಿನಾಂಕ: 14-10-1999ಕ್ಕೆ ಶ್ರೀ ಉಮಾಕಾಂತ್‌ಭಟ್‌ವರು ದಿನಾಂಕ: 19-10-1999ಕ್ಕೆ ಮತ್ತು ಶ್ರೀ ಕೈಂಕರ್ಯ ರಂಗರಾಜನ್ ರವರು ದಿನಾಂಕ: 03-07-2000 15 ವರ್ಷಗಳ ಸೇವೆಯನ್ನು ಕ್ರಮವಾಗಿ ವಿಶಿಷ್ಠಾದ್ವೈತ ಪಂಡಿತ, ಪ್ರಾಚೀನ ನ್ಯಾಯ ಪಂಡಿತರು ಮತ್ತು ದಿವ್ಯ ಪ್ರಬಂಧ ಉಪಾಧ್ಯಾಯರು ಹುದ್ದೆಗಳಲ್ಲಿ 15 ವರ್ಷಗಳ ಸೇವೆಯನ್ನು ಪೂರೈಸಿರುತ್ತಾರೆ. ಶ್ರೀ ಶೆಲ್ವನಾರಾಯಣರವರು ರೂ. 6300-11840ರ ವೇತನ ಶ್ರೇಣಿಯಲ್ಲಿ ದಿನಾಂಕ: 14-10-1999ಕ್ಕೆ ರೂ.8400/- ಶ್ರೀ ಉಮಾಕಾಂತ ಭಟ್‌ರವರು ದಿನಾಂಕ: 26-10-1999 ರೂ. 6300-11840ರ ಹಾಗೂ ಶ್ರೀ ಕೈಂಕರ್ಯ ರಂಗರಾಜನ್‌ರವರು ದಿನಾಂಕ: 04-07-2000ರಲ್ಲಿ ರೂ. 8800/- ವೇತನ ಪಡೆಯುತ್ತಿದ್ದಾರೆ. ಸದರಿಯವರುಗಳ ಸೇವೆಯು ತೃಪ್ತಿಕರವಾಗಿದ್ದು, ಸದರಿಯವರುಗಳಿಗೆ "KCS (Automatic Grant of Special Promotion to Senior Scale of Pay) Rules 1991" ರ ನಿಯಮ 2(4)ರನ್ವಯ ವಿಶಿಷ್ಠಾದ್ವೈತ ಪಂಡಿತರ, ಪ್ರಾಚೀನ ನ್ಯಾಯ ಪಂಡಿತರ ಮತ್ತು ದಿವ್ಯ ಪ್ರಬಂಧ ಉಪಾಧ್ಯಾಯರ ಹುದ್ದೆಗಳ ನಂತರದ ಪದೋನ್ನತಿ ಹುದ್ದೆಯ ವೇತನ ಶ್ರೇಣಿ ರೂ. 7400-13120ರ ಹಿರಿಯ ವೇತನ ಶ್ರೇಣಿಗೆ ಸ್ವಯಂ ಚಾಲಿತ ವಿಶೇಷ ಬಡ್ತಿ ಮಂಜೂರು ಮಾಡುವಂತೆ ಧಾರ್ಮಿಕ ದತ್ತಿ ಆಯುಕ್ತರು ಮೇಲೆ (2)ರಲ್ಲಿ ಓದಲಾದ ಪತ್ರಗಳಲ್ಲಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಧಾರ್ಮಿಕ ದತ್ತಿ ಆಯುಕ್ತರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 09 ಮುಸೇವಿ 2004, ಬೆಂಗಳೂರು ದಿನಾಂಕ: 06-10-2007**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದ ಮೇಲುಕೋಟೆ ಸರ್ಕಾರಿ ಸಂಸ್ಕೃತ ಕಾಲೇಜಿನಲ್ಲಿ ವಿಶಿಷ್ಠಾದ್ವೈತ ಪಂಡಿತರಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಎಸ್.ಎನ್. ಶೆಲ್ವನಾರಾಯಣ ಇವರು ದಿನಾಂಕ: 14–10–1999ಕ್ಕೆ ಪ್ರಾಚೀನ ನ್ಯಾಯ ಪಂಡಿತರ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀ ಉಮಾಕಾಂತ ಭಟ್ ಇವರು ದಿನಾಂಕ: 19–10–1999ಕ್ಕೆ ಮತ್ತು ದಿವ್ಯ ಪ್ರಬಂಧ ಪಂಡಿತರಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಕೈಂಕರ್ಯ ರಂಗರಾಜನ್ ಇವರು ದಿನಾಂಕ: 04–07–2000ಕ್ಕೆ 15 ವರ್ಷಗಳ ಅವಧಿಯ ಸೇವೆಯನ್ನು ಒಂದೇ ಹುದ್ದೆಯಲ್ಲಿ ಪೂರೈಸಿರುವುದರಿಂದ ಸದರಿಯವರುಗಳಿಗೆ "KCS (Automatic Grant of Special Promotion to Senior Scale of Pay) Rules 1991" 19–09–1999 ಮತ್ತು 04–07–2000 ರಿಂದ ಅನ್ವಯವಾಗುವಂತೆ ವೇತನ ಶ್ರೇಣಿ ರೂ. 7400–13120ನ್ನು ಮಂಜೂರು ಮಾಡಿ ಆದೇಶಿಸಿದೆ.

ಪ್ರಸ್ತುತ ಸ್ವಯಂಚಾಲಿತ ಬಡ್ತಿಯ ಕಾರಣದಿಂದ ಇವರುಗಳಿಗೆ ನಿಯಮಾನುಸಾರ ಕಾಲಕಾಲಕ್ಕೆ ವೇತನ ನಿಗಧಿ ಮಾಡಿ ಪ್ರತ್ಯೇಕ ಆದೇಶ ಹೊರಡಿಸಲು ಧಾರ್ಮಿಕ ದತ್ತಿ ಆಯುಕ್ತರಿಗೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1841

**ಜಿ. ರಾಮಚಂದ್ರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಮುಜರಾಯಿ)

**ವಿಷಯ:** ಶ್ರೀ ಸಿ.ಜಿ. ದೇಸಾಯಿ, ನಿವೃತ್ತ ಪ್ರಥಮ ದರ್ಜೆ ಭೂಮಾಪಕರು ಇವರ ವಿರುದ್ಧದ ಶಿಸ್ತು ಕ್ರಮ – ಅಂತಿಮ ಆದೇಶ ಹೊರಡಿಸುವಿಕೆ

**ಓದಲಾಗಿದೆ:**

1 ಆಯುಕ್ತರು, ಭೂಮಾಪನ ಇಲಾಖೆ, ಬೆಂಗಳೂರು ಇವರ ನಡವಳಿ ಸಂ. ಸಿಬ್ಬಂದಿ.ಶಿಸ್ತು 21/2005–06 ದಿ: 22–4–2006.

2 ಆಯುಕ್ತರು, ಭೂಮಾಪನ ಇಲಾಖೆ, ಬೆಂಗಳೂರು ಇವರ ಪತ್ರ ಸಂ. ಸಿಬ್ಬಂದಿ.ಶಿಸ್ತು. 21/2005–06 ದಿ: 8/13–3–2007 ಮತ್ತು ದಿ: 26–7–2007.

3 ಸಮಸಂಖ್ಯೆಯ ದಿ: 17–4–2007ರ ಸರ್ಕಾರಿ ಪತ್ರ.

4. ಕರ್ನಾಟಕ ಲೋಕಸೇವಾ ಆಯೋಗ ಕಾರ್ಯದರ್ಶಿ ಇವರ ಪತ್ರ ಸಂ. ಪಿ.ಎಸ್.ಸಿ. 28/ಸಿಎನ್.ಎಸ್. 2007 ದಿ: 26–9–2007.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ: 22–04–2006ರ ಆದೇಶದಲ್ಲಿ ಶ್ರೀ ಸಿ.ಜಿ. ದೇಸಾಯಿ, ನಿವೃತ್ತ ಪ್ರಥಮ ದರ್ಜೆ ಭೂಮಾಪಕರು, ನಗರಮಾಪನ, ಧಾರವಾಡ ಇವರ ವಿರುದ್ಧದ ಆರೋಪಗಳ ಕುರಿತು (ಆರೋಪಗಳೆಂದರೆ ನರಗುಂದ ನಗರ ಸಿ.ಸ.ನಂ. 1902/ಸಿ/17ರ ಪಿ.ಆರ್. ಕಾರ್ಡ್‌ನಲ್ಲಿ ಕ್ಷೇತ್ರ 224ಕ್ಕೆ ಸ್ಕ್ವೇಯರ್ ಯಾರ್ಡ್ ಇರುವುದನ್ನು 334 ಸ್ಕ್ವೇಯರ್ ಯಾರ್ಡ್ ಎಂದು ತಿದ್ದಿರುವ ವಿಷಯ ಗೊತ್ತಿದ್ದರೂ ದಿ: 19–11–2001 ರಂದು ದುರುದ್ದೇಶದಿಂದ ದೋಷಪೂರಿತ ಉತಾರ ಹಾಗೂ ನಕಾಶೆ ಪೂರೈಸಿ ಸಾರ್ವಜನಿಕರ ಉಪಯೋಗಕ್ಕಾಗಿ ಮೀಸಲಿಟ್ಟಿರುವ ರಸ್ತೆಯನ್ನು ತಕರಾರು ಹಾಗೂ ಸಮಸ್ಯೆ ಸೃಷ್ಟಿಯಾಗಲು ಕಾರಣರಾಗಿರುತ್ತಾರೆ ಎಂತಲೂ, 2ನೇ ಆರೋಪವಾದ ನಗರ ಮಾಪನ, ನರಗುಂದ ಕಛೇರಿಯ ಮೂಲ ದಾಖಲೆಗಳಾದ ಫೀಲ್ಡ್ ಬುಕ್‌ನ ಸ್ಕೆಚ್ ಹಾಗೂ ನಕಾಶೆ ಪ್ರಕಾರ ಸಿ.ಸ.ನಂ. 1902/ಸಿ/17 ರ ಸ್ವತ್ತಿನ ದಕ್ಷಿಣಕ್ಕೆ ಸಾರ್ವಜನಿಕರ ರಸ್ತೆ ಎಂದು ನಮೂದಿಸಿದ್ದರೂ ಸಹ ದಿ: 19–11–2001 ರಂದು ನೀಡಿದ 1902/ಸಿ/17 ರ ಸ್ಕೆಚ್‌ನಲ್ಲಿ ದಕ್ಷಿಣಕ್ಕೆ ಸಿ.ಸ.ನಂ. 1902/ಸಿ/22ರ ಆಸ್ತಿ ಎಂದು ನಮೂದಿಸಿ ಕಾನೂನುಬಾಹಿರವಾದ ಕೃತ್ಯ ಎಸಗಿರುತ್ತಾರೆ ಎಂತಲೂ, 3ನೇ ಆರೋಪವಾದ ನರಗುಂದ ನಗರ ಸಿ.ಸ.ನಂ.1902/ಸಿ/17 ರಲ್ಲಿ ಜಮೀನು ಖರೀದಿಗೆ ಮಾರಾಟ ಮಾಡಲು ಕೋರಿದಾಗ ಸದರೀ ವಿಷಯದಲ್ಲಿ ವರದಿ ಪರಿಶೀಲಿಸಿ ವರದಿ ಸಲ್ಲಿಸುವ ಕಾಲಕ್ಕೆ ನಗರಮಾಪನ ಅಧಿಕಾರಿಗಳ ಗಮನಕ್ಕೆ ತರದೇ ನರಗುಂದ ಸಿ.ಸ.ನಂ. 1902/ಸಿ/17ರ ಕ್ಷೇತ್ರ 334 ಚದರ ಮೀಟರ್ ಆಸ್ತಿಯಲ್ಲಿ ಖರೀದಿಗೆ ನೀಡಬಹುದೆಂದು ನೇರವಾಗಿ ಪತ್ರ ವ್ಯವಹಾರ ಮಾಡಿ ಬೇಜವಾಬ್ದಾರಿಯಿಂದ ವರ್ತಿಸಿರುತ್ತಾರೆ ಎಂದು ಆರೋಪಗಳಿವೆ.) ವಿಚಾರಣೆಯನ್ನು ನಡೆಸಲು ವಿಚಾರಣಾಧಿಕಾರಿಗಳನ್ನು ನೇಮಿಸಿ ಆಯುಕ್ತರು, ಭೂಮಾಪನ ಇಲಾಖೆ, ಬೆಂಗಳೂರು ಇವರು ಆದೇಶ ಹೊರಡಿಸಿದ್ದಾರೆ.

ಈ ಪ್ರಕರಣದಲ್ಲಿ ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಆರೋಪಿತ ನೌಕರರ ವಿರುದ್ಧ ಆರೋಪಗಳು ಸಾಬೀತಾಗಿವೆ ಎಂಬುದಾಗಿ ವಿಚಾರಣಾ ವರದಿಯನ್ನು ಆಯುಕ್ತರು, ಭೂಮಾಪನ ಇಲಾಖೆ ಇವರಿಗೆ ಸಲ್ಲಿಸಿದ್ದಾರೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಆಯುಕ್ತರು, ಭೂಮಾಪನ ಇಲಾಖೆ, ಇವರು – ಶ್ರೀ ಸಿ.ಜಿ. ದೇಸಾಯಿ, ನಿವೃತ್ತ ಪ್ರಥಮ ದರ್ಜೆ ಭೂಮಾಪಕರು ಇವರು ಈ ಹಿಂದೆ ಭೂದಾಖಲೆಗಳ ಸಹಾಯಕ ನಿರ್ದೇಶಕರು ನಗರಮಾಪನ ನಗರಗುಂದ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ನರಗುಂದ ನಗರ ಸಿ.ಸ.ನಂ. 1902/ಸಿ/17 ರ ಪಿ.ಆರ್. ಕಾರ್ಡ್‌ನಲ್ಲಿ ಕ್ಷೇತ್ರ 224ನ್ನು ತಿದ್ದಿರುವ ಬಗ್ಗೆ ಸದರಿಯವರ ವಿರುದ್ಧ ಶಿಸ್ತು ಕ್ರಮವನ್ನು ಜಾರಿ ಮಾಡಲಾಗಿದ್ದು, ಶಿಸ್ತು ಕ್ರಮವು ಜಾರಿಯಲ್ಲಿದ್ದ ಸಮಯದಲ್ಲೇ ದಿ: 31–5–2006 ರಂದು ಸರ್ಕಾರಿ ಸೇವೆಯಿಂದ ವಯೋ ನಿವೃತ್ತರಾಗಿರುತ್ತಾರೆಂದು, ಕರ್ನಾಟಕ ಸರ್ಕಾರಿ

ಸೇವಾ ನಿಯಮ 214(2)(ಎ)ರ ಪ್ರಕಾರ ನೌಕರರ ಇಲಾಖಾ ವಿಚಾರಣೆಯನ್ನು ಮುಂದುವರೆಸಿ ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯನ್ನು ಒಪ್ಪಿ ಎರಡನೇ ಕಾರಣ ಕೇಳಿ ನೋಟೀಸಿನೊಂದಿಗೆ ವಿಚಾರಣಾ ವರದಿಯನ್ನು ಜಾರಿ ಮಾಡಲಾಗಿದ್ದು, ಸದರಿ ನೋಟೀಸಿಗೆ ಸಲ್ಲಿಸಿರುವ ಹೇಳಿಕೆಯನ್ನು ಹಾಗೂ ವಿವಾರಣಾ ವರದಿ ಮತ್ತು ವಿಚಾರಣಾ ದಾಖಲಾತಿಗಳನ್ನು ಲಗತ್ತಿಸಿ ಕಳುಹಿಸುತ್ತಾ, ಸದರಿ ನೌಕರರು ನಿವೃತ್ತರಾದ ಕಾರಣ ಸದರಿ ಪ್ರಕರಣದಲ್ಲಿ ಕರ್ನಾಟಕ ಸರ್ಕಾರಿ ಸೇವಾ ನಿಯಮ 214(1) (ಎ)ರ ಪ್ರಕಾರ ಅಂತಿಮ ಆದೇಶ ಹೊರಡಿಸಲು ಕೋರಿರುತ್ತಾರೆ.

ಆಯುಕ್ತರು ದಿ: 26–7–2007ರ ಪತ್ರದಲ್ಲಿ ಆರೋಪಿತ ನೌಕರರು ಎಸಗಿರುವ ಕರ್ತವ್ಯ ಲೋಪಗಳಿಂದ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟ ಉಂಟಾಗಿರುವುದಿಲ್ಲವೆಂದು ಆದರೆ ಕರ್ತವ್ಯ ಚ್ಯುತಿ ಎಸಗಿರುವುದು ಸಾಬೀತಾಗಿದೆಯೆಂದು ಇದರಿಂದ ಸಾರ್ವಜನಿಕವಾಗಿ ತೊಂದರೆಯಾಗಿದೆ ಎಂಬುದಾಗಿ ಸರ್ಕಾರಕ್ಕೆ ವರದಿ ನೀಡಿರುತ್ತಾರೆ.

ಆಯುಕ್ತರು, ಭೂಮಾಪನ ಇಲಾಖೆ ಇವರ ದಿ: 13–3–2007 ಮತ್ತು 26–7–2007ರ ವರದಿಗಳನ್ನು, ವಿಚಾರಣಾ ವರದಿ ಹಾಗೂ ಆರೋಪಿತ ನೌಕರರ ಲಿಖಿತ ಹೇಳಿಕೆಗಳನ್ನು ಪರಿಶೀಲಿಸುತ್ತಾ, ಸದರಿ ಆರೋಪಿತ ನೌಕರರಿಗೆ ನಿವೃತ್ತಿ ವೇತನದ 20% ರಷ್ಟನ್ನು ಶಾಶ್ವತವಾಗಿ ರದ್ದು ಮಾಡಲು ಮತ್ತು ಹಾನಿಯಾದ ಮೊತ್ತವನ್ನು ಅವರಿಂದ ವಸೂಲಿ ಮಾಡಲು ತೀರ್ಮಾನಿಸಿ ಸದರಿ ನೌಕರರು ಒಬ್ಬ ನಿವೃತ್ತ ಸರ್ಕಾರಿ ನೌಕರರಾಗಿರುವುದರಿಂದ ಮೇಲೆ (3)ರಲ್ಲಿ ಓದಲಾದ ದಿ: 17–4–2007ರ ಪತ್ರದಲ್ಲಿ ಈ ಬಗ್ಗೆ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಕೋರಲಾಗಿತು. ಕರ್ನಾಟಕ ಲೋಕ ಸೇವಾ ಆಯೋಗವು ಮೇಲೆ (4)ರಲ್ಲಿ ಓದಲಾದ ದಿ: 26–9–20007ರ ಪತ್ರದಲ್ಲಿ ಶ್ರೀ ಸಿ.ಜಿ. ದೇಸಾಯಿ ಪ್ರ.ದ.ಭೂ. (ನಿವೃತ್ತ) ಇವರಿಗೆ ದಂಡನೆಯಾಗಿ ಇವರ ನಿವೃತ್ತಿ ವೇತನದಲ್ಲಿ ಶೇ. 20ರಷ್ಟನ್ನು ಶಾಶ್ವತವಾಗಿ ರದ್ದುಪಡಿಸಲು ತೀರ್ಮಾನಿಸಿರುವ ಸರ್ಕಾರದ ಪ್ರಸ್ತಾವನೆಗೆ ಸಹಮತಿ ನೀಡಿದೆ ಎಂಬುದಾಗಿ ತಿಳಿಸಿರುತ್ತಾರೆ.

ಮೇಲ್ಕಂಡ ಅಂಶಗಳ ಹಿನ್ನಲೆಯಲ್ಲಿ ಹಾಗೂ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯಂತೆ ಈ ನೌಕರರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1958ರ ನಿಯಮ 214 (1)(ಎ)ರ ಪ್ರಕಾರ ನೌಕರರ ನಿವೃತ್ತಿ ವೇತನದಲ್ಲಿ ಶೇ. 20ರಷ್ಟನ್ನು ಶಾಶ್ವತವಾಗಿ ರದ್ದುಪಡಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 71 ಭೂದಾಸೇ (3) 2007, ಬೆಂಗಳೂರು, ದಿನಾಂಕ: 03/11/2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಸಿ.ಜಿ. ದೇಸಾಯಿ, ಪ್ರಥಮ ದರ್ಜೆ ಭೂಮಾಪಕರು (ನಿವೃತ್ತ) ಇವರ ವಿರುದ್ಧ ಮಾಡಲಾಗಿದ್ದ ಆಪಾದನೆಗಳು ವಿಚಾರಣೆಯಲ್ಲಿ ಸಾಭೀತಾಗಿರುವ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1958ರ ನಿಯಮ 214(1) (ಎ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸಿ.ಜಿ. ದೇಸಾಯಿ, (ನಿವೃತ್ತ) ಪ್ರಥಮ ದರ್ಜೆ ಭೂಮಾಪಕರ ನಿವೃತ್ತಿ ವೇತನದಲ್ಲಿ ಶೇಕಡ 20ರಷ್ಟನ್ನು ಶಾಶ್ವತವಾಗಿ ರದ್ದುಪಡಿಸುವ ದಂಡನೆಯನ್ನು ವಿಧಿಸಿ ಆದೇಶಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1973

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಮಾಪನ)

**ವಿಷಯ:** ಶ್ರೀಯುತರಾದ ಚಿಕ್ಕಹೊನ್ನಪ್ಪ, ಹಿಂದಿನ ತಹಶೀಲ್ದಾರ್, ವಿರಾಜಪೇಟೆ, ಎ.ಕೆ. ನಾಣಯ್ಯ, ಉಪ ತಹಶೀಲ್ದಾರ್, ಪೊನ್ನಾಂಪೇಟೆ ಮತ್ತು ರಾಮಯ್ಯ ರಾಜಸ್ವ ನಿರೀಕ್ಷಕ, ತಾಲ್ಲೂಕು ಕಛೇರಿ, ವಿರಾಜಪೇಟೆ ಕೊಡಗು ಜಿಲ್ಲೆ ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣಾ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ:**

1 ನಿಬಂಧಕರು, ಕರ್ನಾಟಕ ಲೋಕಯುಕ್ತ ಕಛೇರಿ, ಬೆಂಗಳೂರು ಇವರ ದಿನಾಂಕ: 5–5–03ರ ಅ.ಸ.ಪತ್ರ ಸಂಖ್ಯೆ: ಕಾಂವ್ಯೆ:ಉಪಲೋಕ: ಎಂವೈಎಸ್:80:2001–02: ಎಆರೆಲ್‌ಒ–3.

2 ಸರ್ಕಾರದ ಆದೇಶ ಸಂ: ಆರ್‌ಡಿ 18 ಎಡಿಇ 2003, ದಿನಾಂಕ: 25–6–2003.

3. ಉಪಲೋಕಾಯುಕ್ತರು, ಕರ್ನಾಟಕ ರಾಜ್ಯ, ಬೆಂಗಳೂರು ಇವರ ವರದಿ ದಿನಾಂಕ: 17–10–2005.

4. ಎರಡನೇ ಕಾರಣ ಕೇಳುವ ನೋಟೀಸು ದಿನಾಂಕ: 20–12–2005.

5. ಶ್ರೀ ಎಂ.ಎಸ್. ಚಿಕ್ಕಹೊನ್ನಪ್ಪ, ಶ್ರೀ ಯು.ಟಿ. ರಾಮಯ್ಯ ಮತ್ತು ಶ್ರೀ ಎ.ಕೆ. ನಾಣಯ್ಯ ಇವರುಗಳು ಸಮಜಾಯಿಷಿ ದಿನಾಂಕ: 9–1–2006, 5–1–2006 ಮತ್ತು 5–1–2006.

**ಪ್ರಸ್ತಾವನೆ:**

ಕೊಡಗು ಜಿಲ್ಲೆಯ ಪೊನ್ನಾಂಪೇಟೆಯ ಸ.ನಂ. 37:26 ರಲ್ಲಿ ಜಮೀನನ್ನು ಸಾರ್ವಜನಿಕ ದನಕರುಗಳಿಗೆ ಹುಲ್ಲುಗಾವಲನ್ನಾಗಿ ಮೀಸಲಿಟ್ಟಿರುವ ಸರ್ಕಾರಿ ಜಮೀನಿನಲ್ಲಿ ಸದರಿ ಗ್ರಾಮದ ಶ್ರೀಯುತರಾದ ಕೆ.ಜಿ. ಪೋನಪ್ಪ, ಕೆ.ಜಿ. ಮಾದಪ್ಪ ಎಂಬುವವರು 10 ಎಕರೆ ಜಮೀನನ್ನು ಒತ್ತುವರಿ ಮಾಡಿಕೊಂಡು ಅದರಲ್ಲಿ ಕಾಫಿ ತೋಟವನ್ನು ಮಾಡಿರುವುದರಿಂದ, ಆ ಜಮೀನಿನಲ್ಲಿ ಉತ್ತರ ದಕ್ಷಿಣವಾಗಿ ಇದ್ದಂತಹ ಎತ್ತಿನಗಾಡಿ ರಸ್ತೆಯನ್ನು ಮುಚ್ಚಿರುವುದಾಗಿ, ಈ ಬಗ್ಗೆ ವಿರಾಜಪೇಟೆ

ತಹಶೀಲ್ದಾರರಾದ ಶ್ರೀ ಚಿಕ್ಕಹೊನ್ನಪ್ಪರವರಿಗೆ ದೂರು ಸಲ್ಲಿಸಿದ್ದರು ಸಹ ಆ ಬಗ್ಗೆ ಸದರಿ ತಾಲ್ಲೂಕಿನ ತಹಶೀಲ್ದಾರ್, ಪೊನ್ನಾಂಪೇಟೆ ಉಪ ತಹಶೀಲ್ದಾರ್‌ರಾದ ಶ್ರೀ ಎ.ಕೆ. ನಾಣಯ್ಯ ಹಾಗೂ ವಿರಾಜಪೇಟೆ ತಾಲ್ಲೂಕು ಕಛೇರಿಯ ರಾಜಸ್ವ ನಿರೀಕ್ಷಕರಾದ ಶ್ರೀ ರಾಮಯ್ಯ ಇವರುಗಳು ಯಾವುದೇ ಕ್ರಮವನ್ನು ಕೈಗೊಂಡಿಲ್ಲವೆಂದು ಹಾಗೂ ಒತ್ತುವರಿದಾರರಿಂದ ಸದರಿ ಜಮೀನನ್ನು ಮುಕ್ತಾಯಗೊಳಿಸಿರುವುದಿಲ್ಲವೆಂದು ಶ್ರೀ ಕೆ.ಟಿ. ನಂಜಪ್ಪ ಎಂಬುವವರು ಮಾನ್ಯ ಲೋಕಾಯುಕ್ತರಿಗೆ ಸಲ್ಲಿಸಿರುವ ದೂರಿನ ಬಗ್ಗೆ ಪ್ರಾಥಮಿಕ ವಿಚಾರಣೆ ನಡೆಸಿ ಮಾನ್ಯ ಲೋಕಾಯುಕ್ತರು ಸರ್ಕಾರಕ್ಕೆ ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ವರದಿಯನ್ನು ನೀಡಿರುತ್ತಾರೆ.

ಸದರಿ ವರದಿಯನ್ನು ಪರಿಶೀಲಿಸಲಾಗಿ ಕರ್ನಾಟಕ ಭೂ ಕಂದಾಯ ಕಾಯಿದೆ ಸೆಕ್ಷನ್ 94(3) ರನ್ವಯ ಫಿರ್ಯಾದುದಾರರು ಕೊಡಗು ಜಿಲ್ಲಾಧಿಕಾರಿಗಳಿಗೆ ದೂರು ಸಲ್ಲಿಸಿದ್ದರ ಮೇರೆಗೆ ಒತ್ತುವರಿದಾರರನ್ನು ವಿಮುಕ್ತಿಗೊಳಿಸುವಂತೆ (ತೆರವು) ಈ ಪ್ರಕರಣದಲ್ಲಿನ ಪ್ರತಿವಾದಿಗಳಲ್ಲಿ ಒಬ್ಬರಾದ ವಿರಾಜಪೇಟೆ ತಹಶೀಲ್ದಾರರಿಗೆ ಜಿಲ್ಲಾಧಿಕಾರಿಗಳು ಮಾಡಿದ ಆದೇಶದ ಮೇರೆಗೆ ತಾಲ್ಲೂಕು ತಹಶೀಲ್ದಾರರು ಒತ್ತುವರಿ ಜಮೀನನ್ನು ವಿಮುಕ್ತಿಗೊಳಿಸದೆ ಜಿಲ್ಲಾಧಿಕಾರಿಗಳಿಗೆ ದಿನಾಂಕ: 16–01–01 ರಂದು ತಪ್ಪು ವರದಿಯನ್ನು ಸಲ್ಲಿಸಿರುತ್ತಾರೆಂದು, ಅದರಿಂದಾಗಿ ಫಿರ್ಯಾದುದಾರರು ಕರ್ನಾಟಕ ಭೂ ಕಂದಾಯ ಅಧಿನಿಯಮದ ಸೆಕ್ಷನ್ 25ರ ಮೇರೆಗೆ ನೇರವಾಗಿ ಜಿಲ್ಲಾಧಿಕಾರಿಗಳಿಗೆ ನೀಡಿದ ದೂರಿನ ಬಗ್ಗೆ ಸದರಿ ಜಿಲ್ಲಾಧಿಕಾರಿಯವರು ವಿವಾದದ ಸ್ಥಳಕ್ಕೆ ಭೇಟಿ ನೀಡಿ ಸ್ಥಳ ಪರಿಶೀಲನಾ ವರದಿಯನ್ನು ಸಲ್ಲಿಸುವಂತೆ ಉಪ ವಿಭಾಗಾಧಿಕಾರಿಯವರಿಗೆ ಆದೇಶಿಸಿದ್ದರ ಮೇರೆಗೆ ಅವರು ಸಲ್ಲಿಸಿದ್ದ ವರದಿಯನ್ವಯ ಒತ್ತುವರಿಯನ್ನು ವಿಮುಕ್ತಗೊಳಿಸದೆ ಇರುವುದು ಸಾಬೀತಾಗಿರುವುದರಿಂದ ಪುನಃ ಸದರಿ ತಹಶೀಲ್ದಾರರಿಗೆ ಒತ್ತುವರಿಯನ್ನು ತೆಗೆಸುವಂತೆ ಆದೇಶಿಸದ್ದರ ಮೇರೆ ಇಂತಹ ಆದೇಶವನ್ನು ಪಾಲಿಸದೇ ವಿರಾಜಪೇಟೆ ತಹಶೀಲ್ದಾರರು ವಿಫಲರಾಗಿರುತ್ತಾರೆಂದು ಮಾನ್ಯ ಲೋಕಾಯುಕ್ತರು ವರದಿ ಮಾಡಿರುತ್ತಾರೆ. ಈ ಕಾರಣದಿಂದ ಸದರಿ ಫಿರ್ಯಾದುದಾರರ ದೂರು ಅರ್ಜಿಯನ್ನು ಲೋಕಾಯುಕ್ತ ಕಛೇರಿಯಲ್ಲಿ ಪ್ರಾಥಮಿಕ ವಿಚಾರಣೆ ಜರುಗಿಸಲು ಕ್ರಮ ಕೈಗೊಂಡಿದ್ದು, ಅದರಂತೆ ಲೋಕಾಯುಕ್ತ ಕಾಯಿದೆ ಸೆಕ್ಷನ್ 15(3)ರನ್ವಯ ಮಡಿಕೇರಿ ತಾಲ್ಲೂಕು ಭೂ ಮಾಪನ ಮತ್ತು ಭೂ ದಾಖಲೆಗಳ ಸಹಾಯಕ ನಿರ್ದೇಶಕರನ್ನು ಸದರಿ ಒತ್ತುವರಿಯ ಬಗ್ಗೆ ವಿಚಾರಣೆ ಜರುಗಿಸಿ ವರದಿ ಸಲ್ಲಿಸುವಂತೆ ಸೂಚಿಸಿದ್ದರ ಮೇರೆಗೆ ಸದರಿ ಸಹಾಯಕ ನಿರ್ದೇಶಕರು ದಿನಾಂಕ: 7–3–2002 ರಂದು ಪ್ರಶ್ನಿತ ಜಮೀನಿಗೆ ಭೇಟಿ ನೀಡಿದಾಗ ನಂ: 37:26 ರಲ್ಲಿ ಒಂದು ಎಕರೆ ಜಮೀನು ಶ್ರೀ ಕೆ.ಜಿ. ಪೊನ್ನಪ್ಪ ಎಂಬುವವರ ವಶದಲ್ಲಿ ಇದೆಯೆಂದು ಹಾಗೂ 1.40 ಎಕರೆ ಒತ್ತುವರಿಯಯನ್ನು ತೆರವುಗೊಳಿಸಿದ್ದನ್ನು ದಿನಾಂಕ: 11–3–2002ರ ತಮ್ಮ ವರದಿಯಲ್ಲಿ ತಿಳಿಸಿರುವುದಾಗಿ ವರದಿಯಾಗಿದೆ. ಸದರಿ ವರದಿಯ ಬಗ್ಗೆ ಪ್ರತಿವಾದಿಗಳಾದ ಮೂರ ಜನರನ್ನು ಅವರ ಲಿಖಿತ ಹೇಳಿಕೆ ಸಲ್ಲಿಸುವಂತೆ ನಿರ್ದೇಶಿಸಿದ್ದರ ಮೇರೆಗೆ ಅವರುಗಳು ವಿವಿಧ ದಿನಾಂಕಗಳಲ್ಲಿ ಸಲ್ಲಿಸಿದ್ದ ಹೇಳಿಕೆಗಳನ್ವಯ ದಿನಾಂಕ: 9–11–01 ರಂದು ಜಮೀನು ಒತ್ತುವರಿಯನ್ನು ತೆರವುಗೊಳಿದ್ದಾಗ್ಯೂ ಪುನಃ ಮೇಲೆ ತಿಳಿಸಿರುವ ಇಬ್ಬರು ಒತ್ತುವರಿದಾರರು ಸದರಿ ಜಮೀನನ್ನು ಒತ್ತುವರಿ ಮಾಡಿರುತ್ತಾರೆಂದು ಲಿಖಿತ ಹೇಳಿಕೆಯಲ್ಲಿ ತಿಳಿಸಿರುತ್ತಾರಾದರೂ, ದಿನಾಂಕ: 9–11–01 ಕ್ಕೆ ಮುಂಚಿತವಾಗಿ ಮೂರು ಜನ ಪ್ರತಿವಾದಿಗಳು ಒತ್ತುವರಿಯನ್ನು ತೆರವುಗೊಳಿಸದೆ ಅವರ ಮೇಲಾಧಿಕಾರಿಗಳಾದ ಉಪ ವಿಭಾಗಾಧಿಕಾರಿ ಹಾಗೂ ಕೊಡಗು ಜಿಲ್ಲಾಧಿಕಾರಿಯವರ ಆದೇಶವನ್ನು ಪಾಲಿಸದೇ ಕರ್ತವ್ಯ ಚ್ಯುತಿ ಎಸಗಿರುತ್ತಾರೆಂದು ಮಾನ್ಯ ಲೋಕಾಯುಕ್ತರು ತಮ್ಮ ವರದಿಯಲ್ಲಿ ತಿಳಿಸಿರುತ್ತಾ, ಈ ಕಾರಣದಿಂದ ಮೂರು ಜನ ಆರೋಪಿತರು ಪ್ರಶ್ನಿತ ಜಮೀನನ್ನು ಒತ್ತುವರಿ ಮಾಡಿಕೊಳ್ಳಲು ಅವಕಾಶ ಕಲ್ಪಿಸಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಅವರುಗಳ ವಿರುದ್ಧ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳನ್ವಯ ಶಿಸ್ತು ಕ್ರಮವನ್ನು ಜರುಗಿಸಿ ಲಘು ದಂಡನೆಯನ್ನು ವಿಧಿಸುವ ಬಗ್ಗೆ ತ್ವರಿತ ಕ್ರಮ ಕೈಗೊಳ್ಳುವಂತೆ ಕರ್ನಾಟಕ ಲೋಕಾಯುಕ್ತ ಕಾಯಿದೆ ಅಧಿನಿಯಮ 12(3) ರನ್ವಯ ಮೇಲೆ ಓದಲಾದ ಕ್ರ.ಸಂ. (1)ರ ದಿನಾಂಕ: 5–5–2003ರಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಹಿನ್ನಲೆಯಲ್ಲಿ ಈ ಪ್ರಕರಣದಲ್ಲಿ ಆರೋಪಿತರೆಂದು ಹೇಳಲಾಗಿರುವ ವಿರಾಜಪೇಟೆ ತಾಲ್ಲೂಕಿನ ತಹಶೀಲ್ದಾರರಾದ ಶ್ರೀ ಚಿಕ್ಕಹೊನ್ನಪ್ಪ, ಸದರಿ ತಾಲ್ಲೂಕಿನ ಪೊನ್ನಾಂಪೇಟೆಯ ಉಪ ತಹಶೀಲ್ದಾರರಾದ ಶ್ರೀ ಎ.ಕೆ. ನಾಣಯ್ಯ ಹಾಗೂ ವಿರಾಜಪೇಟೆ ತಾಲ್ಲೂಕು ಕಛೇರಿಯ ಕಂದಾಯ ನಿರೀಕ್ಷಕರಾದ ಶ್ರೀ ರಾಮಯ್ಯ ಇವರುಗಳ ವಿರುದ್ಧ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 ಮತ್ತು 11ಎ ರನ್ವಯ ಇಲಾಖಾ ವಿಚಾರಣೆ ಜರುಗಿಸಲು ಈ ಪ್ರಕರಣವನ್ನು ಅದೇ ನಿಯಮಾವಳಿಯ ನಿಯಮ 14–ಎ ರಡಿಯಲ್ಲಿ ಮಾನ್ಯ ಲೋಕಾಯುಕ್ತರು, ಬೆಂಗಳೂರು ಇವರಿಗೆ ಮೇಲೆ ಓದಲಾದ ಕ್ರ.ಸಂ. (2)ರ ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 18 ಎಡಿಇ 2003, ದಿನಾಂಕ: 25–6–2003ರಲ್ಲಿ ಮಾನ್ಯ ಲೋಕಾಯುಕ್ತರು, ಬೆಂಗಳೂರು ಇವರಿಗೆ ವಹಿಸಿಕೊಡಲಾಗಿರುತ್ತದೆ.

ಈ ಬಗ್ಗೆ ಕೂಲಂಕಷವಾಗಿ ತನಿಖೆ ನಡೆಸಿ ಮಾನ್ಯ ಉಪ ಲೋಕಾಯುಕ್ತ, ಕರ್ನಾಟಕ, ಬೆಂಗಳೂರು ಇವರು ಈ ಕೆಳಕಂಡ ಆರೋಪಿತ ಅಧಿಕಾರಿ / ನೌಕರರ ಆಪಾದನೆ ಸಾಬೀತಾಗಿದೆಯೆಂದು ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮಗಳ ನಿಯಮ 8ರನ್ವಯ ದಂಡನೆಯನ್ನು ವಿಧಿಸಲು ಮೇಲೆ ಓದಲಾದ ಕ್ರ.ಸಂ. (3)ರ ದಿನಾಂಕ: 17–10–2005ರಂದು ಸರ್ಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

1. ಶ್ರೀ ಚಿಕ್ಕಹೊನ್ನಪ್ಪ, ಹಿಂದಿನ ತಹಶೀಲ್ದಾರ್, ವಿರಾಜಪೇಟೆ
2. ಶ್ರೀ ಎ.ಕೆ. ನಾಣಯ್ಯ, ಉಪತಹಶೀಲ್ದಾರ್, ಪೊನ್ನಾಂಪೇಟೆ ನಾಡ ಕಛೇರಿ
3. ಶ್ರೀ ರಾಮಯ್ಯ, ರಾಜಸ್ವ ನಿರೀಕ್ಷಕರು, ವಿರಾಜಪೇಟೆ ತಾಲ್ಲೂಕು ಕಛೇರಿ

ಮಾನ್ಯ ಉಪಲೋಕಾಯುಕ್ತರ ವರದಿಯನ್ವಯ, ಮೇಲೆ ಓದಲಾದ ಕ್ರ.ಸಂ. (4ರ ದಿನಾಂಕ: 20–12–2005ರಲ್ಲಿ 2ನೇ ಕಾರಣ ಕೇಳುವ ನೋಟೀಸನ್ನು ಮೇಲ್ಕಂಡ 3 ಆರೋಪಿತ ಅಧಿಕಾರಿ/ನೌಕರರಿಗೆ ಜಾರಿ ಮಾಡಲಾಗಿತ್ತು. ಸದರಿಯವರುಗಳಿಗೆ ಕ್ರಮವಾಗಿ ದಿನಾಂಕ: 9–1–2006, 5–1–2006 ಮತ್ತು 5–1–20006ರಲ್ಲಿ ಲಿಖಿತ ಸಮಜಾಯಿಷಿಯನ್ನು ನೀಡುತ್ತಾ ತಮ್ಮ ಆರೋಪವನ್ನು ಅಲ್ಲಗೆಳೆಯುತ್ತಾ ಶ್ರೀ ಚಿಕ್ಕಹೊನ್ನಪ್ಪ ತಹಶೀಲ್ದಾರ್ ಇವರು ಮನವಿಯನ್ನು ತಾವು ದಿನಾಂಕ: 21–05–2001 ರಿಂದ 16.06.2003ರವರೆಗೆ ವಿರಾಜಪೇಟೆ ತಾಲ್ಲೂಕ್ ತಹಶೀಲ್ದಾರರಾಗಿ ಕಾರ್ಯನಿರ್ವಹಿಸುತ್ತಿರುವುದರಿಂದ ತಾವು ದಿನಾಂಕ: 26.01.2001ರಲ್ಲಿ ಜಿಲ್ಲಾಧಿಕಾರಿಗಳಿಗೆ ತಪ್ಪು ಮಾಹಿತಿ ನೀಡಿದಕ್ಕಾಗಿ ಕರ್ತವ್ಯ ಲೋಪದ ಆರೋಪಣಾ ಹೊರಿಸಿದ್ದು ಸೂಕ್ತವಲ್ಲವೆಂದು ತಮ್ಮನ್ನು ಆರೋಪದಿಂದ ಮುಕ್ತಗೊಳಿಸಬೇಕೆಂದು ಕೋರಿರುವರು. ಆದರೆ ಸದರಿಯವರು ನಂತರದಲ್ಲಿ ಈ ಪ್ರಕರಣದಲ್ಲಿ ಅತಿಕ್ರಮಣವನ್ನು ಖುಲಾಸೆ ಮಾಡಲು ಕ್ರಮ ಜರುಗಿಸಿರುತ್ತಾರೆ. ಹಾಗೂ ವಿಚಾರಣಾ ಸಮಯದಲ್ಲಿ ಈ ವಿಷಯವನ್ನು ವಿಚಾರಣಾಧಿಕಾರಿಗಳ ಮುಂದೆ ತರಲು ವಿಫಲರಾಗಿರುವರು. ಆದುದರಿಂದ, ಇವರ ಮನವಿಯನ್ನು ಈ ಹಂತದಲ್ಲಿ ಪರಿಗಣಿಸಲು ಸಾಧ್ಯವಾಗಿರುವುದಿಲ್ಲ. ಶ್ರೀ ಎ.ಕೆ. ನಾಣಯ್ಯ, ಉಪ ತಹಶೀಲ್ದಾರ್ ಹಾಗೂ ಶ್ರೀ ಯು.ಟಿ. ರಾಮಯ್ಯ ಕಂದಾಯ ನಿರೀಕ್ಷಕರು ಇವರು ತಮ್ಮ ಮನವಿಯನ್ನು ಒತ್ತುವರಿ ಮಾಡಿ ಬೇಲಿ ಹಾಕಿದ ಭಾಗವು ಫಸಲು ಜಮೀನಾಗಿದ್ದು, ಇದು ಗೋಮಾಳ ಜಮೀನು ಆಗಿರುವುದಿಲ್ಲವೆಂದು ತಿಳಿಸಿರುವರು, ಒತ್ತುವರಿದಾರರು ಪದೇ ಪದೇ ಖುಲ್ಲಾಪಡಿಸಿದ ಜಾಗಕ್ಕೆ ಬೇಲಿ ಹಾಕಿದ್ದಾರಿಂದ ಅವರು ಕಾಫಿ ವ್ಯವಸಾಯ ಮಾಡಿದ ಭಾಗದಲ್ಲಿ ಗಿಡಗಳನ್ನು ಕತ್ತರಿಸಿ ತೆರವುಗೊಳಿಸಿದ್ದರಿಂದ ಮಾನವೀಯ ದೃಷ್ಟಿಯಿಂದ ಒತ್ತುವರಿಗೆ ಟಿ.ಟಿ. ಜುಲ್ಮಾನೆ ವಿಧಿಸಿ ಅವರ ಮೇಲೆ ಭಾರತ ದಂಡ ಸಂಹಿತೆ ಮೇರೆಗೆ ಅತಿಕ್ರಮ ಮಾಡಿದ ಕೇಸು ದಾಖಲು ಮಾಡಿರುವುದಿಲ್ಲವೆಂದು ಅದು ಮಾಡದೇ ಇರುವುದಕ್ಕೆ ತಪ್ಪಾಗಿರುತ್ತದೆ ಎಂದು ತಿಳಿಸಿ ತಮ್ಮ ಮೇಲೆ ಹೊರಿಸಲಾದ ಆಪಾದನೆಗಳಿಂದ ಮುಕ್ತ ಮಾಡಲು ಕೋರಿರುತ್ತಾರೆ. ಈ ಎಲ್ಲಾ ವಿಷಯಗಳು ವಿಚಾರಣೆಗಳಲ್ಲಿ ಪರಿಗಣನೆಗೆ ತೆಗೆದುಕೊಂಡಿದ್ದು ಹೊಸ ಅಂಶಗಳು ಯಾವುದು ಇರುವುದಿಲ್ಲವೆಂದು ಗಮನಿಸಿ ಅವರು ಸಮಾಜಾಯಿಷಿ 2005ರಲ್ಲಿ ಮಾನ್ಯ ಉಪಲೋಕಾಯುಕ್ತರು ಶಿಫಾರಸ್ಸು ಮಾಡಿರುವ ದಂಡನೆಯನ್ನು ಸರ್ಕಾರವು ಒಪ್ಪಿ ಈ ಕೆಳಕಂಡಂತೆ ದಂಡನೆ ಆದೇಶವನ್ನು ವಿಧಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 18 ಎಡಿಇ 2003, ದಿನಾಂಕ: 3–8–2007.**

ಮೇಲೆ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಮಾನ್ಯ ಉಪಲೋಕಾಯುಕ್ತರು, ಬೆಂಗಳೂರು ಇವರು ಶಿಫಾರಸ್ಸು ಮಾಡಿರುವಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮಗಳ ನಿಯಮ 8(iii)ರನ್ವಯ ಈ ಪ್ರಕರಣದಲ್ಲಿ ಭಾಗಿಯಾಗಿರುವ ಈ ಕೆಳಕಾಣಿಸಿದ ಅಧಿಕಾರಿ ನೌಕರರಿಗೆ ದಂಡನೆಯನ್ನು ವಿಧಿಸಿ ಆದೇಶಿಸಿದೆ.

1. ಶ್ರೀ ಚಿಕ್ಕಹೊನ್ನಪ್ಪ, ಹಿಂದಿನ ತಹಶೀಲ್ದಾರ್, ವಿರಾಜಪೇಟೆ (ಪ್ರಸ್ತುತ ತಹಶೀಲ್ದಾರ್, ಮಳವಳ್ಳಿ ತಾಲ್ಲೂಕು) ಇವರಿಗೆ ಸಂಚಿತ ಪರಿಣಾಮ ಸಹಿತವಾಗಿ ಒಂದು ವಾರ್ಷಿಕ ಬಡ್ತಿಯನ್ನು ಶಾಶ್ವತವಾಗಿ ತಡೆಹಿಡಿಯುವುದು.
2. ಶ್ರೀ ಎ.ಕೆ. ನಾಣಯ್ಯ, ಉಪತಹಶೀಲ್ದಾರ್, ಪೊನ್ನಾಂಪೇಟೆ ನಾಡ ಕಛೇರಿ, ಇವರಿಗೆ ಸಂಚಿತ ಪರಿಣಾಮ ಸಹಿತವಾಗಿ ಒಂದು ವಾರ್ಷಿಕ ಬಡ್ತಿಯನ್ನು ಶಾಶ್ವತವಾಗಿ ತಡೆಹಿಡಿಯುವುದು.
3. ಶ್ರೀ ರಾಮಯ್ಯ, ರಾಜಸ್ವ ನಿರೀಕ್ಷಕರು, ವಿರಾಜಪೇಟೆ ತಾಲ್ಲೂಕು ಕಛೇರಿ, ಇವರಿಗೆ ಸಂಚಿತ ಪರಿಣಾಮ ಸಹಿತವಾಗಿ ಒಂದು ವಾರ್ಷಿಕ ಬಡ್ತಿಯನ್ನು ಶಾಶ್ವತವಾಗಿ ತಡೆಹಿಡಿಯುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1564

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಆನಂದರಾಮ ಮಧ್ಯಸ್ಥ, ನಿವೃತ್ತ ತಹಶೀಲ್ದಾರ್ ಇವರಿಗೆ ಸ್ಥಗಿತ ವೇನ ಬಡ್ತಿಗಳನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1 ಮಹಾಲೇಖಪಾಲರು (ಎ&ಇ), ಕರ್ನಾಟಕ ಬೆಂಗಳೂರು ಇವರ ಪತ್ರ ಸಂ: GE1/RI/PF-128/A-125/58/652 ದಿನಾಂಕ: 31–8–2005.
2 ಶ್ರೀಯುತರ ಮನವಿ ದಿನಾಂಕ: 29–3–2007 ಮತ್ತು 3–4–2006.

**ಪ್ರಸ್ತಾವನೆ:**

ಶ್ರೀ ಆನಂದರಾಮ ಮಧ್ಯಸ್ಥ, ಹಿಂದಿನ ಶಿರಾ ತಹಶೀಲ್ದಾರ್ ಇವರು ದಿನಾಂಕ: 31–5–2005 ರಂದು ಸರ್ಕಾರಿ ಸೇವೆಯಿಂದ ವಯೋ ನಿವೃತ್ತಿ ಹೊಂದಿರುತ್ತಾರೆ. ಸದರಿಯವರು ದಿನಾಂಕ: 1–8–2004 ರಿಂದ ಮೊದಲನೇ ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡುವಂತೆ ಮೇಲೆ ಓದಲಾದ ಕ್ರ.ಸಂ. (2)ರಲ್ಲಿ ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿರುತ್ತಾರೆ. ಕ್ರ.ಸಂ. (1)ರಲ್ಲಿ ಓದಲಾದ ದಿನಾಂಕ: 31–8–2005ರ ಪತ್ರದಲ್ಲಿ ಮಹಾಲೇಖಪಾಲರು ಶ್ರೀ ಆನಂದರಾಮ ಮಧ್ಯಸ್ಥ ಇವರು ವೇತನ ಶ್ರೇಣಿ ರೂ. 6000–11,200 ರಲ್ಲಿ ದಿನಾಂಕ: 1–8–2003 ರಂದು ಗರಿಷ್ಠ ಮಿತಿ ತಲುಪಿದ್ದು ದಿನಾಂಕ: 1–8–2004 ರಿಂದ ಮೊದಲನೇ ಸ್ಥಗಿತ ವೇತನ ಬಡ್ತಿ ಮಾತ್ರ ಪಡೆಯಲು ಅರ್ಹರಿರುವುದಾಗಿ ವರದಿ ಮಾಡಿರುವ ಹಿನ್ನಲೆಯಲ್ಲಿ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂ: ಆರ್‌ಡಿ 174 ಎಎಸ್‌ಡಿ 2006, ಬೆಂಗಳೂರು ದಿನಾಂಕ: 7–11–2007**

ಪ್ರಸ್ತಾವನೆಯನ್ನು ವಿವರಿಸಿದ ಕಾರಣಗಳ ಹಿನ್ನಲೆಯಲ್ಲಿ ಸರ್ಕಾರವು ಶ್ರೀ ಆನಂದರಾಮ ಮಧ್ಯಸ್ಥ, ನಿವೃತ್ತ ತಹಶೀಲ್ದಾರ್ ಇವರಿಗೆ ವೇತನ ಶ್ರೇಣಿ ರೂ. 6000–11,200 ರಲ್ಲಿ ಈ ಕೆಳಕಂಡಂತೆ ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡಿದೆ.

ದಿನಾಂಕ: 1–8–2004 ರಿಂದ ರೂ. 11,200+320 ಪ್ರಥಮ ಸ್ಥಗಿತ ವೇತನ ಬಡ್ತಿ

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1972

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಜಿ.ವೈ. ಕಳ್ಳಿಮನಿ, ಹಿಂದಿನ ಹಿರಿಯ ಉಪ ನೋಂದಣಾಧಿಕಾರಿಗಳು, ಧಾರವಾಡ, ಹಾಲಿ ಅಧೀಕ್ಷಕರು, ಜಿಲ್ಲಾ ನೋಂದಣಿ ಕಛೇರಿ, ಗದಗ್ ಇವರ ವಿರುದ್ಧವಿದ್ದ ಇಲಾಖಾ ವಿಚಾರಣೆ ಕುರಿತು.

**ಓದಲಾಗಿದೆ:**

1 ದಿನಾಂಕ: 31.10.2001ರ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಅಯುಕ್ತರವರ ಆದೇಶ ಸಂಖ್ಯೆ: ಸಿಆರ್‌ಪಿ (2) 85/98–99.

2 ದಿನಾಂಕ: 29.06.2006ರ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ: 2225/2002ರ ಮೇಲಿನ ತೀರ್ಪು.

3. ದಿನಾಂಕ: 06.07.2006 ರಂದು ಸಲ್ಲಿಸಲಾದ ಅಧಿಕಾರಿಯ ಮೇಲ್ಮನವಿ.

4. ಅಧಿಕಾರಿಯ ಪುನರ್ ಪರಿಶೀಲನಾ ಅರ್ಜಿ ದಿನಾಂಕ: 02.07.2007.

5. ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ: ಸಿಆರ್‌ಪಿ (2)=85/98–99, ದಿನಾಂಕ: 22.06.2007.

**ಪ್ರಸ್ತಾವನೆ:**

ಶ್ರೀ ಜಿ.ವೈ ಕಳ್ಳಿಮನಿ, ಅಧಿಕ್ಷಕರು, ಜಿಲ್ಲಾ ನೋಂದಣಿ ಕಛೆರಿ, ಗದಗ್ ಇವರು ಧಾರವಾಡ ಉಪ ನೋಂದಣಿ ಕಛೆರಿಯಲ್ಲಿ ಹಿರಿಯ ಉಪ ನೋಂದಣಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಈ ಕೆಳಕಂಡ ದಸ್ತಾವೇಜುಗಳನ್ನು ನೋಂದಾಯಿಸುವ ಸಮಯದಲ್ಲಿ ಸ್ಥಿರಾಸ್ತಿಯ ಮೌಲ್ಯವು ಅಂದು ಪ್ರಚಲಿತವಿದ್ದ ಮಾರುಕಟ್ಟೆ ಬೆಲೆಗೆ ಅನುಗುಣವಾಗಿಲ್ಲವೆಂದು ಹಾಗೂ ಎಲ್ಲಾ ದಸ್ತಾವೇಜುಗಳಲ್ಲಿ ಒಳಗೊಂಡಿರುವ ಆಸ್ತಿಗಳು ಅಪಮೌಲ್ಯವಾಗಿವೆ ಎಂದು ತಿಳಿದಿರೂ ಸಹ ಕರ್ನಾಟಕ ಮುದ್ರಾಂಕ ಕಾಯಿದೆ, 1957 ರ ಕಲಂ 45 ಎ(1) ರಡಿಯಲ್ಲಿ ಜಿಲ್ಲಾ ನೋಂದಣಾಧಿಕಾರಿಗಳು, ಧಾರವಾಡ ಇವರಿಗೆ ಅಪಮೌಲ್ಯ ನಿರ್ಧರಣೆ ಮಾಡಲು ದಸ್ತಾವೇಜುಗಳನ್ನು ಹಸ್ತಾಂತರಿಸದೇ ತಮ್ಮ ಹಂತದಲ್ಲಿಯೇ ವೈಯಕ್ತಿಕ ಲಾಭಕ್ಕಾಗಿ ವಿಲೇ ಮಾಡುವ ಮೂಲಕ ಕರ್ತವ್ಯ ಲೋಪ ಎಸಗಿರುವುದರಿಂದಾಗಿ, ಸರ್ಕಾರಕ್ಕೆ ಬರಬೇಕಾದ ಮುದ್ರಾಂಕ ಶುಲ್ಕ ಹಾಗೂ ನೋಂದಣಿ ಶುಲ್ಕ ಒಟ್ಟು ರೂ. 45,800/– ಗಳ ರಾಜಸ್ವ ನಷ್ಟ ಉಂಟು ಮಾಡಲು ಕಾರಣರಾಗಿರುತ್ತಾರೆ ಎಂಬ ಹಿನ್ನೆಲೆಯಲ್ಲಿ ಇಲಾಖಾ ವಿಚಾರಣೆ ನಡೆಸಿ ಮೇಲೆ (1)ರಲ್ಲಿ ಓದಲಾಗಿರುವ ದಿನಾಂಕ: 31.10.2001ರ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 8 (iv)ರನ್ವಯ ಸರ್ಕಾರಕ್ಕೆ ಉಂಟಾದ ರಾಜಸ್ವ ನಷ್ಟವನ್ನು ಒಂದೇ ಕಂತಿನಲ್ಲಿ ವಸೂಲು ಮಾಡಿ ರಾಜ್ಯ ಖಜಾನೆಗೆ ಪಾವತಿಸತಕ್ಕದ್ದೆಂದು ಆದೇಶಿಸಲಾಗಿರುತ್ತದೆ.

| ಕ್ರ.ಸಂ. | ದಸ್ತಾವೇಜು ಸಂಖ್ಯೆ: ವರ್ಷ | ವಸೂಲಾಗಬೇಕಾದ ಕೊರತೆ | | ಜುಮ್ಲಾ |
|---|---|---|---|---|
| | | ಮುದ್ರಾಂಕ ಶುಲ್ಕ | ನೋಂದಣಿ ಶುಲ್ಕ | |
| 1. | 100:1995–96 | 13080 | 2180 | 15260 |
| 2. | 122:1995–96 | 11040 | 1840 | 12880 |
| 3. | 197:1995–96 | 12180 | 2040 | 14220 |

ಮೇಲೆ (1)ರಲ್ಲಿ ಓದಲಾಗಿರುವ ದಿನಾಂಕ: 31.10.2001 ಆದೇಶದ ವಿರುದ್ಧ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಮುಂದೆ ಸದರಿ ಅರ್ಜಿ ಸಂಖ್ಯೆ: 2225/2002 ಸಲ್ಲಿಸಿದ್ದು, ಆ ಬಗ್ಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ: 29.06.2006 ರಂದು ನೀಡಲಾಗಿರುವ ತೀರ್ಪು ಈ ಕೆಳಕಂಡಂತಿದೆ.

"If the Applicant files an appeal before the Appellate Authority within the aforesaid period of one month, the Appelate Authority is directed to consider the appeal on merits and pass appropriate orders in accordance with law without raising the question of limitation since the Applicant has been prosecuting the present Application bonafide."

Accordingly, the Application is disposed of.

ಮೇಲೆ (3)ರಲ್ಲಿ ಓದಲಾಗಿರುವ ದಿನಾಂಕ: 06–07.2006ರ ಮೇಲ್ಮನವಿಯಲ್ಲಿ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರು ಅಭಿಪ್ರಾಯ ಪಟ್ಟಿರುವಂತೆ 3 ದಸ್ತಾವೇಜುಗಳಿಂದ ಸರ್ಕಾರಕ್ಕೆ ರಾಜಸ್ವ ನಷ್ಟ ಉಂಟಾಗಿದೆ ಎಂದು ಪ್ರತಿಪಾದಿಸಿರುವುದಕ್ಕೆ ನಿರ್ಧಿಷ್ಟ ನಿಯಮಗಳ ಬಗ್ಗೆ ಉಲ್ಲೇಖಿಸಿರುವುದಿಲ್ಲ. ಈ ರೀತಿಯ ಪ್ರತಿಪಾದನೆಗೆ ಯಾವುದೇ ರೀತಿಯ ನಿಯಮಗಳನ್ನು ಉಲ್ಲೇಖಿಸದೇ ದಸ್ತಾವೇಜು ನೋಂದಣಿ ಮಾಡಿರುವುದು ತಪ್ಪು ಎಂಬ ತೀರ್ಮಾನಕ್ಕೆ ಬರಲಾಗಿರುವುದು ಸಹ ಕೇವಲ ಊಹಾಪೋಹಗಳಿಂದ ಒಡಗೂಡಿದೆ ಎಂದು ಪ್ರಸ್ತಾಪಿಸಿರುತ್ತಾರೆ. ಅಲ್ಲದೇ, ಸದರಿ ದಸ್ತಾವೇಜುಗಳ ಗೃಹ ನಿರ್ಮಾಣ ಸಹಕಾರಿ ಸಂಘಗಳು ತನ್ನ ಸದಸ್ಯರುಗಳಿಗೆ ಹಲವು ಷರತ್ತುಗಳಿಗೆ ಒಳಪಟ್ಟು ಮಂಜೂರು ಮಾಡಲಾದ ನಿವೇಶನಗಳನ್ನು ಸದಸ್ಯರುಗಳು ಪುನಃ ಸಂಘಕ್ಕೆ ಬಿಟ್ಟುಕೊಟ್ಟಂತಹ ನೋಂದಣಿಗೆ ಸಂಬಂಧಿಸಿದವುಗಳಾಗಿದ್ದು, ಈ ವ್ಯವಹಾರದಿಂದಾಗಿ, ಗೃಹ ನಿರ್ಮಾಣ ಸಹಕಾರಿ ಸಂಘಗಳ ಸದಸ್ಯರುಗಳು ಯಾವುದೇ ರೀತಿಯ ಲಾಭ ಪಡೆಯದೇ ಮಂಜೂರಾತಿ ಆದೇಶದಲ್ಲಿನ ಷರತ್ತುಗಳನ್ನು ಪೂರೈಸಲು ಆಗದ ಪ್ರಯುಕ್ತ ಸಂಘಕ್ಕೆ ಬಿಟ್ಟು ಕೊಟ್ಟಿರುವುದಕ್ಕೆ (surrendered) ಸಂಬಂಧಿಸಿದವುಗಳಾದ್ದರಿಂದ, ಮಾರುಕಟ್ಟೆ ಬೆಲೆ ಅನ್ವಯವಾಗುವುದಿಲ್ಲ ಎಂಬ ಅಭಿಪ್ರಾಯ ವ್ಯಕ್ತಪಡಿಸಲಾಗಿದೆ. ಈ ಹೇಳಿಕೆಯನ್ನು ದಿನಾಂಕ: 23.03.1998 ರಂದು ವಿಭಾಗೀಯ ಆಯುಕ್ತರು, – ಬೆಳಗಾಂವ್ ಇವರು ನೀಡಲಾಗಿರುವ ಇಂತಹದೇ ಪ್ರಕರಣದಲ್ಲಿನ ಆದೇಶ ಲಗತ್ತಿಸುವ ಮೂಲಕ ಕೋರಿಕೆ ಸಲ್ಲಿಸಿದ್ದು, ಸದರಿ ಆದೇಶದ ಉದೃತ ಭಾಗ ಈ ಕೆಳಕಂಡಂತಿದೆ.

"However, the main plea of the appellant is that, there is not sale transaction in between society and member, it is a surrender of plot back to the society for the rate of allotment to him at Rs. 8,000/- This clearly shows that, there is no occasion for treating this transaction as open sale transaction to fetch open market value. Thus impugned order of the Respondent deserves to be set aside on this ground only.

Therefore, the appeal is allowed and the impugned order of the Respondent is set aside. The Respondent should return the original sale deed to the appellant after following the procedure prescribed No costs.

ಪ್ರಸ್ತುತ ಮೇಲ್ಮನವಿಯ ಕುರಿತು ಸರ್ಕಾರದ ಕಾರ್ಯದರ್ಶಿಗಳು ಕಂದಾಯ ಇಲಾಖೆ ಹಾಗೂ ಮೇಲ್ಮನವಿ ಪ್ರಾಧಿಕಾರವು ಪ್ರಸ್ತುತ ವಿಷಯದ ಬಗ್ಗೆ ವಿಚಾರಣೆ ನಡೆಸಿ, ದಿನಾಂಕ: 17.02.2007 ರಂದು 3 ದಸ್ತಾವೇಜಿಗೆ ಸಂಬಂಧಿಸಿದಂತೆ, ರಾಜಸ್ವ ನಷ್ಟ ಉಂಟಾಗಿರುವ ರೂ. 42,350/–ಗಳನ್ನು ಶ್ರೀ ಜಿ.ವೈ. ಕಳ್ಳಿಮನಿ ಇವರಿಂದ ವಸೂಲಾಯಿಸುವಂತೆ ಆದೇಶಿಸಿರುತ್ತಾರೆ.

ಸದರಿ ತೀರ್ಪಿನ ವಿರುದ್ಧ ಮೇಲೆ ಓದಲಾಗಿರುವ (4) ದಿನಾಂಕ: 02.07.2007 ರಂದು ಸದರಿ ಅಧಿಕಾರಿಯು ಸಲ್ಲಿಸಲಾಗಿರುವ ಪುನರ್ ಪರಿಶೀಲನಾ ಅರ್ಜಿಯಲ್ಲಿ ಈ ಕೆಳಕಂಡ ಅಭಿಪ್ರಾಯ ವ್ಯಕ್ತಪಡಿಸುವ ಮೂಲಕ ಆರೋಪದಿಂದ ಮುಕ್ತಗೊಳಿಸುವಂತೆ ಕೋರಿರುತ್ತಾರೆ.

1) ಗೃಹ ನಿರ್ಮಾಣ ಸಹಕಾರಿ ಸಂಘದ ಸದಸ್ಯರುಗಳು ಮಂಜೂರಾದ ನಿವೇಶನವನ್ನು ಬಿಟ್ಟು ಕೊಟ್ಟಿರುವುದರಿಂದ (surrender) ಈ ದಸ್ತಾವೇನುಗಳು ಮಾರುಕಟ್ಟೆ ಬೆಲೆ ವ್ಯಾಪ್ತಿಗೆ ಒಳಪಡುವುದಿಲ್ಲ. ಏಕೆಂದರೆ, ಈ ವ್ಯವಹಾರವು ಸಂಘದ ಕಾರ್ಯವ್ಯಾಪ್ತಿಗೆ ಒಳಪಡುತ್ತದೆ.
2) ಗೃಹ ನಿರ್ಮಾಣ ಸಹಕಾರಿ ಸಂಘದ ಷರತ್ತುಗಳನ್ನು ಪಾಲಿಸಲು ಸಾಧ್ಯವಾಗದ ಪ್ರಯುಕ್ತ ಯಾವುದೇ ವೈಯಕ್ತಿಕ ಲಾಭವಿಲ್ಲದೇ ಮೂಲ ಸಂಸ್ಥೆಗೆ ನಿವೇಶನಗಳನ್ನು ಬಿಟ್ಟು ಕೊಟ್ಟಿರುವುದರಿಂದ ಈ ವ್ಯವಹಾರವು ಕರ್ನಾಟಕ ಮುದ್ರಾಂಕ ಕಾಯಿದೆ 1957ರ ಕಲಂ 45 ಎ(1) ವ್ಯಾಪ್ತಿಗೆ ಒಳಪಡುವುದಿಲ್ಲ. ಇದರಿಂದಾಗಿ, ಮಾರುಕಟ್ಟೆ ಮೌಲ್ಯದಂತೆ ಮುದ್ರಾಂಕ ಶುಲ್ಕ ವಿಧಿಸುವುದು ಸಮಂಜಸವಲ್ಲ. ಅಲ್ಲದೇ ಸದರಿ ಕಲಂ ವ್ಯಾಪ್ತಿಗೆ ತರುವ ಬಗ್ಗೆ ಯಾವುದೇ ನಿರ್ದಿಷ್ಟ ಸೂಚನೆ ಹಾಗೂ ನಿಯಮಗಳು ಇರುವುದಿಲ್ಲ.

3) ಇಂತಹ ಪ್ರಕರಣದಲ್ಲಿ ಸರ್ಕಾರದ ಸ್ಪಷ್ಟ ನಿಯಮ / ಆದೇಶವಿಲ್ಲದೇ ಕೇವಲ ಊಹಾಪೋಹದ ಆಧಾರದ ಹಿನ್ನೆಲೆಯಲ್ಲಿ ಪ್ರಚಲಿತ ಮಾರುಕಟ್ಟೆ ಮೌಲ್ಯ ಅನ್ವಯಿಸುವಂತೆ ಪರಿಗಣಿಸುವುದು ಸೂಕ್ತವಲ್ಲ.

4) ಸದರಿ ಉಪ ನೋಂದಣಿ ಕಛೇರಿ ಪರಿವೀಕ್ಷಣೆ ಸಮಯದಲ್ಲಿ ಇಂತಹದೇ ಕೆಲವು ಪ್ರಕರಣಗಳಲ್ಲಿ ಯಾವುದೇ ಶಿಸ್ತಿನ ಕ್ರಮ ಜರುಗಿಸದೇ ಕೇವಲ 3 ದಸ್ತಾವೇಜುಗಳಿಗೆ ಸಂಬಂಧಿಸಿದಂತೆ ಮಾತ್ರ ಆಕ್ಷೇಪಣೆ ವ್ಯಕ್ತಪಡಿಸಿರುವುದು ನ್ಯಾಯಸಮ್ಮತವಲ್ಲ. ಪ್ರಸ್ತುತ ದಸ್ತಾವೇಜಿಗೆ ಸಂಘದ ಸದಸ್ಯರುಗಳೇ ಸಂಘಕ್ಕೆ ಬರೆದು ಕೊಟ್ಟಂತಹ ಸರೆಂಡರ್ ಡೀಡ್‌ಗಳಾಗಿರುವುದರಿಂದ, ಈ ಕೆಳಕಂಡ ವ್ಯಾಖ್ಯಾನವನ್ನು ಅರ್ಥೈಸುವಲ್ಲಿ ವಿಫಲರಾಗಿರುವುದು ಕಂಡು ಬರುತ್ತದೆ.

"Any instrument of conveyance effected by House Building Co-operative Society, Registered under the K.C.S. Act, 1959 (K. Act.11 of 1959) ಎಂಬ ವಿವರಣೆಯ ಅಥವಾ ವ್ಯಾಖ್ಯಾನದ ವ್ಯಾಪ್ತಿಗೆ ಒಳಪಡುತ್ತದೆ. "Effected By" ಎಂಬ ಪದವು ಕೇವಲ ಸಂಘವು ಅದರ ಸದಸ್ಯರಿಗೆ ಬರೆದು ಕೊಡುವ ಪತ್ರಗಳಿಗೆ ಮಾತ್ರ ಅನ್ವಯಿಸದೇ ಸದಸ್ಯರು ಸಂಘಕ್ಕೆ ಬರೆದು ದಸ್ತಾವೇಜುಗಳಿಗೂ ಸಹ ವಿಸ್ತರಿಸಿ ಅನ್ವಯಿಸತಕ್ಕದ್ದಾಗಿದೆ."

ಮೇಲೆ ವಿವರಿಸಿರುವ ಕಾರಣಗಳಿಂದಾಗಿ, ತಮ್ಮನ್ನು ಆರೋಪಗಳಿಂದ ಮುಕ್ತಗೊಳಿಸಿ ಹಿಂದಿನ ದಿನಾಂಕದಿಂದ ಬಡ್ತಿ ನೀಡಿ ನ್ಯಾಯ ಒದಗಿಸುವಂತೆ ಕೋರಿರುತ್ತಾರೆ.

ಮೇಲೆ (5)ರಲ್ಲಿ ಓದಲಾಗಿರುವ ದಿನಾಂಕ: 22.06.2007ರ ಪತ್ರದಲ್ಲಿನ ಗೃಹ ನಿರ್ಮಾಣ ಸಹಕಾರಿ ಸಂಘಗಳಿಗೆ ಸರ್ಕಾರವು ಸ್ಟಾಂಪ್ ವಿನಾಯಿತಿ ಆದೇಶಿಸಿ ರೂ. 8,000/–ದೊಳಗಿರುವ ಬೆಲೆಗೆ ಸಂಘಗಳು ಬರೆದು ಕೊಡುವ ಪತ್ರಗಳಿಗೆ ಪೂರ್ಣ ವಿನಾಯಿತಿಯನ್ನು (Table-I) ಮತ್ತು ಅದಕ್ಕಿಂತ ಹೆಚ್ಚಿನ ಮೌಲ್ಯದ ಪತ್ರಗಳಿಗೆ 50% ರಿಯಾಯಿತಿ (Table-II) ನೀಡಿ ಆದೇಶಿಸಿದೆ. (ದಿನಾಂಕ: 15.02.1969 ರ ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 33 ಜಿಎಸ್‌ಟಿ 62, ದಿನಾಂಕ: 15.02.1969ರಲ್ಲಿ ಆದೇಶಿಸಿದೆ.) ಈ ವಿನಾಯಿತಿ ಮತ್ತು ರಿಯಾಯತಿಗಳನ್ನು ದಿನಾಂಕ: 01.04.1982ರ ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 22 ಇಎಸ್‌ಆರ್ 82 ರಲ್ಲಿ ತೆಗೆದು ಹಾಕಲಾಗಿದೆ. ತದನಂತರ, ದಿನಾಂಕ: 22.02.1984ರ ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 49 ಇಎಸ್‌ಆರ್ 84 ರಲ್ಲಿ ರೂ. 8,000/– ಮೌಲ್ಯದವರಗೆ ಪುನಃ ವಿನಾಯಿತಿ ನೀಡಲಾಗಿದೆ. ಆನಂತರ, ಮೇಲ್ಕಂಡ ವಿನಾಯಿತಿಗಳನ್ನು ತೆಗೆದು ಹಾಕಲಾಗಿದೆ. ಇದರಿಂದಾಗಿ ಗೃಹ ನಿರ್ಮಾಣ ಸಹಕಾರಿ ಸಂಘಗಳಿಗೆ ಯಾವುದೇ ವಿನಾಯಿತಿ / ರಿಯಾಯಿತಿ ಇರುವುದಿಲ್ಲವೆಂದು ತಿಳಿಸುವ ಮೂಲಕ ಸದರಿ ಅಧಿಕಾರಿಯು ನಷ್ಟವಾಗಿರುವ ಮುದ್ರಾಂಕ ಶುಲ್ಕ ಕಟ್ಟಲು ಹೊಣೆಗಾರರಾಗಿರುವುದಾಗಿ ತಿಳಿಸಲಾಗಿದೆ. ಅಲ್ಲದೇ ನೋಂದಣಿ ನಿಯಮ 170 ರಡಿ ಇಲಾಖಾ ವಿಚಾರಣೆಯಲ್ಲಿ ನೀಡಲಾದ ಅಭಿಪ್ರಾಯವೇ ಕಾನೂನಿನ ಅಂತಿಮ ವ್ಯಾಖ್ಯಾನ ಎಂದು ಅಭಿಪ್ರಾಯ ಪಡುವುದು ಸಾಧುವಲ್ಲ. ಈ ಕಾರಣಕ್ಕಾಗಿ ಇಲಾಖಾ ವಿಚಾರಣೆಯಿಂದ ನಿಯಮ 170 ರಡಿ ವಸೂಲು ಮಾಡುವ ವಿಷಯವನ್ನು ಬೇರ್ಪಡಿಸಿ, ಶ್ರೀ ಕಳ್ಳಿಮನಿ ಇವರಿಗೆ ಪದೋನ್ನತಿ ನೀಡುವುದು ಸೂಕ್ತವೆಂದು ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರು ಅಭಿಪ್ರಾಯ ಪಟ್ಟಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 71 ಮುನೋಸೇ (2) 2006, ಬೆಂಗಳೂರು, ದಿನಾಂಕ: 05.10.2007.**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಜಿ.ವೈ. ಕಳ್ಳಿಮನಿ, ಅಧೀಕ್ಷಕರು, ಜಿಲ್ಲಾ ನೋಂದಣಿ ಕಛೇರಿ, ಗದಗ್ ರವರು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 18ರ ಅಡಿಯಲ್ಲಿ ಸಲ್ಲಿಸಿರುವ ಅಪೀಲನ್ನು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಅರ್ಜಿ ಸಂಖ್ಯೆ: 2225/2002ರ ಮೇಲೆ ದಿನಾಂಕ: 29.06.2006 ರಲ್ಲಿ ನೀಡಿರುವ ನಿರ್ದೇಶನಗಳ ಹಿನ್ನೆಲೆಯಲ್ಲಿ ಈ ಪ್ರಕರಣವನ್ನು ಪರಿಶೀಲಿಸಿ ಇವರ ವಿರುದ್ಧ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರು ಹೊರಡಿಸಿರುವ ದಿನಾಂಕ: 31.10.2001ರ ಆದೇಶದಲ್ಲಿನ ಕರ್ನಾಟಕ ನೋಂದಣಿ ನಿಯಮ 1960ರ ನಿಯಮ 170 ರಡಿಯ ಪ್ರಕರಣ ಬೇರ್ಪಡಿಸಿ ಶಿಸ್ತಿನ ಕ್ರಮದಿಂದ ಈ ನೌಕರರನ್ನು ಮುಕ್ತಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1901

**ಎಂ.ಎಫ್. ಯರಗೊಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ
(ನೋಂದಣಿ ಮತ್ತು ಮುದ್ರಾಂಕ)

**ವಿಷಯ:** ಶ್ರೀ ಜಿ.ಎನ್. ಬಸವರಾಜ, ತಹಶೀಲ್ದಾರ್ ಕಾರವಾರ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ:** 1 ಜಿಲ್ಲಾಧಿಕಾರಿಗಳು, ಉತ್ತರ ಕನ್ನಡ ಜಿಲ್ಲೆ, ಕಾರವರ ಇವರ ಪ್ರಸ್ತಾವನೆ: ಸಂ: ನಸ್ಥಸಂ: ಚುನಾವಣೆ.ವಿವ–34(6)/2007/08, ದಿನಾಂಕ: 4–10–2007.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 4-10-2007ರ ಜಿಲ್ಲಾಧಿಕಾರಿಗಳು ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರ ಪ್ರಸ್ತಾವನೆಯಲ್ಲಿ ದಿನಾಂಕ: 28-9-2007ರಂದು ನಗರಸಭೆ, ಕಾರವಾಡ ವಾರ್ಡ್ ಸಂ: 10, ಮತಗಟ್ಟೆ ಸಂಖ್ಯೆ: 15ರ ಬಿಟ್ಟುಹೋದ ಮತದಾರರ ಪಟ್ಟಿಯಲ್ಲಿ ಮತದಾರರು ಹೆಸರುಗಳ ಪ್ರತ್ಯೇಕ ಪಟ್ಟಿಯನ್ನು ತಯಾರಿಸಿ ಮತದಾನ ನಡೆಯುತ್ತಿದ್ದಾಗಲೇ ಗುರುತು ಮಾಡಿದ ಮತದಾರರ ಪಟ್ಟಿಗೆ ಸೇರಿಸಿ ಚುನಾವಣಾ ನಿಯಮಗಳನ್ನು ಉಲ್ಲಂಘನೆ ಮಾಡಿರುವುದರಿಂದ ಶ್ರೀಮತಿ ಶುಭಲತಾ, ಅಸ್ನೋಟಿಕರ ಹಾಗೂ ಅವರ ಮಗನಿಗೆ ಮತದಾನ ಮಾಡಲು ಅನುಕೂಲ ಮಾಡಿಕೊಡಲು ತಹಶೀಲ್ದಾರ್ ಕಾರವಾರ ಇವರು ಕಾರಣಕರ್ತರಾಗಿರುತ್ತಾರೆ, ಆದುದರಿಂದ ಚುನಾವಣಾ ನಿಯಮಗಳನ್ನು ಉಲ್ಲಂಘನೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ಶ್ರೀ ಬಸವರಾಜ, ತಹಶೀಲ್ದಾರ್, ಕಾರವಾರ ಇವರನ್ನು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ನಿಯಮಗಳನ್ವಯ ಸೇವೆಯಿಂದ ಅಮಾನತ್ತಿನಲ್ಲಿಟ್ಟು ಇಲಾಖಾ ವಿಚಾರಣೆ ಕೈಗೊಳ್ಳುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸರ್ಕಾರವು ಜಿಲ್ಲಾಧಿಕಾರಿಗಳು, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಶ್ರೀ ಜಿ.ಎನ್. ಬಸವರಾಜ, ತಹಶೀಲ್ದಾರ್, ಕಾರವಾರ ಇವರು ದಿನಾಂಕ: 28-9-2007ರಂದು ಜರುಗಿದ ನಗರ ಸ್ಥಳೀಯ ಸಂಸ್ಥೆಗಳ ಸಾರ್ವಜನಿಕ ಚುನಾವಣೆಯಲ್ಲಿ ನಗರಸಭೆ, ಕಾರವಾರ, ವಾರ್ಡ್ ನಂ. 10, ಮತಗಟ್ಟೆ ಸಂಖ್ಯೆ: 15ರ ಮತದಾರರ ಪಟ್ಟಿಯಲ್ಲಿ ಬಿಟ್ಟುಹೋದ ಮತದಾರರುಗಳ ಹೆಸರುಗಳ ಪ್ರತ್ಯೇಕ ಪಟ್ಟಿಯನ್ನು ತಯಾರಿಸಿ, ಗುರುತು ಮಾಡಿದ ಮತದಾರರ ಪಟ್ಟಿಗೆ ಸೇರಿಸಿ, ಚುನಾವಣಾ ನಿಯಮಗಳನ್ನು ಉಲ್ಲಂಘಿಸಿರುವುದು ಕರ್ನಾಟಕ ಸೇವಾ (ನಡತೆ) ನಿಯಮಾವಳಿ 1966ರ ನಿಯಮ 3 (ii) (iii)ನ್ನು ಉಲ್ಲಂಘನೆ ಆಗಿರುತ್ತದೆ. ಆದುದರಿಂದ ಈ ಆಪಾದನೆಯು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ನಿಯಮ 10 (i)(ಡಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಜಿ.ಎನ್. ಬಸವರಾಜ, ತಹಶೀಲ್ದಾರ್, ಕಾರವಾರ ಇವರ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇರಿಸಿ ಈ ಕೂಡಲೇ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತುಗೊಳಿಸಲು ನಿರ್ಧರಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ: ಆರ್‌ಡಿ 37 ಎಡಿಇ 2007, ಬೆಂಗಳೂರು ದಿನಾಂಕ: 9-10-2007**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣ ಹಿನ್ನಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10 (i) (ಡಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜಿ.ಎನ್. ಬಸವರಾಜ, ತಹಶೀಲ್ದಾರ್ ಕಾರವಾರ ತಾಲ್ಲುಕು, ಉತ್ತರ ಕನ್ನಡ ಜಿಲ್ಲೆ ಇವರನ್ನು ಅವರ ವಿರುದ್ಧ ಇಲಾಖಾ ವಿಚಾರಣೆ ಕಾಯ್ದಿರಿಸಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ.

ಸದರಿ ಅಧಿಕಾರಿಯು ಅಮಾನತ್ತಿನ ಅವಧಿಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 98ರನ್ವಯ ಜೀವನಾಧಾರ ಭತ್ಯ ಪಡೆಯಲು ಅರ್ಹರಿರುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಜಿಲ್ಲಾಧಿಕಾರಿಗಳು, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರ ಅನುಮತಿ ಪಡೆಯದೇ ಕೇಂದ್ರ ಸ್ಥಾನವನ್ನು ಬಿಡತಕ್ಕದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1842

**ರಾಮಚಂದ್ರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು-2)

**ವಿಷಯ:** ಹೊಸ ತಾಲ್ಲೂಕುಗಳನ್ನು ರಚನೆ ಮಾಡಲು ತಾಲ್ಲೂಕು ಪುನರ್ ರಚನಾ ಸಮಿತಿಯನ್ನು ನೇಮಿಸುವ ಕುರಿತು.

**ಪ್ರಸ್ತಾವನೆ:**

1956ರಲ್ಲಿ ಹೊಸ ಮೈಸೂರು ರಾಜ್ಯ ನಿರ್ಮಾಣವಾದ ನಂತರ ಸಣ್ಣಪುಟ್ಟ ಬದಲಾವಣೆಗಳನ್ನು ಮಾತ್ರ ತಾಲ್ಲೂಕು ಮಟ್ಟದಲ್ಲಿ ಮಾಡಲಾಗಿದೆ. ಆದರೆ, ಜಿಲ್ಲೆಗಳ ಪುನರ್ ವಿಂಗಡನೆಯನ್ನು ಮೂರು ಸಲ ಮಾಡಲಾಗಿದೆ. 1950ರ ದಶಕದಲ್ಲಿ ಸಮುದಯ ಅಭಿವೃದ್ಧಿ ಯೋಜನೆಗಳು (Community Development Programmes) ಜಾರಿಯಲ್ಲಿದ್ದಾಗಲೂ ಕೂಡ ಬೇರೆ ರಾಜ್ಯಗಳಲ್ಲಿ ತಾಲ್ಲೂಕುಗಳನ್ನು ವಿಭಜಿಸಿ ಅಭಿವೃದ್ಧಿ ಮಂಡಳಿಗಳನ್ನಾಗಿ (Development Block) ಮಾಡಲಾಗಿತ್ತು. ಆದರೆ ಕರ್ನಾಟಕದಲ್ಲಿ ತಾಲ್ಲೂಕುಗಳನ್ನೇ Block ಗಳೆಂದು ಪರಿಗಣಿಸಲಾಯಿತು. ಆಗಲೂ ಕೂಡ ತಾಲ್ಲೂಕುಗಳು ಪುನರ್ ರಚನೆ ಆಗಲಿಲ್ಲ. ಶ್ರೀ ವಾಸುದೇವರಾವ್ ಸಮಿತಿಯು ಕೆಲವು ಸೂಚನೆಗಳನ್ನು ಮಾಡಿದ್ದರೂ ಕೂಡ ತಾಲ್ಲೂಕುಗಳ ಪುನರ್ ರಚನೆ ಕಾರ್ಯ ಕೈಗೊಳ್ಳಲಿಲ್ಲ. ನಂತರ ಜಿಲ್ಲಾ ರಚನೆಗೆ ಸಂಬಂಧಿಸಿದಂತೆ ಹುಂಡೇಕರ್ ಹಾಗೂ ಗದ್ದಿಗೌಡರ್ ಸಮಿತಿಗಳು ಕೆಲವು ತಾಲ್ಲೂಕುಗಳ ರಚನೆಯ ಬಗ್ಗೆ ಮಾಡಿದ ಸೂಚನೆಗಳು ಕೂಡ ಜಾರಿಗೆ ಬರಲಿಲ್ಲ. ಹೀಗಾಗಿ ರಾಜ್ಯದಲ್ಲಿ ಈಗಿರುವ ತಾಲ್ಲೂಕುಗಳಲ್ಲಿ ಬಹಳಷ್ಟು ಅಪ್ರಯೋಗಿಕ ಅಂಶಗಳು ಆಡಳಿತಕ್ಕೆ ಸಹಕಾರಿಯಾಗಿಲ್ಲ. ಅವು ಕೆಳಗಿನಂತೆ ಇವೆ.

1. ಕೆಲವು ತಾಲ್ಲೂಕುಗಳು ಅತ್ಯಂತ ಚಿಕ್ಕದಾಗಿವೆ.
2. ಇನ್ನು ಕೆಲವು ತಾಲ್ಲೂಕುಗಳು ಅತ್ಯಂತ ದೊಡ್ಡ ಗಾತ್ರ ಹೊಂದಿದ್ದು ಸಮರ್ಥ ಆಡಳಿತಕ್ಕೆ ಅಡ್ಡಿಯಾಗಿವೆ.
3. ಕೆಲವು ತಾಲ್ಲೂಕುಗಳು ಕೇಂದ್ರ ಸ್ಥಾನಗಳು ಕೇಂದ್ರ ಸ್ಥಾನದಲ್ಲಿರದೆ ಅಸರ್ಮಕ ಸ್ಥಳದಲ್ಲಿ ಇವೆ.
4. ಕೆಲವು ದೊಡ್ಡ ತಾಲ್ಲೂಕುಗಳಲ್ಲಿ ತಾಲ್ಲೂಕು ಕೇಂದ್ರಕ್ಕಿಂತ ದೊಡ್ಡದಾದ ಪಟ್ಟಣಗಳು ವಿಶೇಷ ಸೌಲಭ್ಯಗಳನ್ನು ಹೊಂದಿ ಬೆಳೆದು ನಿಂತಿವೆ.
5. ಕೆಲವು ತಾಲ್ಲೂಕುಗಳಲ್ಲಿ ಅನುಕೂಲತೆಗಳೆ ಇಲ್ಲ. ಇದರಿಂದಾಗಿ ಸಾರ್ವಜನಿಕರಿಗೆ ಬಹಳ ತೊಂದರೆಯಾಗುತ್ತಿದೆ. ಇವುಗಳನ್ನು ಹೋಗಲಾಡಿಸಿ ಮಧ್ಯಮ ಗಾತ್ರದ ಆಡಳಿತಕ್ಕೆ ಅನುಕೂಲವಾಗುವಂತೆ ತಾಲ್ಲೂಕುಗಳನ್ನು ರಚಿಸಬೇಕಾಗುತ್ತದೆ.

ಈ ಹಿನ್ನಲೆಯಲ್ಲಿ ಹೊಸ ತಾಲ್ಲೂಕುಗಳನ್ನು ರಚಿಸುವುದು ಸಕಾಲಿಕವು ಹಾಗೂ ಸೂಕ್ತವು ಎಂಬುದನ್ನು ಮನಗಂಡ ಸರ್ಕಾರವು ಹೊಸ ತಾಲ್ಲೂಕುಗಳನ್ನು ರಚಿಸುವ ಬಗ್ಗೆ ಪುನರ್ ಪರಿಶೀಲಿಸಲು ತೀರ್ಮಾನಿಸಿ, ಪ್ರಸ್ತುತ ಕಾರ್ಯಕ್ಕೆ ಒಬ್ಬ ಅಧ್ಯಕ್ಷರು, ಮೂರು ಜನ ಸದಸ್ಯರು ಹಾಗೂ ಒಬ್ಬ ಸದಸ್ಯ ಕಾರ್ಯದರ್ಶಿಯವರನ್ನು ಹೊಂದಿರುವ ಒಟ್ಟು 5 ಜನರಿರುವ ತಾಲ್ಲೂಕು ಪುನರ್ ರಚನಾ ಸಮಿತಿಯನ್ನು ನೇಮಿಸಲು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 28 ಭೂದಾಪು 2007, ಬೆಂಗಳೂರು ದಿನಾಂಕ: 29.08.2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹೊಸ ತಾಲ್ಲೂಕುಗಳ ಪುನರ್ ರಚನೆ ಸಂಬಂಧ ಪರಿಶೀಲಿಸಲು ಸರ್ಕಾರವು ಈ ಕೆಳಗಿನಂತೆ 5 ಜನರಿರುವ ತಾಲ್ಲೂಕು ಪುನರ್ ರಚನಾ ಸಮಿತಿಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ರಚಿಸಲಾಗಿದೆ.

1) ಅಧ್ಯಕ್ಷರು
2) ಸದಸ್ಯರು
3) ಸದಸ್ಯರು
4) ಸದಸ್ಯರು
5) ಸದಸ್ಯ ಕಾರ್ಯದರ್ಶಿ

ಸದರಿ ಸಮಿತಿಯು ಈ ಕೆಳಕಂಡ ಅಂಶಗಳನ್ನು ಗಮನದಲ್ಲಿ ಇಟ್ಟುಕೊಂಡು ತಾಲ್ಲೂಕುಗಳ ಪೂರ್ಣ ರಚನೆಯನ್ನು ಮಾಡಲು ಕ್ರಮ ವಹಿಸುವುದು;

i) ಯಾವುದೇ ಗ್ರಾಮವನು ವಿಭಜಿಸಕೂಡದು. ಅಖಂಡ ಗ್ರಾಮವನ್ನಾಗಿ ಒಂದೂ ತಾಲ್ಲೂಕಿನಿಂದ ಮತ್ತೊಂದು ತಾಲ್ಲೂಕಿಗೆ ವರ್ಗಾಯಿಸಕೂಡದು.

ii) ಈಗ ಅಸ್ತಿತ್ವದಲ್ಲಿರುವ ಯಾವುದೇ ತಾಲ್ಲೂಕುಗಳನ್ನು ರದ್ದು ಮಾಡಕೂಡದು. ಅದೇ ತಾಲ್ಲೂಕು ಕೇಂದ್ರಗಳನ್ನು ಇದ್ದ ಹಾಗೆ ಇಟ್ಟುಕೊಂಡು ದೊಡ್ಡ ಮತ್ತು ಮಧ್ಯಮ ಗಾತ್ರದ ತಾಲ್ಲೂಕುಗಳನ್ನು ವಿಭಜಿಸಿ, ಕೆಲವು ಗ್ರಾಮಗಳನ್ನು ಬೇರ್ಪಡಿಸಿ, ಚಿಕ್ಕದಾಗಿರುವ ತಾಲ್ಲುಕುಗಳಿಗೆ ಸೇರಿಸಿ, ಅವುಗಳನ್ನು ದೊಡ್ಡದಾಗಿಸುವ ಪ್ರಸ್ತಾವನೆಯನ್ನು ಸಲ್ಲಿಸಬಹುದು. ಇದರಿಂದ, ಸ್ಥಳೀಯ ಜನರ ಭಾವನೆಗಳನ್ನು ಕೆರಳಿಸದಿರುವಂತೆ ಅನುಕೂಲವಾಗುತ್ತದೆ. ಎರಡನೆಯದಾಗಿ, ಈಗಾಗಲೇ ಅಲ್ಲಿರುವ ಕಛೇರಿ ಇತ್ಯಾದಿಗಳನ್ನು ಬೇರೆ ಕಡೆ ನಿರ್ಮಿಸುವ ಅವಶ್ಯಕತೆ ತಪ್ಪುತ್ತದೆ. ಹಾಗೆ ಶೀಘ್ರವಾಗಿ ಹೊಸ ತಾಲ್ಲೂಕುಗಳನ್ನು ರಚಿಸಲು ಅನುಕೂಲವಾಗುತ್ತದೆ. ಹೀಗೆ ಚಿಕ್ಕದನ್ನು ದೊಡ್ಡದನ್ನಾಗಿ ಮಾಡುವಾಗ ಹೊಸದಾಗಿ ಸೇರ್ಪಡೆಯಾಗುವ ಗ್ರಾಮಗಳಿಂದ ತಾಲ್ಲುಕು ಕೇಂದ್ರಕ್ಕೆ ಇರುವ ದೂರ ಸಂಪರ್ಕಸೌಲಭ್ಯಗಳು, ಮಾರುಕಟ್ಟೆ ವ್ಯವಸ್ಥೆ, ಶೈಕ್ಷಣಿಕ ವೈದ್ಯಕೀಯ ಸೌಲಭ್ಯಗಳನ್ನು ಗಮನದಲ್ಲಿರಿಸಿಕೊಳ್ಳತಕ್ಕದ್ದು.

iii) ಮಲೆನಾಡಿನಲ್ಲಿಯ ತಾಲ್ಲೂಕುಗಳು ಬಯಲು ಸೀಮೆಯ ತಾಲ್ಲೂಕುಗಳಿಗೆ ಹೋಲಿಸಿದರೆ ಚಿಕ್ಕದು ಇರಬಹುದು.

iv) ಪರಿಣಾಮಕಾರಿ ಮತ್ತು ಸಮರ್ಥ ಆಡಳಿತ (Efficient and effective) ನಡೆಯಬೇಕಾದರೆ ತಾಲ್ಲೂಕಿನ ಕೇಂದ್ರದ ಅಂಚಿನಲ್ಲಿರುವ ಗ್ರಾಮಗಳು ಅತ್ಯಂತ ದೂರದಲ್ಲಿ ಇರಬಾರದು. ಅಲ್ಲಿಯ ಒಟ್ಟು ಸಾಮಾನ್ಯ ಜನಸಂಖ್ಯೆ ಎಷ್ಟು ಇರಬಹುದು ಇತ್ಯಾದಿಗಳ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಕೆಲವು ಸೂಕ್ತ ಮಾನದಂಡಗಳ ಆಧಾರದ ಮೇಲೆ ತಾಲ್ಲೂಕುಗಳನ್ನು ರಚಿಸಬಹುದಾಗಿದೆ. ಹೀಗೆ ರಚಿಸುವಾಗ ಸಮರ್ಥ ಆಡಳಿತ ಹೊಂದಿರುವ ನಮ್ಮ ನೆರೆಹೊರೆಯ ಕೆಲವು ರಾಜ್ಯಗಳಿಗೆ ಭೇಟಿ ನೀಡಿ ಅಲ್ಲಿಯ ಉಪಯುಕ್ತವಾದ ಕೆಲವು ಅಂಶಗಳನ್ನು ಪರಿಗಣಿಸಿ ಅಳವಡಿಸಿಕೊಳ್ಳಬಹುದು.

v) ಪ್ರಸ್ತಾವಿತ ಪುನರ್ ಘಟನೆಯ ನಕ್ಷೆ ಹಾಗೂ ವಿವರವಾದ ಮಾಹಿತಿಗಳುಳ್ಳ ಪೂರ್ವ ಅಧಿಸೂಚನೆ ನೀಡಿ ಕನ್ನಡ ಭಾಷೆಯ ಪ್ರಮುಖ ಪತ್ರಿಕೆಗಳಲ್ಲಿ ಪ್ರಕಟಿಸಿ ಸಂಸ್ಥೆಗಳು, ವ್ಯಕ್ತಿಗಳು ಸಲ್ಲಿಸುವ ಎಲ್ಲಾ ಮನವಿಗಳನ್ನು ಕ್ರೋಡೀಕರಿಸಿ

ಆ ಅಭಿಪ್ರಾಯಗಳ ಆಧಾರದ ಮೇಲೆ ಸೂಕ್ತ ಮಾರ್ಪಾಡನ್ನು ಮಾಡಿ ಅಂತಿಮ ಪ್ರಸ್ತಾವನೆಯನ್ನು ವರದಿಯ ರೂಪದಲ್ಲಿ ಸರ್ಕಾರಕ್ಕೆ ಸಲ್ಲಿಸುವುದು.

vi) ಈ ಸಮಿತಿಯು ಒಟ್ಟಾರೆ 6 ತಿಂಗಳ ಕಾಲಾವಧಿಯಲ್ಲಿ ಸಮಗ್ರ ಅಧ್ಯಯನ ನಡೆಸಿ ಸಮಗ್ರವಾದ ವರದಿಯನ್ನು ತಯಾರಿಸಿ, ಸಂಬಂಧಿಸಿದ ನಕ್ಷೆ ವಿವರವುಳ್ಳ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವುದು.

ಈ ಸಮಿತಿಯ ವೆಚ್ಚಕ್ಕಾಗಿ ಅಗತ್ಯವಿರುವ ರೂ. 50.00 ಲಕ್ಷಗಳನ್ನು ಸೂಕ್ತ ಲೆಕ್ಕ ಶೀರ್ಷಿಕೆಯಡಿ ಒದಗಿಸಲು ಕ್ರಮ ಕೈಗೊಳ್ಳಲಾಗುವುದು.

ಸದರಿ ಸಮಿತಿಗೆ ಅಗತ್ಯವಾದ ಕಛೇರಿ, ದೂರವಾಣಿ, ವಾಹನ, ಅಗತ್ಯ ಸಿಬ್ಬಂದಿ ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸಲಾಗುವುದು.

ಈ ಸಮಿತಿಯು ಸದರಿ ವಿಷಯಕ್ಕೆ ಸಂಬಂಧಪಟ್ಟಂತೆ ಪ್ರವಾಸ ಕೈಗೊಂಡಲ್ಲಿ ಅಗತ್ಯವಾದ ವ್ಯವಸ್ಥೆಯನ್ನು ಸಮಿತಿಯ ಸದಸ್ಯ ಕಾರ್ಯದರ್ಶಿಯವರು ಏರ್ಪಡಿಸುವುದು.

ಈ ಸಮಿತಿಯ ಅಧ್ಯಕ್ಷರು ಹಾಗೂ ಸದಸ್ಯರುಗಳು ಜಾರಿಯಲ್ಲಿರುವ ಸರ್ಕಾರದ ನಿಯಮಗಳಂತೆ ಪ್ರವಾಸ ಭತ್ಯೆ, ದಿನ ಭತ್ಯೆ ಮತ್ತು ಇತರೆ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ. ಸಂ.ಆಇ 823 ವೆಚ್ಚ:7/2007 ದಿ: 16.08.2007ರ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1571

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಮಾಪನ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಕೆ.ಎಸ್. ನಿಂಗಪ್ಪ ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ಅಧಿಕಾರಿ (ನಿ) ಹಿಂದಿನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ತುಮಕೂರು ಅವರ ವಿರುದ್ಧ ಇಲಾಖಾ ವಿಚಾರಣೆ – ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1 ನೋಟೀಸ್ ಸಂಖ್ಯೆ: ಸಿಆಸುಇ 138 ಎಸ್ಇಎನ್ 2007 ದಿನಾಂಕ: 12.6.2007.
2 ಶ್ರೀ ಕೆ.ಎಸ್. ನಿಂಗಪ್ಪ, ಕೆ.ಎ.ಎಸ್. (ನಿ) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ತುಮಕೂರು ಅವರ ದಿನಾಂಕ: 3.7.2007ರ ಉತ್ತರ.

**ಪ್ರಸ್ತಾವನೆ:**

ಶ್ರೀ ಕೆ.ಎಸ್. ನಿಂಗಪ್ಪ, ನಿವೃತ್ತ ಕೆ.ಎ.ಎಸ್. ಅಧಿಕಾರಿ ಇವರು ತುಮಕೂರು ಜಿಲ್ಲಾ ಪಂಚಾಯತ್, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯಾಗಿ 2006–07ನೇ ಸಾಲಿನಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಸಾರ್ವಜನಿಕ ಕುಡಿಯುವ ನೀರಿನ ಯೋಜನೆಯಡಿ ಹಣ ದುರುಪಯೋಗ ಮಾಡಿರುವುದು ಮತ್ತು ಯೋಜನೆಯ ಬಾಬ್ತಿನಲ್ಲಿ ಚಾಲ್ತಿಯಲ್ಲಿರುವ ಮಾರ್ಗದರ್ಶನವನ್ನು ಉಲ್ಲಂಘನೆ ಮಾಡಿರುವ 05 ಆರೋಪಗಳ ಸಂಬಂಧ ಅವರಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ: 12.6.2007ರ ನೋಟೀಸನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮೇಲ್ಮನವಿ) ನಿಯಮಾವಳಿ ನಿಯಮ 11 ಮತ್ತು 11–ಎ ರನ್ವಯ ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸಿಗೆ ಸದರಿ ಅಧಿಕಾರಿಯು ಮೇಲೆ (2)ರಲ್ಲಿ ಓದಲಾದ ದಿನಾಂಕ: 3.7.2007ರಲ್ಲಿ ಉತ್ತರ ಸಲ್ಲಿಸಿ ತಮ್ಮ ಮೇಲೆ ಹೊರಿಸಲಾದ ಆರೋಪಗಳನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಅವರ ಮೇಲೆ ಹೊರಿಸಲಾದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ನಡೆಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 138 ಎಸ್ಇಎನ್ 2007, ಬೆಂಗಳೂರು, ದಿನಾಂಕ: 29.8.2007.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11 (2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಕೆ.ಎಸ್. ನಿಂಗಪ್ಪ, ನಿವೃತ್ತ ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) (ನಿ) ಅಧಿಕಾರಿ ಅವರ ವಿರುದ್ಧ ಮಾಡಲಾದ ಆರೋಪಗಳ ಕುರಿತು ವಿಚಾರಣೆ ಮಾಡಲು ನಿರ್ದೇಶಕರು, (ಎಸ್.ಇ.ಪಿ) ಗ್ರಾಮೀಣಾಭಿವೃದ್ಧಿ ಪಂಚಾಯತ್ ರಾಜ್ ಇಲಾಖೆ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11 (5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಉಪ ಕಾರ್ಯದರ್ಶಿ (ಅಭಿವೃದ್ಧಿ) ಜಿಲ್ಲಾ ಪಂಚಾಯತ್ ತುಮಕೂರು ಇವರನ್ನು

ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವಂತೆ ಆದೇಶಿಸಿದೆ.

ಈ ವಿಚಾರಣೆಯನ್ನು ನಡೆಸಲು ಅಗತ್ಯವಾದ ಶೀಘ್ರಲಿಪಿಗಾರರ ಸೇವೆ, ಸೂಕ್ತ ಸ್ಥಳಾವಕಾಶ ಮತ್ತು ಇತರ ಸೌಲಭ್ಯಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬೆಂಗಳೂರು ಇವರು ಒದಗಿಸಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1589

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸುಇ (ಸೇವೆಗಳು–2)

**ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ**

**ವಿಷಯ:** ಶ್ರೀ ಹೆಚ್.ಬಿ. ದೇವರಾಜು, ಪ್ರೋಗ್ರಾಂ ಅಫೀಸರ್, ಉಪನಿರ್ದೇಶಕರ ಕಛೇರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರ ವಿರುದ್ಧ ದಾಖಲಾಗಿರುವ ಲಂಚದ ಪ್ರಕರಣಕ್ಕೆ ಸಂಬಂಧಿಸಿದಂತೆ ಅಮಾನತ್ತಿನಲ್ಲಿ ಇರಿಸುವ ಬಗ್ಗೆ.

**ಓದಲಾಗಿದೆ:** 1 ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐ.ಎನ್.ವಿ. (ಜಿ)/ಸಿಟಿ/ಕ್ರೈಂ/17/2007 ದಿ: 28–5–2007.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 28–5–2007ರ ಪತ್ರದಲ್ಲಿ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಶ್ರೀ ಹೆಚ್.ಬಿ. ದೇವರಾಜು, ಪ್ರೋಗ್ರಾಂ ಆಫೀಸರ್, ಉಪನಿರ್ದೇಶಕರ ಕಛೇರಿ, ಬೆಂಗಳೂರು, ಇವರ ಫಿರ್ಯಾದುದಾರರಾದ ಶ್ರೀ ಜಿ. ರಾಜಣ್ಣ ಬಿನ್ ಗಂಗಣ್ಣ 10ನೇ ಎ ಮೈನ್, 1ನೇ ಬ್ಲಾಕ್ 3ನೇ ಸ್ಟೇಜ್, ಮಂಜುನಾಥನಗರ, ಬೆಂಗಳೂರು–10 ರಾಯ ಮೆಟ್ರಿಕ್ ವರ್ಕ್ಸ್ ಮತ್ತು ರಾಯ ಸ್ಟೀಲ್ ಕಂಪನಿ ಇವರು ಮಾರ್ಚ್ ತಿಂಗಳಲ್ಲಿ ಶಿಶು ಅಭಿವೃದ್ಧಿ ಯೋಜನಾಧಿಕಾರಿ ಕಛೇರಿಗೆ (ಬೆಂಗಳೂರು ನಗರ ಜಿಲ್ಲೆಗೆ) ಅಳತೆ ಮತ್ತು ತೂಕದ ಸಾಧನಗಳ ದುರಸ್ತಿ ಮತ್ತು ಸರಬರಾಜು ಮಾಡಿದ ಬಾಬ್ತು ಹಣ ರೂ. 9,33,000/–ಗಳನ್ನು ಚೆಕ್ ಮೂಲಕ ಪಡೆದುಕೊಂಡಿದ್ದು, ಈ ಕಛೇರಿಯ ಪ್ರೋಗ್ರಾಂ ಆಫೀಸರ್ ಆದ ಶ್ರೀ ಹೆಚ್.ಬಿ. ದೇವರಾಜುರವರು ಫಿರ್ಯಾದುದಾರರು ಸರಬರಾಜು ಮಾಡಿರುವ ಸಾಧನಗಳಿಗೆ ಬಿಲ್ ಪಾಸ್ ಮಾಡುವ ಸಂಬಂಧ ರೂ. 20,000/–ಗಳನ್ನು ಈಗಾಗಲೇ ಲಂಚವನ್ನು ಪಡೆದು ಮತ್ತು ಫಿರ್ಯಾದುದಾರರಿಂದ ಲಂಚದ ಹಣ ರೂ. 10,000/–ಗಳನ್ನು ಒತ್ತಾಯಿಸಿ ಸ್ವೀಕರಿಸುತ್ತಿದ್ದಾಗ ಲೋಕಾಯುಕ್ತರವರು ಟ್ರ್ಯಾಪ್ ಮಾಡಿರುವುದಾಗಿ ತಿಳಿಸಿರುತ್ತಾರೆ. ಈ ಸಂಬಂಧದಲ್ಲಿ ಆಪಾದಿತ ಅಧಿಕಾರಿಯ ವಿರುದ್ಧ ಲಂಚ ಆರೋಪ ಕಾಯಿದೆ 1988ರ ಕಲಂ 7, (13) (1) (ಡಿ) ಸಹವಚನ ಕಲಂ 13 (2)ರ ಅಡಿಯ ಪ್ರಕಾರ ದಿನಾಂಕ: 25–5–2007ರಂದು ಬೆಂಗಳೂರು ನಗರ ಲೋಕಾಯುಕ್ತ ಪೊಲೀಸ್ ಠಾಣೆಯ ಮೊಕದ್ದಮೆ ಸಂಖ್ಯೆ 17/2007ರಲ್ಲಿ ಪ್ರಕರಣವನ್ನು ದಾಖಲಿಸಿಕೊಂಡು ತನಿಖೆಯನ್ನು ಕೈಗೊಂಡಿರುವುದಾಗಿ ವರದಿ ಮಾಡಿರುತ್ತಾರೆ.

ಶ್ರೀ ಹೆಚ್.ಬಿ. ದೇವರಾಜು, ಪ್ರೋಗ್ರಾಂ ಆಫೀಸರ್, ಉಪನಿರ್ದೇಶಕರ ಕಛೇರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರ ವಿರುದ್ಧ ಭ್ರಷ್ಟಾಚಾರದ ಆಪಾದನೆ ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಶ್ರೀಯುತರನ್ನು ಕೂಡಲೇ ಅಮಾನತ್ತಿನಲ್ಲಿ ಇಡಬೇಕೆಂದು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಲೋಕಾಯುಕ್ತರ ಶಿಫಾರಸ್ಸನ್ನು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 229 ಎಸ್‌ಜೆಡಿ 2007 ಬೆಂಗಳೂರು, ದಿನಾಂಕ: 06–06–2007**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣದಿಂದ ಶ್ರೀ ಹೆಚ್.ಬಿ. ದೇವರಾಜು, ಪ್ರೋಗ್ರಾಂ ಆಫೀಸರ್, ಉಪನಿರ್ದೇಶಕರ ಕಛೇರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ನಗರ ಜಿಲ್ಲೆ, ಇವರನ್ನು ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ.) ನಿಯಮಾವಳಿಗಳು 1957ರ ನಿಯಮ 10 (1) (ಎ) ಮೇರೆಗೆ ದಿನಾಂಕ: 25–5–2007ರಿಂದಲೇ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ.

ಅಮಾನತ್ತಿನಲ್ಲಿನ ಅವಧಿಯಲ್ಲಿ ಸದರಿ ಅಧಿಕಾರಿಯು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1957ರ ನಿಯಮ 98(1) ರನ್ವಯ ಜೀವನಾಂಶ ಭತ್ಯೆ ಪಡೆಯಲು ಅರ್ಹರಾಗಿರುತ್ತಾರೆ. ಅಲ್ಲದೆ ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯು ಸಕ್ಷಮ ಪ್ರಾಧಿಕಾರದ ಲಿಖಿತ ಅನುಮೋದನೆ ಇಲ್ಲದೆ ಕೇಂದ್ರ ಸ್ಥಾನನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1072

**ಆರ್.ಎಂ. ಚಂದ್ರಮ್ಮ,**

ಸರ್ಕಾರದ ಅಧೀನ ಕಾರ್ಯದರ್ಶಿ–2,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ವಿಷಯ:** ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗಳಲ್ಲಿ ಶೇ. 80ರಷ್ಟು ಹುದ್ದೆಗಳನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ:**

1 ಸರ್ಕಾರಿ ಆದೇಶ ಸಂ: ಮಮಇ 146 ಎಸ್‌ಜೆಡಿ 2000 ದಿ: 24–1–2003.

2 ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ದಿನಾಂಕ: 13–6–2005 ರಂದು ನಡೆದ ಅಧಿಕಾರಯುತ ಸಮಿತಿ ಸಭೆಯ ನಡವಳಿ ಸಂ:ಸಿಆಸುಇ 12:ಈಸಪ:2005, ದಿ: 01–07–2005.

3. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಪತ್ರ ಸಂ: ಸಿಬ್ಬಂದಿ.ಹುದ್ದೆ ರದ್ಧತಿ 01.05.06 ದಿ: 10–11–2005. ಮತ್ತು 20–6–2003ರ ಪತ್ರ ಸಂಖ್ಯೆ ಮಮಇ: ಸಿಬ್ಬಂದಿ: ಇತರೆ:33:97–98/02–03

4. ಸರ್ಕಾರಿ ಪತ್ರ ಸಮ ಸಂಖ್ಯೆ: ದಿ: 17–4–2007.

5. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಪತ್ರ ಸಂಖ್ಯೆ. ಮಮಅಇ: ಸಿಬ್ಬಂದಿ: ಇತರೆ: 33:97–98:02–03 ದಿನಾಂಕ: 11–5–2007 ಮತ್ತು 26–5–2007.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿ: 24–1–2003ರ ಆದೇಶದಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗಳಲ್ಲಿ ಶೇ. 80 ರಷ್ಟು ಹುದ್ದೆಗಳನ್ನು ರದ್ದುಗೊಳಿಸುವ ಸರ್ಕಾರದ ನೀತಿ ಅನ್ವಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಸೇವೆಗಳ ವೃಂದಗಳಲ್ಲಿನ 182 ಹುದ್ದೆಗಳನ್ನು ರದ್ದುಪಡಿಸಲಾಗಿದೆ.

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಲ್ಲಿ ರದ್ದುಪಡಿಸಿರುವ ಹುದ್ದೆಗಳ ಮಾಹಿತಿಯನ್ನು ಸಿ.ಆ.ಸು. ಇಲಾಖೆಯ ಗಮನಕ್ಕೆ ತಂದಿದ್ದು, ದಿ: 13–06–2005ರ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಅಧಿಕಾರಯುತ ಸಮಿತಿ ಸಭೆಯಲ್ಲಿ ಇತರ ವೃಂದಗಳ ಕೆಲವು ಹುದ್ದೆಗಳನ್ನು ರದ್ದುಪಡಿಸಲು ನಿರ್ಣಯ ಕೈಗೊಂಡಿದ್ದು, ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ನಡವಳಿಯಲ್ಲಿ, ವಿವಿಧ ವೃಂದಗಳ ಎಷ್ಟು ಹುದ್ದೆಗಳನ್ನು ರದ್ದುಪಡಿಸಬೇಕೆಂಬ ಕುರಿತು ನಿರ್ಣಯವನ್ನು ಕೈಗೊಂಡು ನಮೂದಿಸಿದ್ದು, ಈ ಕುರಿತು ಕ್ರಮವಹಿಸಿ ಮಾಹಿತಿಯನ್ನು ಒದಗಿಸುವಂತೆ ಕೋರಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (3)ರ ದಿನಾಂಕ: 10–11–2005 ಮತ್ತು 20–6–2003ರ ಪತ್ರಗಳಲ್ಲಿ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಲ್ಲಿ ಮಂಜೂರಾಗಿರುವ ಒಟ್ಟು 6102 ಹುದ್ದೆಗಳಿದ್ದು, ಈ ಪೈಕಿ 1542 ಹುದ್ದೆಗಳು ಖಾಲಿ ಇದ್ದು, ಈ ಇಲಾಖೆಯಲ್ಲಿ ಅನೇಕ ಯೋಜನೆಗಳಾದ ಜಿಲ್ಲಾ ವಲಯ ಯೋಜನೆಗಳು, ಸ್ತ್ರೀಶಕ್ತಿ ಯೋಜನೆ, ಸಾಂತ್ವನ ಯೋಜನೆ, ಕರ್ನಾಟಕ ಮಹಿಳಾ ಅಭಿವೃದ್ಧಿ ಯೋಜನೆ, ಗ್ರಾಮೀಣ ಹೆಣ್ಣುಮಕ್ಕಳ ಹಾಜರಾತಿ, ಶಿಷ್ಯ ವೇತನ, ಉದ್ಯೋಗಸ್ಥ ಮಹಿಳೆಯರ ಮಕ್ಕಳ ಶಿಶು ಪಾಲನಾ ಕೇಂದ್ರಗಳು, ವಿಧವೆಯರ ಮತ್ತು ವಿಧವಾ ವಿವಾಹಕ್ಕೆ ಆರ್ಥಿಕ ಸಹಾಯಕ ಯೋಜನೆ, ಸ್ವಯಂ ಸಿದ್ದ ಯೋಜನೆ, ಸ್ವಾಧಾರ ಯೋಜನೆ, ಸಮಗ್ರ ಶಿಶು ಅಭಿವೃದ್ಧಿ ಯೋಜನೆಗಳು, ಉದಿಷಾ ಯೋಜನೆ, ಬಾಲಿಕಾ ಸಮೃದ್ಧಿ ಯೋಜನೆ, ವೃತ್ತಿ ಬುನಾದಿ ತರಬೇತಿ ಯೋಜನೆ, ಉದ್ಯೋಗಸ್ಥ ಮಹಿಳೆಯರಿಗೆ ಹಾಗೂ ವೃತ್ತಿ ತರಬೇತಿಯಲ್ಲಿರುವ ಹೆಣ್ಣು ಮಕ್ಕಳ ಗರ್ಲ್ಸ್ ಹಾಸ್ಟೆಲ್ ಸೌಲಭ್ಯಗಳ ಯೋಜನೆ ಹಾಗೂ ಭಾಗ್ಯಲಕ್ಷ್ಮಿ ಯೋಜನೆಗಳಿಗೆ ರೂ. 246 ಕೋಟಿಗಳ ಹಣದಲ್ಲಿ ಸುಮಾರು 2.00 ಲಕ್ಷ ಫಲಾನುಭವಿಗಳಿಗೆ ಸೌಲಭ್ಯವನ್ನು ಒದಗಿಸಬೇಕಾಗಿದ್ದು, ಅರ್ಜಿಗಳ ಪರಿಶೀಲನೆಗೆ ಸಿಬ್ಬಂದಿಗಳ ಅವಶ್ಯಕತೆ ತುಂಬಾ ಇರುವುದಾಗಿ ವರದಿ ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ದಿನಾಂಕ: 11–5–2007 ಮತ್ತು 26–5–2007 ಪತ್ರಗಳಲ್ಲಿ, ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರು ಸಮಗ್ರ ಶಿಶು ಅಭಿವೃದ್ಧಿ ಯೋಜನೆಯ ಅಲ್ಲಾ ಕಾರ್ಯಕ್ರಮಗಳನ್ನು ಗ್ರಾಮೀಣ ತಾಲ್ಲೂಕು ಹಾಗೂ ಜಿಲ್ಲಾ ಮಟ್ಟದಲ್ಲಿ ಅನುಷ್ಠಾನಗೊಳಿಸಬೇಕಾಗಿರುವುದರಿಂದ ಸಿಬ್ಬಂದಿಯ ಅವಶ್ಯಕತೆ ತುಂಬಾ ಇರುವುದಾಗಿ ಪ್ರಸ್ತುತ ಇರುವ ಪರಿವೀಕ್ಷಣಾ ದರ್ಜೆ–Iರ 11, ಕಾನೂನು ಸಲಹೆಗಾರರು–1, ಪರಿವೀಕ್ಷಣಾ ದರ್ಜೆ–II–43, ಪ್ರಥಮ ದರ್ಜೆ ಸಹಾಯಕರು–32, ಶೀಘ್ರಲಿಪಿಗಾರರು–1, ಲೆಕ್ಕ ಪರಿಶೋಧಕರು–2, ದ್ವಿತೀಯ ದರ್ಜೆ ಸಹಾಯಕರು–17, ಬೆರಳಚ್ಚುಗಾರು–21, ಕಾಂಪೌಂಡರ್–1, ಅಡುಗೆಯವರು–11, ಅಟೆಂಡರ್/ರಕ್ಷಕರು–150, ಸೇವಕರು/ಜವಾನ/ಆಯಾ/ದೋಬಿ/ಸ್ವೀಪರ್ ಇತ್ಯಾತಿ ಗ್ರೂಪ್ 'ಡಿ' ಹುದ್ದೆಗಳು–186 ಇದ್ದು ಒಟ್ಟು 476 ಹುದ್ದೆಗಳನ್ನು ಇಲಾಖೆಯಲ್ಲಿ ಮುಂದುವರೆಸುವ ಸಮರ್ಥನೆಯನ್ನು ಅಧಿಕಾರಯುತ ಸಮಿತಿಯ ಮುಂದೆ ಮಂಡಿಸಿ ನಿರ್ಣಯ ಕೈಗೊಳ್ಳಲು ಕೋರಿರುವ ಹಿನ್ನಲೆಯಲ್ಲಿ ಅವರ ಕೋರಿಕೆಯ ಮೇಲೆ ತಿಳಿಸಿರುವ ವೃಂದಗಳಿಗೆ ಸೀಮಿತಗೊಳಿಸಿ ಇಲಾಖೆ ಸಲ್ಲಿಸಿರುವ ಮಾಹಿತಿಯನ್ನು ಪರಿಶೀಲಿಸಿ ಶೇ. 80 ರಷ್ಟು ಹುದ್ದೆಗಳನ್ನು ರದ್ದುಪಡಿಸುವ ಕುರಿತು ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 146 ಎಸ್‌ಜೆಡಿ 2000 ಬೆಂಗಳೂರು, ದಿನಾಂಕ: 31.5.2007**

ಮೇಲೆ ವಿವರಿಸಲಾದ ಸಂದರ್ಭದಲ್ಲಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ವಿವಿಧ ವೃಂದಗಳಲ್ಲಿ ಖಾಲಿ ಇರುವ ಒಟ್ಟು 257 ಹುದ್ದೆಗಳನ್ನು ಈ ಆದೇಶದ ಅನುಬಂಧದಲ್ಲಿ ಸೂಚಿಸಿರುವಂತೆ ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಆರ್.ಎಂ. ಚಂದ್ರಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ಅನುಬಂಧ**

**ಸರ್ಕಾರಿ ಆದೇಶ ಸಂಖ್ಯೆ: ಮಮಇ 146 ಎಸ್‌ಜೆಡಿ 2000, ದಿನಾಂಕ: 31.5.2007**

| ಕ್ರ. ಸಂ. | ಹುದ್ದೆಯ ಪದನಾಮ | ವೇತನ ಶ್ರೇಣಿ | ರದ್ದುಪಡಿಸಿದ ಹುದ್ದೆಗಳ ಸಂಖ್ಯೆ |
|---|---|---|---|
| 1. | ವೃತ್ತಿ ಪುನರ್ವಸತಿ ಅಧಿಕಾರಿ | 3575–10620 | 01 |
| 2. | ಆರೋಗ್ಯ ಬೋಧಕರು | 5200–9580 | 27 |
| 3. | ಪೌಷ್ಠಿಕ ಆಹಾರ ತಜ್ಞರು | 5200–9580 | 27 |
| 4. | ಶಾಲಾ ಪೂರ್ವ ಸೇವಾ ಶಿಕ್ಷಕರು | 5200–9580 | 27 |
| 5. | ಸಮಾಜ ಸೇವಾ ಶಿಕ್ಷಕರು | 3850–7050 | 27 |
| 6. | ವೃತ್ತಿ ತೆರಫಿಸ್ಟ್ | 3850–7050 | 02 |
| 7. | ಪ್ರಥಮ ದರ್ಜೆ ಸಹಾಯಕರು | 3850–7050 | 14 |
| 8. | ದೈಹಿಕ ಶಿಕ್ಷಕರು | 3300–6300 | 17 |
| 9. | ಬೋಧಕರು | 3300–6300 | 21 |
| 10. | ವಾಹನ ಚಾಲಕರು | 3300–5450 | 92 |
| 11. | ಹವಾಲ್ದಾರ್ | 3000–5450 | 02 |
| | ಒಟ್ಟು | | 257 |

**ಆರ್.ಎಂ. ಚಂದ್ರಮ್ಮ**
ಪಿ.ಆರ್.1039 ಸರ್ಕಾರದ ಅಧೀನ ಕಾರ್ಯದರ್ಶಿ,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ:** ಕಬ್ಬು ಬೆಳೆದ ರೈತರಿಗೆ ಮತ್ತು ಸಕ್ಕರೆ ಕಾರ್ಖಾನೆಗಳಿಗೆ ರಾಜ್ಯ ಸರ್ಕಾರದಿಂದ ವಿಶೇಷ ನೆರವು ನೀಡುವ ಬಗ್ಗೆ.

**ಓದಲಾಗಿದೆ:** ದಿನಾಂಕ 12.04.2007ರಂದು ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿನ ತೀರ್ಮಾನಗಳು.

**ಪ್ರಸ್ತಾವನೆ:**

1. ರಾಜ್ಯದಲ್ಲಿ ಪ್ರಸಕ್ತ ವರ್ಷ ಒಟ್ಟು 3.57 ಲಕ್ಷ ಹೆಕ್ಟೇರ್ ಪ್ರದೇಶದಲ್ಲಿ 357 ಲಕ್ಷ ಟನ್ ಕಬ್ಬು ಬೆಳೆಯಲಾಗಿದೆ. ರಾಜ್ಯದಲ್ಲಿ ಒಟ್ಟು 55 ಸಕ್ಕರೆ ಕಾರ್ಖಾನೆಗಳ ಪೈಕಿ ಪ್ರಸಕ್ತ ಸಾಲಿನಲ್ಲಿ ಒಟ್ಟು 47 ಸಕ್ಕರೆ ಕಾರ್ಖಾನೆಗಳು ಕಾರ್ಯ ನಿರ್ವಹಿಸುತ್ತಿವೆ. ರಾಜ್ಯದಲ್ಲಿ ಪ್ರಸಕ್ತ ಸಾಲಿನಲ್ಲಿ ದಿನಾಂಕ 1.10.2006 ರಿಂದ 30.09.2007ರವರೆಗಿನ ಅವಧಿಯಲ್ಲಿ ಕಾರ್ಖಾನೆಗಳು 230 ಲಕ್ಷ ಟನ್ ಕಬ್ಬು ನುರಿಸುವ ಗುರಿ ಹೊಂದಿದೆ. ಅದರೆ ಬೆಲ್ಲದ ಬೆಲೆಯ ಕುಸಿತದಿಂದಾಗಿ ಬೆಲ್ಲ ತಯಾರಿಕೆಗಾಗಿ ಸಾಗಾಣಿಕೆಯಾಗುತ್ತಿದ್ದ ಅಂದಾಜು 32 ಲಕ್ಷ ಟನ್ ಕಬ್ಬನ್ನೂ ಸೇರಿ ಒಟ್ಟು 262 ಲಕ್ಷ ಟನ್ ಕಬ್ಬನ್ನು ಸಕ್ಕರೆ ಕಾರ್ಖಾನೆಗಳು ನುರಿಸಬೇಕಾಗುತ್ತದೆ. 2005–06ನೇ ಸಾಲಿನಲ್ಲಿ ಹೆಚ್ಚಿನ ಕಬ್ಬು ಬೆಳೆದಿದ್ದು ದಾಖಲೆ ಪ್ರಮಾಣದ 178.70 ಲಕ್ಷ ಮೆ.ಟನ್ ಕಬ್ಬು ನುರಿಸಿದೆ. ಪ್ರಸಕ್ತ ಸಾಲಿನಲ್ಲಿ ಕಾರ್ಖಾನೆಗಳು ದಿನಾಂಕ: 30.4.2007ರವರೆಗೆ ರಾಜ್ಯದಲ್ಲಿ 211 ಲಕ್ಷ ಮೆ.ಟನ್ ಕಬ್ಬು ನುರಿಸಿ, 22.78 ಲಕ್ಷ ಮೆ.ಟನ್ ಸಕ್ಕರೆ ಉತ್ಪಾದಿಸಿ ಶೇ. 10.93ರಷ್ಟು ಇಳುವರಿ ಪಡೆದಿದೆ.

2. ರಾಜ್ಯದಲ್ಲಿ ಜೂನ್ 2007ರ ತಿಂಗಳ ಎರಡನೇ ವಾರದವರೆಗೆ ಸಹ ಹೆಚ್ಚಿನ ಕಬ್ಬು ನುರಿಸೇಕಾಗಿರುತ್ತದೆ. ಕಬ್ಬನ್ನು ನುರಿಸುವ ಬಗ್ಗೆ ದಿನಾಂಕ 12.04.2007ರಂದು ಸನ್ಮಾನ್ಯ ಮುಖ್ಯ ಮಂತ್ರಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಚರ್ಚಿಸಿ ರಾಜ್ಯದಲ್ಲಿ ಲಭ್ಯವಿರುವ ಎಲ್ಲಾ ಕಬ್ಬನ್ನು ಕಾರ್ಖಾನೆಗಳು ನುರಿಸಬೇಕೆಂದು ಮತ್ತು ಎಲ್ಲಾ ಕಾರ್ಖಾನೆಗಳು ದಿನಾಂಕ:

31.05.2007ರವರೆಗೆ ಕಡ್ಡಾಯವಾಗಿ ಕಬ್ಬು ನುರಿಸುವ ಕೆಲಸ ನಿರ್ವಹಿಸಬೇಕೆಂದು ಮತ್ತು ನುರಿಸಬೇಕಾದ ಕಬ್ಬು ಇನ್ನು ಇದ್ದಲ್ಲಿ, ಆ ನಂತರವೂ ಸಹ ಎಲ್ಲಾ ಕಬ್ಬನ್ನು ನುರಿಸಲು ಸೂಚಿಸಲಾಗಿದೆ.

3. ದೇಶದಲ್ಲಿ ಸಕ್ಕರೆ ಉತ್ಪಾದನೆ ಜಾಸ್ತಿಯಾಗಿದ್ದು, ಸಕ್ಕರೆ ಬೆಲೆ ದಿನದಿಂದ ದಿನಕ್ಕೆ ಕುಸಿಯುತ್ತಿದೆ. ಅಂತರರಾಷ್ಟ್ರೀಯ ಮಟ್ಟದಲ್ಲಿಯೂ ಸಹ ಸಕ್ಕರೆ ಬೆಲೆ ಕುಸಿದಿದೆ. ಪ್ರಸಕ್ತ ಸಕ್ಕರೆ ಮಾರಾಟ ಬೆಲೆ ಕ್ವಿಂಟಾಲ್‌ಗೆ ರೂ. 1160.00 ಇರುತ್ತದೆ. ರಾಜ್ಯದ ಸಕ್ಕರೆ ಕಾರ್ಖಾನೆಗಳಲ್ಲಿ ದಿನಾಂಕ: 30.04.2007ಕ್ಕೆ 13.58 ಲಕ್ಷ ಮೆ.ಟನ್ ಸಕ್ಕರೆ ದಾಸ್ತಾನು ಇದ್ದು, ಸಕ್ಕರೆ ಬೆಲೆಯ ಕುಸಿತದಿಂದಾಗಿ ಸಕ್ಕರೆ ಕಾರ್ಖಾನೆಗಳು ಸಕ್ಕರೆ ಮಾರಾಟ ಮಾಡಲು ಸಾಧ್ಯವಾಗುತ್ತಿಲ್ಲ. ಇದರಿಂದಾಗಿ ರೈತರಿಗೆ ಕಬ್ಬಿನ ಹಣ ಪಾವತಿಸಲು ಕಾರ್ಖಾನೆಗಳಿಗೆ ತೊಂದರೆಯಾಗಿರುತ್ತದೆ.

4. ಸಕ್ಕರೆ ಕಾರ್ಖಾನೆಗಳಲ್ಲಿ ಏಪ್ರಿಲ್ 2007ರ ಅಂತ್ಯಕ್ಕೆ 4.10 ಲಕ್ಷ ಮೆ.ಟನ್ ಕಾಕಂಬಿ ದಾಸ್ತಾನು ಇದ್ದು, ಕಾಕಂಬಿ ಬೆಲೆಯು ಸಹ ತೀವ್ರವಾಗಿ ಕುಸಿದಿರುವುದರಿಂದ ಕಾರ್ಖಾನೆಗಳು ನಷ್ಟವನ್ನು ಅನುಭವಿಸುವ ಪರಿಸ್ಥಿತಿ ಉದ್ಭವವಾಗಿದೆ.

5. ಸಕ್ಕರೆ ಬೆಲೆ ತೀರಾ ಕುಸಿದಿರುವ ಕಾರಣ ರಾಜ್ಯದ ಸಕ್ಕರೆ ಕಾರ್ಖಾನೆಗಳಿಂದ ಕಬ್ಬು ಸರಬರಾಜುದಾರರಿಗೆ ಕಬ್ಬು ಖರೀದಿ ಹಣವನ್ನು ನಿಗಧಿತ ಸಮಯದಲ್ಲಿ ಪಾವತಿಸಲು ಸಾಧ್ಯವಾಗುತ್ತಿಲ್ಲ. ಅಲ್ಲದೆ ಬೆಳೆದ ಕಬ್ಬನ್ನು ಸರಿಯಾದ ಸಮಯಕ್ಕೆ ನುರಿಸದೇ ಇರುವ ಕಾರಣ ರೈತರು ಆತಂಕದಿಂದ ಆತ್ಮಹತ್ಯೆಯ ದಾರಿ ತುಳಿಯುವ ಪರಿಸ್ಥಿತಿ ಉದ್ಭವಿಸುವ ಸಾಧ್ಯತೆಗಳು ಸರ್ಕಾರದ ಗಮನಕ್ಕೆ ಬಂದಿವೆ.

6. ಲಭ್ಯವಿರುವ ಪೂರ್ಣ ಪ್ರಮಾಣದ ಕಬ್ಬನ್ನು ನುರಿಸಲು ನೆರೆಯ ಮಹಾರಾಷ್ಟ್ರ ರಾಜ್ಯದಲ್ಲಿ ಸಕ್ಕರೆ ಉದ್ಯಮಕ್ಕೆ ಅನೇಕ ಸೌಲಭ್ಯ / ಉತ್ತೇಜನ ನೀಡಿದೆ. ಕೇಂದ್ರ ಸರ್ಕಾರವು ಸಹ ಸಕ್ಕರೆ ಉದ್ಯಮದ ಅನುಕೂಲಕ್ಕಾಗಿ ಕೆಲವು ಸವಲತ್ತುಗಳನ್ನು ಘೋಷಣೆ ಮಾಡಿದೆ.

7. ಈ ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಹಾಗೂ ರಾಜ್ಯದಲ್ಲಿಯೂ ಸಹ ಹೆಚ್ಚು ಕಬ್ಬಿನ ಉತ್ಪಾದನೆಯಾಗಿರುವ ಹಿನ್ನೆಲೆಯಲ್ಲಿ, ಕಬ್ಬು ಬೆಳೆಗಾರರ ಹಾಗೂ ಸಕ್ಕರೆ ಉದ್ಯಮದ ಹಿತದೃಷ್ಟಿಯಿಂದ ಹಾಗೂ ಉದ್ಯಮವನ್ನು ಪ್ರೋತ್ಸಾಹಿಸುವ ದೃಷ್ಠಿಯಿಂದ ಹೆಚ್ಚುವರಿಯಾಗಿ ಬೆಳೆದಿರುವ ಕಬ್ಬನ್ನು ಪೂರ್ಣವಾಗಿ ನುರಿಸಲು ಈ ಕೆಳಕಂಡ ರಿಯಾಯತಿ / ವಿನಾಯಿತಿಗಳನ್ನು ಘೋಷಿಸುವ ಬಗ್ಗೆ ಪರಿಶೀಲಿಸಲಾಗಿದೆ.

ಅ) ದಿನಾಂಕ 16.04.2007 ರಿಂದ 31.05.2007ರವರೆಗೆ ವಿವಿಧ ಕಾರ್ಖಾನೆಗಳಲ್ಲಿ ನುರಿಸಿದ ಕಬ್ಬಿಗೆ ಪ್ರತಿ ಟನ್ನಿಗೆ ರೂ. 100/– ರಂತೆ ಸಹಾಯಧನ.

ಆ) ನೆರೆ ರಾಜ್ಯಗಳಿಗೂ ಸರಬರಾಜಾದ ಕಬ್ಬನ್ನು ಒಳಗೊಂಡಂತೆ ಪ್ರತಿ ಟನ್‌ಗೆ 50 ಕಿ.ಮೀಗಿಂತ ಹೆಚ್ಚಿನ ದೂರಕ್ಕೆ ಸಾಗಾಣಿಕೆ ಮಾಡಿದ ಪ್ರತಿ ಕಿ.ಮೀ.ಗೆ ರೂ. 2/– ರಂತೆ ಸಹಾಯಧನ.

ಇ) 12 ತಿಂಗಳು ಪೂರೈಸಿ ಪಕ್ವವಾದ ಹಾಗೂ ಕಟಾವಾಗದೇ ಜಮೀನಿನಲ್ಲಿ ಉಳಿದಿರುವ ಕಬ್ಬಿಗೆ ರೈತರಿಗೆ ಪ್ರತಿ ಹೆಕ್ಟೇರ್‌ಗೆ ರೂ. 25,00/–ಗಳ ಸಹಾಯಧನ.

ಮೇಲಿನ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ ಸಿಐ 58 ಎಸ್‌ಜಿಎಫ್ 2007 (ಭಾ–2), ಬೆಂಗಳೂರು ದಿನಾಂಕ 13.06.2007.**

ರಾಜ್ಯದ ಕಬ್ಬು ಬೆಳೆಗಾರರು ಮತ್ತು ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಈ ಕೆಳಕಂಡ ಸಹಾಯಧನ ಸೌಲಭ್ಯವನ್ನು ನೀಡಲು ರಾಜ್ಯ ಸರ್ಕಾರವು ಹರ್ಷಿಸುತ್ತದೆ.

ಅ) ದಿನಾಂಕ 16.04.2007 ರಿಂದ 31.05.2007ರವರೆಗೆ ವಿವಿಧ ಕಾರ್ಖಾನೆಗಳಲ್ಲಿ ನುರಿಸಿದ ಕಬ್ಬಿಗೆ ಪ್ರತಿ ಟನ್ನಿಗೆ ರೂ. 100/– ರಂತೆ ಸಹಾಯಧನ.

ಆ) ನೆರೆ ರಾಜ್ಯಗಳಿಗೂ ಸರಬರಾಜಾದ ಕಬ್ಬನ್ನು ಒಳಗೊಂಡಂತೆ ಪ್ರತಿ ಟನ್‌ಗೆ 50 ಕಿ.ಮೀಗಿಂತ ಹೆಚ್ಚಿನ ದೂರಕ್ಕೆ ಸಾಗಾಣಿಕೆ ಮಾಡಿದ ಪ್ರತಿ ಕಿ.ಮೀ.ಗೆ ರೂ. 2/– ರಂತೆ ಸಹಾಯಧನ.

ಇ) 12 ತಿಂಗಳು ಪೂರೈಸಿ ಪಕ್ವವಾದ ಹಾಗೂ ಕಟಾವಾಗದೇ ಜಮೀನಿನಲ್ಲಿ ಉಳಿದಿರುವ ಕಬ್ಬಿಗೆ ರೈತರಿಗೆ ಪ್ರತಿ ಹೆಕ್ಟೇರ್‌ಗೆ ರೂ. 25,00/–ಗಳ ಸಹಾಯಧನ. ಈ ಸಹಾಯಧನ ಸೌಲಭ್ಯವನ್ನು ಒಟ್ಟಾರೆ 10000 ಹೆಕ್ಟೇರ್‌ಗೆ ಸೀಮಿತಗೊಳಿಸಿದೆ.

ಮೇಲ್ಕಂಡ ಸಹಾಯಧನ ಸೌಲಭ್ಯವು ಈ ಕೆಳಕಂಡ ನಿಬಂಧನೆ / ಮಾರ್ಗಸೂಚಿಗಳಿಗೆ ಒಳಪಟ್ಟಿರುತ್ತದೆ.

ಅ) ಜಿಲ್ಲಾಧಿಕಾರಿಗಳು 16.04.2007 ರಿಂದ 31.05.2007ರ ವರೆಗೆ ಕಾರ್ಖಾನೆಗಳು ಎಷ್ಟು ಪ್ರಮಾಣದ ಕಬ್ಬನ್ನು ನುರಿಸಿದೆ ಎಂಬುದನ್ನು ಖಚಿತಪಡಿಸಿ ಆಯುಕ್ತರು ಕಬ್ಬು ಅಭಿವೃದ್ಧಿರವರಿಗೆ ವರದಿ ಮಾಡಿ, ನಂತರ ಆಯುಕ್ತರು ಸರ್ಕಾರಕ್ಕೆ ಹಣ ಬಿಡುಗಡೆ ಕ್ರೋಢೀಕೃತ ಪ್ರಸ್ತಾವನೆ ಸಲ್ಲಿಸುವುದು.

ಆ) ದಿನಾಂಕ: 16.04.2007 ರಿಂದ 31.05.2007ರ ಅವಧಿಯಲ್ಲಿ ಕಾರ್ಖಾನೆಗಳು ಅವರ ವೆಚ್ಚದಲ್ಲಿ 50 ಕಿ.ಮೀ.ಗಿಂತ ದೂರದಿಂದ ಕಬ್ಬನ್ನು ಸರಬರಾಜು ಮಾಡಿಕೊಂಡಿದ್ದಲ್ಲಿ, ಸಾಗಾಣಿಕೆ ಸಹಾಯಧನವನ್ನು ನೇರವಾಗಿ ಕಾರ್ಖಾನೆಗಳಿಗೆ ಪಾವತಿಸಲು ಹಾಗೂ ರೈತರ ಕಬ್ಬು ಬಾಕಿ ಬಿಲ್ಲಿನಿಂದ ಸಾಗಾಣಿಕೆ ವೆಚ್ಚವನ್ನು ಕಡಿತ ಮಾಡಿದ್ದಲ್ಲಿ ಮತ್ತು ರೈತರೇ ಕಾರ್ಖಾನೆಗಳಿಗೆ 50 ಕಿ.ಮೀ. ಹೊರಗಿನಿಂದ ಕಬ್ಬನ್ನು ಸರಬರಾಜು

ಮಾಡಿದ್ದಲ್ಲಿ, ಸಾಗಾಣಿಕೆ ಸಹಾಯಧನವನ್ನು ನೇರವಾಗಿ ರೈತರಿಗೆ ಪಾವತಿಸಲು ಜಿಲ್ಲಾಧಿಕಾರಿಗಳು ಕ್ರಮ ವಹಿಸುವುದು ಹಾಗೂ ಇದಕ್ಕಾಗಿ ಬೇಕಾಗುವ ಹಣ ಬಿಡುಗಡೆಗೆ ಜಿಲ್ಲಾಧಿಕಾರಿಗಳು ಕಬ್ಬು ಅಭಿವೃದ್ಧಿ ಆಯುಕ್ತರ ಮೂಲಕ ಸರ್ಕಾರಕ್ಕೆ ಕ್ರೋಢೀಕೃತ ಪ್ರಸ್ತಾವನೆ ಸಲ್ಲಿಸುವುದು.

ಇ) ಮೇಲ್ಕಂಡ ಸಹಾಯಧನ ಸೌಲಭ್ಯಗಳು ನೆರೆ ರಾಜ್ಯದ ಸಕ್ಕರೆ ಕಾರ್ಖಾನೆಗಳಿಗೆ ಸರಬರಾಜು ಮಾಡಲಾದ ಕಬ್ಬಿಗೂ ಸಹ ಅನ್ವಯಿಸುತ್ತದೆ.

ಈ) 12 ತಿಂಗಳಿಗೂ ಹೆಚ್ಚಿನ ಅವಧಿ ಪೂರೈಸಿದ, ಕಟಾವು ಆಗದೇ ಜಮೀನಿನಲ್ಲಿ ಉಳಿದಿರುವ ಪಕ್ವವಾದ ಕಬ್ಬಿಗೆ ಹೆಕ್ಟೇರ್‌ಗೆ ರೂ. 25,000/- ಸಹಾಯಧನವನ್ನು ಬಿಡುಗಡೆ ಮಾಡಲು ಜಿಲ್ಲಾಧಿಕಾರಿಯವರು ಸಂಬಂಧಪಟ್ಟ ವಲಯದ ಕೃಷಿ ಇಲಾಖೆ / ಕಂದಾಯ ಇಲಾಖೆ ಅಧಿಕಾರಿಗಳು ನೀಡುವ ವರದಿ / ಪ್ರಮಾಣಪತ್ರವನ್ನು ಆಧರಿಸಿ, ಕ್ರೋಢೀಕೃತ ಪ್ರಸ್ತಾವನೆಯನ್ನು ಕಬ್ಬು ಅಭಿವೃದ್ಧಿ ಆಯುಕ್ತರ ಮೂಲಕ ಸರ್ಕಾರಕ್ಕೆ ಸಲ್ಲಿಸುವುದು.

ಉ) ಸದರಿ ಸಹಾಯಧನವು 16.04.2007 ರಿಂದ 31.05.2007ರವರೆಗೆ ವಿಸ್ತರಿಸಿದ ಅವಧಿಯಲ್ಲಿ ಸಹಕಾರ ಸಕ್ಕರೆ ಕಾರ್ಖಾನೆ ಸದಸ್ಯರ ಸದಸ್ಯರ ನೋಂದಾಯಿಸಲ್ಪಟ್ಟ ಕಬ್ಬನ್ನು ಹಾಗೂ ಇತರೇ ಕಾರ್ಖಾನೆಗಳ ನೋಂದಾಯಿಸಲ್ಪಟ್ಟ ಕಬ್ಬನ್ನು ಹೊರತುಪಡಿಸಿ, ನುರಿಸಲ್ಪಟ್ಟ ಉಳಿದ ಕಬ್ಬಿಗೆ ಮಾತ್ರ ಅನ್ವಯವಾಗುತ್ತದೆ.

ಊ) ಸಹಾಯಧನ ಬಿಡುಗಡೆ ಮಾಡಿದ ನಂತರ ಕಬ್ಬು ಅಭಿವೃದ್ಧಿ ಆಯುಕ್ತರು ಬಳಕೆ ಪ್ರಮಾಣ ಪತ್ರವನ್ನು ಜಿಲ್ಲಾಧಿಕಾರಿಗಳಿಂದ ಪಡೆದು ಸರ್ಕಾರಕ್ಕೆ ಸಲ್ಲಿಸುವುದು.

ಋ) ಜಿಲ್ಲಾಧಿಕಾರಿಗಳ ಹಾಗೂ ಕಬ್ಬು ಅಭಿವೃದ್ಧಿ ಆಯುಕ್ತರ ಶಿಫಾರಸ್ಸಿನನ್ವಯ ಕಾಲಕಾಲಕ್ಕೆ ಹಣವನ್ನು ಸರ್ಕಾರದಿಂದ ಬಿಡುಗಡೆ ಮಾಡಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1135

**ಪಿ. ಆನಂದ್ ಕುಮಾರ್**

ಪೀಠಾಧಿಕಾರಿ (ಸಕ್ಕರೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ವಿಷಯ:** ಮೈಸೂರು ಸಕ್ಕರೆ ಕಾರ್ಖಾನೆ (ನಿ)., ಸಹವಿದ್ಯುತ್ ಘಟಕ ಸ್ಥಾಪನೆಗಾಗಿ ಡಿಬೆಂಚರ್‌ಗಳ ಮೂಲಕ 15 ಕೋಟಿ ರೂಗಳನ್ನು ಸಂಗ್ರಹಿಸಿದ್ದು ಡಿಬೆಂಚರ್ ಹೋಲ್ಡರ್ಸ್‌ಗಳಿಗೆ ಬಡ್ಡಿ ಹಣ ಪಾವತಿಸಲು ಹಣ ಬಿಡುಗಡೆ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ: ಸಿಐ 44 ಎಸ್‌ಜಿಎಫ್ 01 ದಿ: 13.08.2001.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಐ 70 ಎನ್‌ಜಿಎಫ್ 2002 ದಿ: 10.04.2002.
3. ತ್ರಿಪಕ್ಷೀಯ ಕರಾರು ದಿನಾಂಕ: 07.10.03.
4. ಆರ್ಥಿಕ ಇಲಾಖೆಯ ಸಹಮತಿ ಸಂಖ್ಯೆ: ಎಫ್‌ಡಿ/692/ವೆಚ್ಚ-1 ದಿ: 28.05.01.
5. ವ್ಯವಸ್ಥಾಪಕ ನಿರ್ದೇಶಕರು ಮೈಸೂರು ಸಕ್ಕರೆ ಕಾರ್ಖಾನೆ ರವರ ಪತ್ರ ಸಂಖ್ಯೆ: MSCO/06/ MD/DO (BIFR)/647 ದಿನಾಂಕ: 18.12.06.
6. ಕೆನರಾ ಬ್ಯಾಂಕ್, ಪತ್ರ ಸಂಖ್ಯೆ ಎಫ್‌ಎಂಡಬ್ಲ್ಯೂ/ಇಟಿಟಿ/ ಡಿಟಿ/431/1637/ಎಸ್‌ಕೆಎಸ್ ದಿನಾಂಕ: 03.04.07.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿರುವ ಸರ್ಕಾರದ ಆದೇಶದಲ್ಲಿ ಮತ್ತು (2)ರ ಸರ್ಕಾರದ ಅಧಿಸೂಚನೆಯಲ್ಲಿ ಮೈಸೂರು ಸಕ್ಕರೆ ಕಾರ್ಖಾನೆ (ನಿ) ಮಂಡ್ಯ, ಈ ಕಾರ್ಖಾನೆಯಲ್ಲಿ ಸಹವಿದ್ಯುತ್ ಘಟಕ ಸ್ಥಾಪನೆಗೆ ಸರ್ಕಾರದ ಗ್ಯಾರಂಟಿಯೊಂದಿಗೆ ಡಿಬೆಂಚರ್ ಮೂಲಕ 15 ಕೋಟಿ ರೂಗಳನ್ನು ಸಂಗ್ರಹಿಸಲು ಸರ್ಕಾರದ ಅನುಮತಿಯನ್ನು ನೀಡಲಾಗಿದೆ. ಈ ಸಂಬಂಧ ಉಲ್ಲೇಖ (3)ರ ಪ್ರಕಾರ ದಿನಾಂಕ: 07.10.03ರಂದು ತ್ರಿಪಕ್ಷೀಯ ಕರಾರನ್ನು ಕೆನರಾ ಬ್ಯಾಂಕ್‌ನೊಂದಿಗೆ ಮಾಡಿಕೊಳ್ಳಲಾಗಿದೆ.

ಮೇಲೆ ಓದಲಾದ (5)ರಲ್ಲಿರುವ ವ್ಯವಸ್ಥಾಪಕ ನಿರ್ದೇಶಕರು ಮೈಸೂರು ಸಕ್ಕರೆ ಕಾರ್ಖಾನೆರವರ ಪತ್ರದಲ್ಲಿ ಕಾರ್ಖಾನೆಯಲ್ಲಿ ಸ್ಥಾಪಿಸಲಾಗುತ್ತಿರುವ ಸಹ ವಿದ್ಯುತ್ ಘಟಕಕ್ಕೆ ಡಿಬೆಂಚರ್ ಮೂಲಕ ಸಂಗ್ರಹಿಸಲಾದ ಹಣಕ್ಕೆ ದಿನಾಂಕ: 31.03.2005, 31.03.06, 31.03.07ರ ಅಂತ್ಯಕ್ಕೆ ಡಿಬೆಂಚರ್ ಹೋಲ್ಡರ್‌ಗಳಿಗೆ ವಾರ್ಷಿಕ 1,67,53,800/- ಕೋಟಿ ರೂಗಳನ್ನು ಬಡ್ಡಿ ರೂಪದಲ್ಲಿ ನೀಡಬೇಕಾಗಿದ್ದು, ಮೂರು ವರ್ಷದ ಬಡ್ಡಿ ಸೇರಿ ಈ ಮೊತ್ತವು ಒಟ್ಟು 5,02,61,400/- ರೂಗಳಾಗಿದ್ದು, ಈ ಹಣ ಬಾಕಿ ಉಳಿದಿದೆ ಎಂದು ತಿಳಿಸಿ ಡಿಬೆಂಚರ್ ಹೋಲ್ಡರ್‌ಗಳು ಗ್ಯಾರಂಟಿ ಇನ್‌ವೋಕ್ ಮಾಡಿದಲ್ಲಿ ಅಸಲು ಮತ್ತು ಬಡ್ಡಿಯನ್ನು ಪಾವತಿಸಬೇಕಾಗುತ್ತದೆ ಎಂದು ತಿಳಿಸಿದ್ದಾರೆ.

ಮೇಲೆ ಓದಲಾದ (6)ರಲ್ಲಿರುವ ಪತ್ರದಲ್ಲಿ ಕೆನರಾ ಬ್ಯಾಂಕ್ ಬೆಂಗಳೂರು ಶಾಖೆಯ ಡಿಬೆಂಚರ್ ಟ್ರಸ್ಟಿ ಡಿಪಾರ್ಟ್‌ಮೆಂಟ್‌ನ ಜನರಲ್ ಮ್ಯಾನೇಜರ್‌ರವರು ಮೈಸೂರು ಸಕ್ಕರೆ ಕಾರ್ಖಾನೆಯು ಡಿಬೆಂಚರ್ ಮೂಲಕ ಹಣ ಸಂಗ್ರಹಿಸಲು ಸರ್ಕಾರವು ಗ್ಯಾರಂಟಿ ಒದಗಿಸಿದ್ದು, ಮೈಸೂರು ಸಕ್ಕರೆ ಕಾರ್ಖಾನೆಯು ಡಿಬೆಂಚರ್ ಹೋಲ್ಡರ್‌ಗಳಿಗೆ ಕಳೆದ 3 ವರ್ಷಗಳಿಂದ ನೀಡಬೇಕಾದ ಬಡ್ಡಿ ಹಣ ಪಾವತಿಸದೇ ಇರುವುದರಿಂದ ಸರ್ಕಾರವು ನೀಡಲಾದ ಗ್ಯಾರಂಟಿಯನ್ನು ಇನ್‌ವೋಕ್ ಮಾಡಲಾಗಿದೆ ಎಂದು ತಿಳಿಸಿ 15 ದಿನಗಳೊಳಗಾಗಿ ಡಿಬೆಂಚರ್ ಹಣವನ್ನು ಬಡ್ಡಿಯೊಂದಿಗೆ ಪಾವತಿಸಲು ತಪ್ಪಿದ್ದಲ್ಲಿ ಕಾನೂನು ಕ್ರಮ ಜರುಗಿಸಲಾಗುವುದೆಂದು ಪತ್ರ ಬರೆದಿರುತ್ತಾರೆ.

ವಿಷಯವನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿದ್ದು, ಡಿಬೆಂಚರ್ ಹೋಲ್ಡರ್ಸ್‌ಗಳಿಗೆ ಬಡ್ಡಿ ಹಣ ಪಾವತಿಸಲು 5.02 ಕೋಟಿ ರೂಗಳನ್ನು ಬಿಡುಗಡೆಗೊಳಿಸಲು ಈ ಕೆಳಕಂಡಂತೆ ಆಡಳಿತಾತ್ಮಕ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 34 ಎಸ್‌ಜಿಎಫ್ 2005 (ಭಾ-2) ದಿನಾಂಕ: 11.06.2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಮೈಸೂರು ಸಕ್ಕರೆ ಕಾರ್ಖಾನೆ (ನಿ), ಮಂಡ್ಯ ಈ ಕಾರ್ಖಾನೆಗೆ ಸಹ ವಿದ್ಯುತ್ ಘಟಕ ಸ್ಥಾಪನೆಗಾಗಿ ಡಿಬೆಂಚರ್‌ಗಳ ಮೂಲಕ ಸಂಗ್ರಹಿಸಲಾದ 15 ಕೋಟಿ ರೂಗಳಿಗೆ 31.03.2005, 31.03.06 ಮತ್ತು 31.03.07ಕ್ಕೆ ಡಿಬೆಂಚರ್ ಹೋಲ್ಡರ್ಸ್‌ಗಳಿಗೆ ಬಡ್ಡಿ ಪಾವತಿಸಲು ಬೇಕಾದ 5.02 ಕೋಟಿ ರೂಗಳನ್ನು ಸಂಬಂಧಪಟ್ಟ ಬ್ಯಾಂಕಿಗೆ ವರ್ಗಾಯಿಸುವ ಸಂಬಂಧ ಹಣ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

2007-08ನೇ ಸಾಲಿನ ಅನುದಾನದಲ್ಲಿ ಈ ಉದ್ದೇಶಕ್ಕಾಗಿ ಯಾವುದೇ ಹಣವನ್ನು ಒದಗಿಸಿರುವುದಿಲ್ಲ. ಆದುದರಿಂದ ಮೊದಲಿಗೆ ಈ ಹಣವನ್ನು ಸಾದಿಲ್ವಾರು ನಿಧಿಯಿಂದ ಭರಿಸಿ ನಂತರ ಇದನ್ನು ಮರು ಭರಣ ಮಾಡಬೇಕಾಗಿದೆ. ಈ ಹಣವನ್ನು ಸಾದಿಲ್ವಾರು ಲೆಕ್ಕ ಶೀರ್ಷಿಕೆ "8000-00-673-0-00 ಕೈಗಾರಿಕೆಗಳು" ಇದರಡಿ ಭರಿಸಿ ನಂತರ ಈ ಹಣವನ್ನು ಲೆಕ್ಕ ಶೀರ್ಷಿಕೆ 6860-04-190-2-01-395 (ಪಿ) ಸಾರ್ವಜನಿಕ ಉದ್ದಿಮೆಗಳಿಗೆ ಮತ್ತು ಸ್ಥಳೀಯ ಸಂಸ್ಥೆಗಳಿಗೆ ಸಾಲಗಳು ಇದರಿಂದ ಬಿಡುಗಡೆ ಮಾಡಿ ನಂತರ ಸಾದಿಲ್ವಾರು ನಿಧಿಗೆ ಮರು ಭರಣ ಮಾಡುವದು.

ಸಾದಿಲ್ವಾರು ನಿಧಿಯಿಂದ ಈ ಹಣವನ್ನು ಬಿಡುಗಡೆಗೊಳಿಸಲು ಆರ್ಥಿಕ ಇಲಾಖೆಯು ಪ್ರತ್ಯೇಕ ಆದೇಶವನ್ನು ಹೊರಡಿಸಿಲಿದೆ. ಆ ನಂತರವೇ ಹಣ ಬಿಡುಗಡೆಗೆ ಕ್ರಮವಹಿಸಬೇಕು. ಹಣ ಸೆಳೆಯುವ ಅಧಿಕಾರಿಯವರು ಸಾದಿಲ್ವಾರು ನಿಧಿಯಿಂದ ಹಣ ಸೆಳೆಯಲು ಬಿಲ್ಲನ್ನು ಆರ್ಥಿಕ ಇಲಾಖೆಯಿಂದ ಹೊರಡಿಸುವ ಪ್ರತ್ಯೇಕ ಆದೇಶವನ್ನು ಈ ಆದೇಶದೊಂದಿಗೆ ಲಗತ್ತಿಸಿ ಸಲ್ಲಿಸಿದ ನಂತರ ಹಣ ಬಿಡುಗಡೆಗೆ ಖಜಾನೆ ಕ್ರಮವಹಿಸುವುದು.

ಹಣ ಸೆಳೆಯುವ ಅಧಿಕಾರಿಯು ಸಹಾಯಕ ನಿರ್ದೇಶಕರು (ಹೆಚ್.ಆರ್.ಡಿ. ಆಡಳಿತ ಮತ್ತು ಇಎಂ) ಜಿಲ್ಲಾ ಕೈಗಾರಿಕಾ ಕೇಂದ್ರ ಮಂಡ್ಯ ಆಗಿದ್ದು ಸದರಿಯವರು ಹಣ ಸೆಳೆಯುವ ಬಿಲ್ಲನ್ನು ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬೆಂಗಳೂರು ಇವರ ಮೇಲು ಸಹಿಯೊಂದಿಗೆ ಖಜಾನೆಗೆ ಸಲ್ಲಿಸಬೇಕು.

ಸದರಿ ಸಾಲದ ಹಣದ ಮರುಪಾವತಿ ಹಾಗೂ ಇನ್ನಿತರೇ ಅಂಶಗಳು, ಷರತ್ತು ಹಾಗೂ ನಿಬಂಧನೆಗಳ ಬಗ್ಗೆ ಪ್ರತ್ಯೇಕ ಆದೇಶವನ್ನು ನಂತರ ಹೋಗಲಾಡಿಸಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 628 ವೆಚ್ಚ-1/07 ದಿನಾಂಕ: 01.06.2007ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1134

**ಪಿ. ಆನಂದ್ ಕುಮಾರ್**
ಪೀಠಾಧಿಕಾರಿ (ಸಕ್ಕರೆ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ವಿಷಯ:** ಶ್ರೀ ಹೆಚ್.ಆರ್. ಜಯದೇವಪ್ಪ ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಶ್ರೀ ಎಂ. ರಾಮಕೃಷ್ಣ ಸಹಾಯಕ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಹಾಗೂ ಶ್ರೀ ಬಿ.ಟಿ. ರಾಧಾಕೃಷ್ಣ, ಅಂದಿನ ಅಧೀಕ್ಷಕರು, ಕರ್ನಾಟಕ ರಾಜ್ಯ ತೆಂಗಿನ ನಾರಿನ ಸಹಕಾರ ಮಹಾಮಂಡಳಿ ನಿಗಮ ನಿಯಮಿತ, ಇವರುಗಳು ಕರ್ನಾಟಕ ರಾಜ್ಯ ತೆಂಗಿನ ನಾರಿನ ಸಹಕಾರ ಮಹಾಮಂಡಳಿ ನಿಗಮ ನಿಯಮಿತ, ಬೆಂಗಳೂರು, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿರುವ ಆರೋಪಗಳಿಗೆ ಸಂಬಂಧಿಸಿದಂತೆ ಪರಿಷ್ಕೃತ ಇಲಾಖಾ ವಿಚಾರಣೆ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1 ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಸಿಓಎಂಪಿಟಿ/ಲೋಕ್/ಬಿಸಿಡಿ/256/2002-ಎಆರ್‌ಇ-5/ದಿನಾಂಕ: 08.02.2006.
2 ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಸಿಓಎಂಪಿಟಿ/ಲೋಕ್/ಬಿಸಿಡಿ/256/2002-03/ ದಿನಾಂಕ: 14.02.2006.

3 ಸರ್ಕಾರಿ ಆದೇಶ ಸಂಖ್ಯೆ: ವಾಕೈ 45 ಕೈಸೇವಿ 2006, ದಿ: 25.05.2006.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ರವರು ಶ್ರೀ ಹೆಚ್.ಆರ್. ಜಯದೇವಪ್ಪ, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಶ್ರೀ ಎಂ. ರಾಮಕೃಷ್ಣ, ಸಹಾಯಕ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಶ್ರೀ ಬಿ.ಟಿ. ರಾಧಾಕೃಷ್ಣ, ಅಂದಿನ ಅಧೀಕ್ಷಕರು, ಕರ್ನಾಟಕ ರಾಜ್ಯ ತೆಂಗಿನ ನಾರಿನ ಸಹಕಾರ ಮಹಾಮಂಡಳಿ, ಇವರುಗಳು, ಕರ್ನಾಟಕ ರಾಜ್ಯ ತೆಂಗಿನ ನಾರಿನ ಸಹಕಾರಿ ಮಹಾಮಂಡಳಿ, ಬೆಂಗಳೂರು, ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಕರ್ತವ್ಯ ಲೋಪ, ಹಣ ದುರುಪಯೋಗ ಹಾಗೂ ನಿಯಮಬಾಹಿರ ಕ್ರಮ ಕೈಗೊಂಡಿರುತ್ತಾರೆಂದು ಶ್ರೀ ಬೋರೇಗೌಡ, ಅಂದಿನ ವ್ಯವಸ್ಥಾಪಕರು ಕರ್ನಾಟಕ ರಾಜ್ಯ ತೆಂಗಿನ ನಾರಿನ ಸಹಕಾರ ಮಹಾಮಂಡಳಿ ನಿಗಮ (ನಿ), ಹಾಗೂ ಶ್ರೀ ಎಸ್.ಎಲ್. ಧನಂಜೇಗೌಡ, ಅಂದಿನ ವ್ಯವಸ್ಥಾಪಕರು, ತೆಂಗಿನ ನಾರಿನ ಎಂಪೋರಿಯಮ್ ಚಿಕ್ಕಮಗಳೂರು ಇವರುಗಳು ನೀಡಿದ ಅಂದಿನ ಹಿನ್ನೆಲೆಯಲ್ಲಿ ಕರ್ನಾಟಕ ಲೋಕಾಯುಕ್ತ ಕಛೇರಿಯವರು ಈ ದೂರಿನ ಬಗ್ಗೆ ಪೂರ್ವಭಾವಿ ತನಿಖೆ ನಡೆಸಿ, ತನಿಖಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಮುಂದುವರಿದು, ಉಲ್ಲೇಖ (2)ರ ಲೋಕಾಯುಕ್ತರವರ ಪತ್ರದಲ್ಲಿ ಮೇಲ್ಕಂಡ 4 ಅಧಿಕಾರಿಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು ನಿಯಮ 14 (ಎ)ರ ಪ್ರಕಾರ ಇಲಾಖಾ ವಿಚಾರಣೆ ನಡೆಸಲು ಲೋಕಾಯುಕ್ತ ಕಛೇರಿಗೆ ಈ ಪ್ರಕರಣವನ್ನು ವಹಿಸುವಂತೆ ಕೋರಿರುತ್ತಾರೆ.

ಉಲ್ಲೇಖ (3)ರ ಸರ್ಕಾರಿ ಆದೇಶ ಸಂಖ್ಯೆ: ವಾಕೈ 45 ಕೈಸೇವಿ 2006 ದಿ: 25.05.2006ರಲ್ಲಿ ಶ್ರೀ ಹೆಚ್.ಆರ್. ಜಯದೇವಪ್ಪ, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಶ್ರೀ ಬಿ.ಟಿ. ರಾಧಾಕೃಷ್ಣ, ಅಂದಿನ ಅಧೀಕ್ಷಕರು, ಕರ್ನಾಟಕ ರಾಜ್ಯ ತೆಂಗಿನ ನಾರಿನ ಸಹಕಾರ ಮಹಾಮಂಡಳಿ ನಿಗಮ ನಿಯಮಿತ, ಶ್ರೀ ಎಂ. ರಾಮಕೃಷ್ಣ, ಸಹಾಯಕ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರುಗಳು ಕರ್ನಾಟಕ ರಾಜ್ಯ ತೆಂಗಿನ ನಾರಿನ ಸಹಕಾರ ಮಹಾಮಂಡಳಿ ನಿಗಮ ನಿಯಮಿತ, ಇಲ್ಲಿ ಕಾರ್ಯನಿರ್ವಹಿಸುತ್ತಿರುವ ಅವಧಿಯಲ್ಲಿ ಕರ್ತವ್ಯ ಲೋಪ ಎಸಗಿರುವ ಆರೋಪಗಳ ಬಗ್ಗೆ ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು 1957ರ ನಿಯಮ 14 (ಎ)ರ ಪ್ರಕಾರ ಈ ಪ್ರಕರಣವನ್ನು ಮಾನ್ಯ ಲೋಕಾಯುಕ್ತ, ಕರ್ನಾಟಕ, ಬೆಂಗಳೂರು, ಇವರಿಗೆ ವಹಿಸಿ ಅದೇಶಿಸಲಾಗಿತ್ತು.

ಸರ್ಕಾರವು ದಿ: 25.05.2006ರಂದು ಹೊರಡಿಸಿದ ಸರ್ಕಾರದ ಆದೇಶದಲ್ಲಿ ಹೆಸರಿಸಿದ ನೌಕರರಾದ ಶ್ರೀ ಬಿ.ಟಿ. ರಾಧಾಕೃಷ್ಣ, ಅಂದಿನ ಅಧೀಕ್ಷಕರು, ಇವರು, ಕರ್ನಾಟಕ ರಾಜ್ಯ ತೆಂಗಿನ ನಾರಿನ ಸಹಕಾರ ಮಹಾಮಂಡಳಿ ನಿಗಮ ನಿಯಮಿತ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ಹಾಗೂ ಇವರು ಮಹಾಮಂಡಳಿಯ ನೌಕರರಾಗಿದ್ದು ಸರ್ಕಾರಿ ನೌಕರರಲ್ಲವಾದ್ದರಿಂದ, ಸರ್ಕಾರದ ವತಿಯಿಂದ ಶಿಸ್ತಿನ ಕ್ರಮ ಕೈಗೊಳ್ಳಲು ಅವಕಾಶವಿಲ್ಲ ಎಂಬ ಅಂಶವನ್ನು ಪರಿಗಣಿಸಿ ಈ ತಾಂತ್ರಿಕ ದೋಷದಿಂದ ದಿ: 25.05.2006ರ ಆದೇಶವನ್ನು ಮಾರ್ಪಡಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಪರಿಷ್ಕೃತ ಇಲಾಖಾ ವಿಚಾರಣಾ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 45 ಕೇಸೇವಿ 2006, ಬೆಂಗಳೂರು, ದಿನಾಂಕ: 28.05.2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ವಾಕೈ 45 ಕೈಸೇವಿ 2006, ದಿ: 25.05.2006ರನ್ನು ಭಾಗಶಃ ಮಾರ್ಪಡಿಸಿ ಶ್ರೀ ಹೆಚ್.ಆರ್. ಜಯದೇವಪ್ಪ ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಶ್ರೀ ಎಂ. ರಾಮಕೃಷ್ಣ, ಸಹಾಯಕ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರುಗಳು ಈ ಹಿಂದೆ ಕರ್ನಾಟಕ ರಾಜ್ಯ ತೆಂಗಿನ ನಾರಿನ ಸಹಕಾರ ಮಹಾಮಂಡಳಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಕರ್ತವ್ಯ ಲೋಪ, ಹಣ ದುರುಪಯೋಗ ಹಾಗೂ ನಿಯಮಬಾಹಿರ ಕ್ರಮ ಕೈಗೊಂಡಿರುವುದರಿಂದ ಇವರ ವಿರುದ್ಧ ಕರ್ನಾಟಕ ನಾಗರೀಕಾ ಸೇವಾ (ಸಿಸಿಎ) ನಿಯಮಾವಳಿಗಳು 1957ರ ನಿಯಮ 11ರಡಿ ಇಲಾಖಾ ವಿಚಾರಣೆ ನಡೆಸಲು, ಈ ಪ್ರಕರಣವನ್ನು ಇದೇ ನಿಯಮಾವಳಿಗಳು ನಿಯಮ 14 (ಎ)ರನ್ವಯ ಮಾನ್ಯ ಲೋಕಾಯುಕ್ತ ಕರ್ನಾಟಕ ಬೆಂಗಳೂರು ಇವರಿಗೆ ವಹಿಸಿ ಆದೇಶಿಸಿದೆ.

ಶ್ರೀ ಬಿ.ಟಿ. ರಾಧಾಕೃಷ್ಣ, ಅಂದಿನ ಅಧೀಕ್ಷಕರು, ಕರ್ನಾಟಕ ರಾಜ್ಯ ತೆಂಗಿನ ನಾರಿನ ಸಹಕಾರ ಮಹಾಮಂಡಳಿ ನಿಗಮ ನಿಯಮಿತ, ಬೆಂಗಳೂರು, ಇವರು ಸರ್ಕಾರಿ ನೌಕರರಾಗಿಲ್ಲದ ಕಾರಣದಿಂದ ಇವರ ಮೇಲಿನ ಆರೋಪಗಳ ಬಗ್ಗೆ ವಿಚಾರಣೆಯನ್ನು ಸೂಕ್ತ ಪ್ರಾಧಿಕಾರದಿಂದ ನಡೆಸಲು ಕ್ರಮ ಕೈಗೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1078

**ಎಲ್.ಎಸ್. ವಾಸನ್**

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

(ಸೇವೆಗಳು)